ಮಿಂಚಿನಬಳ್ಳಿಯ ೧೫ನೇ ವರ್ಷದ ೪ನೆಯ ಹಾಗೂ ೧೯ನೇ ವರ್ಷದ ೧ನೇ ಕುಡಿ.

# ಶ್ರೀ ಪ್ರಸನ್ನ ವೆಂಕಟದಾಸರು

ಮತ್ತು

## ಅವರ ಕೃತಿಗಳು

ಲೇಖಕರು :

**ಡಾ. ಎ. ಟಿ. ಪಾಟೀಲ,**

ಎಂ. ಎ., ಪಿಎಚ್. ಡಿ.

ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ

೧೩—೧೦—೧೯೫೬

**ಉತ್ತಮ ಪ್ರತಿ ೫-೦-೦** **ಸಾದಾ ಪ್ರತಿ ೪-೦-೦**

ಮಿಂಚಿನಬಳ್ಳಿಯ ೧೮ನೇ ವರುಷದ ನಾಲ್ಕನೆ ಹಾಗೂ ೧೯ ವರ್ಷದ ಮೊದಲನೆ ಕುಡಿ.

# ಶ್ರೀಪ್ರಸನ್ನ ವೆಂಕಟದಾಸರು

ಮತ್ತು

# ಅವರ ಕೃತಿಗಳು



ಲೇಖಕರು:

ಡಾ|| ಎ. ಟಿ. ಪಾಟೀಲ,
M. A., PH. D.



ಮಿಂಚಿನಬಳ್ಳಿಯ ಕಾರ್ಯಾಲಯ,
ಧಾರವಾಡ.

೧೩—೧೦—೧೯೫೬

ಉತ್ತಮ ಪ್ರತಿ
೩—೦—೦

ಸಾದಾ ಪ್ರತಿ
೪—೦—೦

ಪ್ರಕಾಶಕರು :
ಬುರ್ಲಿ ಬಿಂದುಮಾಧವ
ಮಿಂಚಿನಬಳ್ಳಿ ಕಾರ್ಯಾಲಯ
ಜವಳೀಪೇಟೆ, ಧಾರವಾಡ.



---

**ಮುಂಬರಲಿರುವ ಪ್ರಕಟನೆ :**

**೧. ಲೋಕಮಾನ್ಯ ಟಿಳಕರು** ( ಸುಮಾರು ೩೫೦ ಪುಟ )

---

ಮೊದಲ ಮುದ್ರಣ ೧೯೫೬.

ಮುದ್ರಕರು:
ಬಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ
ಭಗತಸಿಂಗಬೀದಿ, ಧಾರವಾಡ.



ಶ್ರೀಪ್ರಸನ್ನ ವೆಂಕಟದಾಸರು ದಿನಾಲು ಅರ್ಚಿಸುತ್ತಿದ್ದ ಶ್ರೀದೇವಿ ಭೂದೇವಿಯರು
ಸಹಿತವಾದ ಶ್ರೀ ವೆಂಕಟೇಶ ಮೂರ್ತಿಯು ಹಾಗು ಗೋಪಾಳಬುಟ್ಟಿ, ಶಂಖ,
ತಂಬೂರಿ ಮತ್ತು ಬೆಳ್ಳಿಯ ಕಟ್ಟಿನ ಬಡಿಗೆ.

(ಶ್ರೀ. ಆರ್. ಎಸ್. ಪಂಚಮುಖಿಯವರ ಕೃಪೆಯಿಂದ)

# ಅ ರ್ಪ ಣೆ.

" ನೀನು ಕನ್ನಡಿಗ "

ಎಂದು ಅರುಹಿದ

**ಶ್ರೀ. ಆರ್. ಪಿ. ಕುಲಕರ್ಣಿ,**

B. A. LL. B., B. T. (1st Class)

ಇವರ ಅಡಿದಾವರೆಯಲ್ಲಿ

|| ಹರಿಃ ಓಂ ||

# ಎರಡು ಮಾತುಗಳು.

---

ನವಕರ್ನಾಟಕದ ಸುಪ್ರಭಾತದ ಈ ಮಂಗಲ ಸಮಯದಲ್ಲಿ ಮಹಾ ಭಗವದ್ಭಕ್ತರೂ ಅಪರೋಕ್ಷಜ್ಞಾನಿಗಳೂ ಆದ ಶ್ರೀಪ್ರಸನ್ನ ವೆಂಕಟದಾಸರ ಕೃತಿಗಳೂ ಅವರ ಚರಿತ್ರೆಯೂ ಪ್ರಕಟವಾಗುತ್ತಿರುವುದು ನಮ್ಮ ನಾಡಿನ ಭಾಗ್ಯ ವೆಂದೇ ನಾನು ತಿಳಿಯುತ್ತೇನೆ. ಶ್ರೀಹರಿಯು ಬಹು ದಿನದ ಸಂಕಲ್ಪವನ್ನು ಈಡೇರಿಸುತ್ತಿರುವದನ್ನು ಕಂಡು ಸಂತೋಷವಾಗುತ್ತಲಿದೆ. ಶ್ರೀ. ಕೌಜಲಗಿ ಬಂಡೆಪ್ಪನವರು ಶ್ರೀಪ್ರಸನ್ನ ವೆಂಕಟರ ಭಾಗವತ ಹಾಗು ಅವರ ಕೀರ್ತನೆ ಗಳನ್ನು ಪ್ರಕಟಿಸಿ ಅವರ ದರ್ಶನ ಮಾಡಿಸಿದಂದಿನಿಂದ, ಶ್ರೀಪ್ರಸನ್ನ ವೆಂಕಟರ ಕೀರ್ತನೆಗಳೆಲ್ಲ ಸಂಶೋಧನೆಯಾಗಿ ಬೆಳಕಿಗೆ ಬರಬೇಕೆಂಬ ಇಚ್ಛೆಯು ನನ್ನಲ್ಲಿ ಮೂಡಿತು. ನಾನು ಅದೇ ಊರಲ್ಲಿ ಹುಟ್ಟಿ ಇಂತಹ ಮಹಾಮಹಿಮರ ಬಗೆಗೆ ಏನೂ ನನಗೆ ಗೊತ್ತಿಲ್ಲವಲ್ಲವೆಂದು ನನ್ನ ಮನಸ್ಸಿಗೆ ಬಹು ದುಃಖವಾಯಿತು. ಅವರ ಕೀರ್ತನೆಗಳನ್ನು ಬೆಳಕಿಗೆ ತರುವದು ಕರ್ತವ್ಯವೆನಿಸಹತ್ತಿತು. ಒಂದು ಬಗೆಯ ಋಣವೆನಿಸಹತ್ತಿತು. ಬಾಗಿಲಕೋಟೆಯಲ್ಲಿಯ ಅವರ ಮನೆಯ ಮುಂದೆ ಹೋಗುವಾಗಲೆಲ್ಲ ಈ ಮಾತು ನೆನಪಾಗಿ, ಅವರ ಮನೆ ಹೊಕ್ಕು ಅವರು ಪೂಜಿಸಿದ ದೇವರ ದರ್ಶನ ತೆಗೆದುಕೊಂಡು, ನನ್ನಿಂದ ಈ ಸೇವೆಯನ್ನು ತೆಗೆದು ಕೊಳ್ಳಲು ಪ್ರಾರ್ಥಿಸುತ್ತಿದ್ದೆ. ಆ ಪ್ರಾರ್ಥನೆಯ ಫಲವಾಗಿ ವಿಜಯಾದಶಮಿಯ ಈ ಶುಭಮುಹೂರ್ತದಲ್ಲಿ "ಶ್ರೀಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿ ಗಳು" ಎಂಬ ಗ್ರಂಥವು ಪ್ರಕಟವಾಗುತ್ತಿರುವದು ಶ್ರೀಹರಿಯ ಕರುಣೆಯೋ, ಗುರುಗಳ ಕೃಪೆಯೋ !

ಇಂದು ಮಿಂಚಿನಬಳ್ಳಿಯ ಹುಟ್ಟುಹಬ್ಬ. ೧೪ ವರ್ಷಗಳು ಮುಗಿದು ೧೫ನೇವರ್ಷದಲ್ಲಿ ಅದು ಕಾಲಿಡುತ್ತಲಿದೆ; ಹಿರಿಯರ ಆಶೀರ್ವಾದಕ್ಕಾಗಿ ತಲೆಬಾಗುತ್ತಲಿದೆ. ಮಾರ್ಗದರ್ಶನಕ್ಕಾಗಿ, ಹಿರಿಯ ಜ್ಞಾನಿಗಳಿಗೆ ಪ್ರಾರ್ಥಿಸುತ್ತಲಿದೆ; ಹೊಸ ಹುರುಪಿನ ಹೊಸ ತರುಣರ ನೆರವಿನಿಂದ ಮುನ್ನುಗ್ಗುವ ಆಲೋಚನೆಗಳನ್ನು ಮಾಡುತ್ತಲಿದೆ. ಎಲ್ಲವೂ ಶ್ರೀಹರಿಯ ಒಲುಮೆಯನ್ನೇ ಅವಲಂಬಿಸಿದೆ. ಮಾಡುವವನು ಅವನೇ ! ಮಾಡಿಸುವವನೂ ಅವನೇ !

ಸ್ವಸಂಸ್ಕೃತಿ, ಸ್ವಭಾಷೆ, ಸ್ವಧರ್ಮಗಳ ಸದಭಿಮಾನ ತಾಳುವದು ರಾಷ್ಟ್ರದ ಜಾಗೃತಿಯ ಲಕ್ಷಣ. ಮೂರು ನಾಲ್ಕು ದಶಕಗಳಿಂದ ಕನ್ನಡ ನಾಡು ಜಾಗೃತವಾಗಿ ತನ್ನ ಸಾಹಿತ್ಯ, ತನ್ನ ಸಂಸ್ಕೃತಿಗಳ ಬಗ್ಗೆ ಅಭಿಮಾನ ತಾಳಹತ್ತಿದೆ. ಕೃತಿಗೆ ಇಳಿಯುಹತ್ತಿದೆ; ಕನ್ನಡ ಇತಿಹಾಸ ಸಂಶೋಧನ ಸಂಸ್ಥೆಯ ಡಾಯರೆಕ್ಟರರಿದ್ದಾಗ, ಶ್ರೀ. ವಿದ್ಯಾರತ್ನ ಪಂಚಮುಖಿ ರಾಘವೇಂದ್ರಾಚಾರ್ಯರು ಅನೇಕ ತರುಣರಿಗೆ ದಾಸಸಾಹಿತ್ಯವನ್ನು ಆಳವಾಗಿ ಅಭ್ಯಸಿಸಲು ಪ್ರಚೋದಿಸಿ, ಕನ್ನಡ ನಾಡಿಗೆ ಬಹು ಉಪಕಾರವನ್ನು ಮಾಡಿದ್ದಾರೆ. ಶ್ರೀ. ಅನಂತರಾವ ಪಾಟೀಲರಿಗೆ ಶ್ರೀಪ್ರಸನ್ನ ವೆಂಕಟರ ಬಗ್ಗೆ ಅಭ್ಯಾಸ ಮಾಡಿ ಪ್ರಬಂಧವನ್ನು ಬರೆದು, ಪಿಎಚ್. ಡಿ. ಪದವಿಯನ್ನು ದೊರಕಿಸಬೇಕೆಂದು ಪ್ರೇರೇಪಿಸಿದವರು ಶ್ರೀ. ಪಂಚಮುಖಿಯವರೇ !

ಅವರ ಪ್ರೇರಣೆಯಿಂದ ಶ್ರೀ. ಅನಂತರಾಯರು ಪರಿಶ್ರಮಪಟ್ಟು ಶ್ರೀ ಪ್ರಸನ್ನ ವೆಂಕಟರ ಅನೇಕ ಕೃತಿಗಳನ್ನು ಬೆಳಕಿಗೆ ತಂದು ಅವರ ಅನುಗ್ರಹದಿಂದ ಪದವೀಧರರಾಗಿದ್ದಾರೆ.

ಈ ಪ್ರಬಂಧವಲ್ಲಿ ಭಾರತದಲ್ಲಿಯ ಭಕ್ತಿಯ ಬೆಳವಣಿಗೆಯನ್ನು ಕಾಣಬಹುದು. ದಾಸಕೂಟದ ಸಂಕ್ಷಿಪ್ತ ಚರಿತೆಯನ್ನು ನೋಡಬಹುದು. ಮಹಾಮಹಿಮರಾದ ಶ್ರೀಪ್ರಸನ್ನ ವೆಂಕಟರ ಅದ್ಭುತರಮ್ಯ ಕಥೆ ಕಂಡು ಬೆರಗಾಗಬಹುದು. ಶ್ರೀಮಧ್ವ ಮತದ ದರ್ಶನವಾಗುವದು. ಪ್ರಸನ್ನ ವೆಂಕಟರ ಕೃತಿಗಳಲ್ಲಿಯ ಜ್ಞಾನ, ಭಕ್ತಿ, ವೈರಾಗ್ಯಗಳೂ ಹಿತೋಪದೇಶವೂ ನಮ್ಮನ್ನು ಕ್ಷಣ ಹೊತ್ತು ಆನಂದಮಯಲೋಕಕ್ಕೆ ಕರೆದೊಯ್ಯುವದನ್ನು ಕಾಣಬಹುದು. ಶ್ರೀ

ಪ್ರಸನ್ನ ವೆಂಕಟರ ಇತರ ಕೃತಿಗಳ ಪರಿಚಯುವೂ ಆಗುವದು. ಒಟ್ಟಿನಲ್ಲಿ ಶ್ರೀ ಪ್ರಸನ್ನ ವೆಂಕಟರ ದರ್ಶನವನ್ನು ಎಲ್ಲ ನಿಟ್ಟಿನಿಂದ ಮಾಡಿಸಲು ಪಾಟೀಲರು ಪ್ರಯತ್ನಪಟ್ಟಿದ್ದಾರೆ. ಶ್ರೀ ಪ್ರಸನ್ನ ವೆಂಕಟರೂ ಬಯಲು ಸೀಮೆಯುವರು. ಪಾಟೀಲರೂ ಅಲ್ಲಿಯವರೇ! ನಿರಾಡಂಬರವಾದ ಸರಳ ಶೈಲಿಯಲ್ಲಿ ಬರೆಯಲು ಯತ್ನಿಸಿದ್ದಾರೆ. ಭಾಷೆಯ ಬೆಡಗಿಗಿಂತ ಅವರ ಸರಳ ನಿರ್ಮಲ ಹೃದಯವು ಪ್ರತಿಬಿಂಬಿಸಿದೆ. ಈ ದೃಷ್ಟಿಯಿಂದಲೇ ಇವರ ಕಡೆಗೆ ನೋಡಬೇಕು. ಅವರು ಪಟ್ಟ ಶ್ರಮ ನೋಡಿದರೆ ಗಾಬರಿಯಾಗುವದು. ದಾಸ ಸಾಹಿತ್ಯ ದೊರಕಿಸು ವದು ಸುಲಭವಲ್ಲವೆಂಬ ಅರಿವು ಉಂಟಾಗುವದು. ಇನ್ನೂ ಕೆಲಕಾಲ ಕಳೆದರೆ ಎಲ್ಲವೂ ಕೈಬಿಡುವದೆಂದು ಅನಿಸಿ, ಈ ಜ್ಞಾನಭಂಡಾರವನ್ನು ಉಳಿಸುವ ಪ್ರಯತ್ನ ಗಳು ತೀವ್ರ ಗತಿಯಿಂದ ಸಾಗಬೇಕೆನಿಸುತ್ತದೆ. ಕನ್ನಡಿಗರು ಈ ಕೃತಿಯ ಉಪ ಯೋಗವನ್ನು ಯೋಗ್ಯರೀತಿಯಿಂದ ಮಾಡಿಕೊಳ್ಳುವರೆಂದು ನಾನು ನಂಬಿದ್ದೇನೆ.

ತಮ್ಮ ಶ್ರಮದ ಫಲವನ್ನು ಶ್ರೀ. ಪಾಟೀಲ ಅನಂತರಾಯರು ಮಿಂಚಿನ ಬಳ್ಳಿಗೆ ಪ್ರಕಟಿಸಲು ಕೊಟ್ಟಿದ್ದಕ್ಕಾಗಿ ಅವರಿಗೆ ಮಿಂಚಿನಬಳ್ಳಿಯು ಋಣಿಯಾ ಗಿದೆ. ಶ್ರೀ. ವಿದ್ಯಾರತ್ನ ಪಂಚಮುಖಿಯುವರು ಮುನ್ನುಡಿ ಬರೆದುಕೊಟ್ಟು ನಮ್ಮ ಮೇಲೆ ಬಹು ಉಪಕಾರ ಮಾಡಿದ್ದಾರೆ. ಶ್ರೀ. ಬೆಳ್ಳೀಕಲಮುದಾನಿಯ ವರೂ, ಕೌಜಲಗಿ ಬಂಡೆಪ್ಪನವರೂ ಅತ್ಯಂತ ಪ್ರೇಮದಿಂದ ಅಶುದ್ಧವಿರುವ ಕೀರ್ತನೆಗಳನ್ನು ಸರಿಪಡಿಸಿಕೊಟ್ಟು ನಮ್ಮನ್ನು ಚಿರಋಣಿಯನ್ನಾಗಿ ಮಾಡಿ ದ್ದಾರೆ. ಈ ಎಲ್ಲ ಮಹನೀಯರ ನೆರವು ಇಲ್ಲದಿದ್ದರೆ, ಈ ಗ್ರಂಥವನ್ನು ಪ್ರಕಟಿ ಸುವದು ಸಾಧ್ಯವೇ ಇರಲಿಲ್ಲ. ಎಲ್ಲರಿಗೂ ನನ್ನ ಅನಂತ ಪ್ರಣಾಮಗಳು. ಹೊತ್ತಿಗೆ ಪುಸ್ತಕವು ಮುದ್ರಣವಾಗುವದೋ ಇಲ್ಲವೋ ಎಂದು ಕಳವಳಗೊಳ್ಳು ತ್ತಿರುವಾಗ ಶ್ರೀ. ಬಾಲಚಂದ್ರ ಘಾಣೇಕರರೂ, ಪಾಳೇಕರರೂ ಮುಂದೆ ಬಂದು ಸಹಾಯ ಮಾಡಿದ್ದಕ್ಕಾಗಿ ಅವರಿಗೆ ಅಂತಃಕರಣಪೂರ್ವಕವಾಗಿ ಧನ್ಯವಾದಗಳ ನ್ನರ್ಪಿಸುವೆ.

ಬಳ್ಳಿಯು ೧೪ ವರ್ಷ ಸತತವಾಗಿ ಕನ್ನಡಿಗರ ಸೇವೆಗೈದಿದೆ. ಕನ್ನಡಿ ಗರ ನೆರವಿನಿಂದಲೇ ಬದುಕಿದೆ. ಬೆಳೆದು ಬಾಳಲು ಅಪೇಕ್ಷಿಸುತ್ತಿದೆ. ಬೆಳೆಸು ವದು ಉಳಿಸುವದು ಕನ್ನಡಿಗರನ್ನು ಕೂಡಿದೆ. ಅದು ಬೆಳೆಯುವಂತೆ ವಿಧಾ

ಯುಕ ಸೂಚನೆಗಳನ್ನು ಮಾಡಬೇಕೆಂದೂ ನೆರವು ನೀಡಬೇಕೆಂದೂ ಬಿನ್ನವಿಸುತ್ತೇನೆ. ಆರ್ಥಿಕ ಮುಗ್ಗಟ್ಟಿನಿಂದ ಬಳಲುತ್ತಿದೆ. ಕೊಡುಗೈ ದೊರೆಗಳು ಮುಂದೆ ಬಂದು ಅದನ್ನು ಬೆಳೆಸಬೇಕೆಂದು ಕೇಳಿಕೊಳ್ಳುವೆ. ಅದರ ಚಂದಾದಾರರ ಸಂಖ್ಯೆ ೫೨೦ ಮಾತ್ರವಿದೆ. ೧೨೦೦ ಕ್ಕೆ ಮುಟ್ಟಿದಾಗ ಮಾತ್ರ ಸ್ವತಂತ್ರವಾಗಿ ತನ್ನ ಕಾಲಮೇಲೆ ತಾನು ಅದು ನಿಲ್ಲಬಲ್ಲದು. ಕನ್ನಡಿಗರು ಮನಸ್ಸು ಮಾಡಿದರೆ ಇದೇನು ದೊಡ್ಡ ಮಾತಲ್ಲ. ಕನ್ನಡ ಜನತೆ ಸಹಾಯ ನೀಡುವದೆಂಬ ವಿಶ್ವಾಸದಿಂದ ಮುಂದಡಿ ಇಡುವ ಸಂಕಲ್ಪ ಮಾಡುತ್ತೇವೆ.

ತಮ್ಮ ಸೇವಕ,
**ಬುರ್ಲಿ ಬಿಂದುಮಾಧವ,**
ಮಿಂಚಿನಬಳ್ಳಿ, ಧಾರವಾಡ.

ವಿಜಯ ದಶಮಿ,
೧೮೭೮
ದುರ್ಮುಖಿ ಸಂ.

# ಮುನ್ನುಡಿ

ಶ್ರೀಮಾನ್ ಡಾ. ಎ. ಟಿ. ಪಾಟೀಲ, ಎಮ್.ಎ. ಇವರು ಪ್ರಸನ್ನವೆಂಕಟ ದಾಸರ ಮೇಲೆ ವಿಮರ್ಶಾತ್ಮಕವಾದ ಪ್ರಬಂಧವನ್ನು ಬರೆದು ಜನಸಾಮಾನ್ಯಕ್ಕೆ ಬಹಳ ಉಪಕಾರ ಮಾಡಿದ್ದಾರೆ. ನನ್ನ ಮಾರ್ಗದರ್ಶಿತ್ವದಲ್ಲಿ ಪ್ರಬಂಧವನ್ನು ಬರೆದು ಮುಂಬಯಿ ವಿಶ್ವವಿದ್ಯಾಲಯದಿಂದ ಪಿಹೆಚ್. ಡಿ. ಪದವಿಯನ್ನು ಪಡೆದ ವಿದ್ಯಾರ್ಥಿಗಳಲ್ಲಿ ಇವರು ಮೊದಲಿಗರು. ಇವರು ಒಳ್ಳೆಯ ಉತ್ಸಾಹದಿಂದಲೂ ಪರಿ ಶ್ರಮದಿಂದಲೂ ಸಾಮುಗ್ರೀಸಂಗ್ರಹ ಕಾರ್ಯವನ್ನೂ ಅಭ್ಯಾಸ ಕಾರ್ಯವನ್ನೂ ನಿರ್ವಹಿಸಿ ಅಚ್ಚುಕಟ್ಟಾದ, ಓದಲು ಅರ್ಹವಾದ, ಹೊಸ ವಿಷಯಗಳನ್ನೊಳ ಗೊಂಡ ಪ್ರಬಂಧವನ್ನು ರಚಿಸಿ ತಮ್ಮ ಪರಿಶ್ರಮದ ಫಲವಾದ ಮುಂಬಯಿ ವಿಶ್ವವಿದ್ಯಾಲಯದ ಪ್ರಥಮ ಸಂಶೋಧನಾ ಪ್ರಶಸ್ತಿಯಾದ Ph. D. ಡಿಗ್ರಿ ಯನ್ನು ಪಡೆದರು.

ಕರ್ನಾಟಕದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಸಂಶೋಧನಾ ತ್ಮಕ ಪ್ರಬಂಧ ರಚನೆಯ ಕಾರ್ಯವು ಅತೀವ ವಿರಲವಾಗಿದೆ. ಭಾವನಾ ಪ್ರಧಾನವಾದ ಅಥವಾ ಪೂರ್ವಗ್ರಹ ಪ್ರಕ್ಷಿಪ್ತವಾದ ಗ್ರಂಥಗಳು ಅದೊಂದು ರೀತಿಯಲ್ಲಿ ಬೆಳಕಿಗೆ ಬರುತ್ತಲಿವೆ. ಆದರೆ ಅವುಗಳಿಂದ ಮುಖ್ಯ ಪ್ರಯೋಜನ ವಾದ ಯಥಾರ್ಥ ಜ್ಞಾನವು ಸಿದ್ಧಿಸುವುದಿಲ್ಲ. ಸಾರಾಸಾರ ವಿವೇಕ ಬುದ್ಧಿಯಿಂದ ವಿಷಯವನ್ನು ಸಂಕಲಿತವಾದ ಸಾಮುಗ್ರಿಗಳ ಬಲದಿಂದ ಕಟ್ಟುನಿಟ್ಟಾಗಿ ವಿಮ ರ್ಶಿಸಿ ಅಬಾಧಿತವಾದ ಸತ್ಯಸಂಗತಿಗಳನ್ನು ನಿರ್ಧರಿಸುವ ಐತಿಹಾಸಿಕ 'ವಿಮರ್ಶಕ ಪದ್ಧತಿ'ಯು (Historical Method of research) ತತ್ವನಿರ್ಣಯಕ್ಕೆ ಅವಶ್ಯವಾದ ಸಾಧನವಾಗಿದೆ. ಕವನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಇತಿಹಾಸ ಗಳ ಸಂಶೋಧನೆಯಲ್ಲಿ ಅಳವಡಿಸಿಕೊಂಡರೆ ಈಗ ಕಂಡುಬರುತ್ತಿರುವ ವ್ಯರ್ಥ ಪರಿಶ್ರಮವನ್ನು ಉಳಿಸಿಕೊಂಡು ಸತ್ಯಾನ್ವೇಷಣೆಯ ಕಾರ್ಯವನ್ನು ಸುಗಮ ಮಾಡಿದಂತಾಗುವದು. ಇದಕ್ಕೆ ಶಾಸ್ತ್ರೀಯ ಪದ್ಧತಿ (Scientific Method) ಎನ್ನುವರು. ಆಪಾತತಃ ಸಣ್ಣದಾಗಿ ತೋರುವ ವಿಷಯವು ತರ್ಕಬದ್ಧ ವಿಚಾರ ಸರಣಿಯಲ್ಲಿ ಬುದ್ಧಿಗೆ ನಿಲುಕದಷ್ಟು ಜಟಿಲವಾಗಿ ಪರಿಣಮಿಸುವದು. ಇದಕ್ಕೆ

ನಮ್ಮಲ್ಲಿರುವ ವಿಚಾರಶಕ್ತಿಯ ಸೂಕ್ಷ್ಮತೆಯೇ ಕಾರಣ. ಅದನ್ನು ಬೆಳೆಸಿ ನಿಶಿತವಾಗಿ ಮಾಡಿದ ಹಾಗೆಲ್ಲ ನಮ್ಮ ವಿಚಾರಗಳಲ್ಲಿ ಸ್ಪಷ್ಟತೆಯೂ ಕೃತಿಗಳಲ್ಲಿ ವೈಶದ್ಯವೂ ಉಂಟಾಗುವವು.

ಪ್ರಕೃತ, ಡಾ. ಪಾಟೀಲರು 'ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು' ಎಂಬ ಚಿಕ್ಕ ವಿಷಯವನ್ನು ಈ ಐತಿಹಾಸಿಕ ಸಂಶೋಧನಾ ಪದ್ಧತಿಯಲ್ಲಿ ಚರ್ಚಿಸಿದ್ದಾರೆ. ಭಕ್ತಿಯ ಬೆಳವಣಿಗೆ– ಕರ್ನಾಟಕದ ಹರಿದಾಸರ ಭಕ್ತಿಯ ಸ್ವರೂಪಗಳನ್ನು ಹಿನ್ನೆಲೆಯಾಗಿ ಚರ್ಚಿಸಿ ಕಥಾನಾಯಕರಾದ ಪ್ರಸನ್ನ ವೆಂಕಟದಾಸರ ಜೀವನ ಚರಿತ್ರೆಯನ್ನು ಅಬಾಧಿತವಾದ ಮೂಲ ಸಾಮಗ್ರಿಗಳಿಂದ ರಚಿಸಿದ್ದಾರೆ. ಈ ಸಂದರ್ಭದಲ್ಲಿ ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗಳನ್ನು ಸಂದರ್ಭೋಚಿತವಾಗಿ ವಿವರಿಸಿ ದಾಸರಾಯರ ಕಾಲವು ಯುದ್ಧ, ಕಲಹ, ಪುಂಡಾಟಿಕೆಗಳಿಂದ ಪ್ರಕ್ಷುಬ್ಧವಾಗಿತ್ತೆಂಬ ಅಂಶವನ್ನು ತಿಳಿಸಿದ್ದಾರೆ. ಇಂಥ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಪ್ರಸನ್ನ ವೆಂಕಟದಾಸರು ಆಂತರ ಶತ್ರುಗಳಾದ ಕಾಮಕ್ರೋಧಾದಿ ಷಡ್ರಿಪುಗಳನ್ನೂ ಬಾಹ್ಯಶತ್ರುಗಳಾದ ಪುಂಡರನ್ನೂ ಪ್ರತಿಭಟಿಸುವಂತೆ ಯುದ್ಧ ಭಾಷೆಯಲ್ಲಿ

ಶ್ರೀಲೋಲನಂಘ್ರಿಸಂಬಂಧ ಸೈನ್ಯ ಕೂಡಿ ।
ತಾಳದಂಡಿಗೆ ಗೀತಾಯುಧಗಳಿಂದ ॥
ಕಾಲಕಾಲಕ್ಕೆ ನಿಮ್ಮ ಮೇಳವ ಮುರಿದಾಡಿ ।
ಹಾಳುಮಾಡುವೆ ಕೈಯಲ್ಲಿ ಕಡ್ಡಿ ಕೊಡುವೆ ॥

( ಪುಟ ೧೫೬ )

ಎಂದು ಧೈರ್ಯದಿಂದಲೂ ಸ್ಥೈರ್ಯದಿಂದಲೂ ಹರಿದಾಸ್ಯದೀಕ್ಷೆಯ ಮಹಿಮೆಯನ್ನು ತಿಳಿಸಿದ್ದಾರೆಂಬ ಐತಿಹಾಸಿಕ ಅಂಶವನ್ನು ವಿವರಿಸಿ ದಾಸರ ಮಹಿಮೆಯನ್ನು ಹೆಚ್ಚಿಸಿದ್ದಾರೆ. ಅಂಥ ವಿಷಮಕಾಲದಲ್ಲಿಯೂ ಪ್ರಸನ್ನ ವೆಂಕಟದಾಸರಿಗೆ ರಾಜಮರ್ಯಾದೆಗಳು ತಾವಾಗಿಯೇ ಬಂದಿದ್ದವೆಂಬುದೂ ಗಮನಾರ್ಹವಾಗಿದೆ.

ಪ್ರಸನ್ನ ವೆಂಕಟದಾಸರ 'ಸಮಸ್ತ ನಾಮಮಣಿಗಣ ಷಟ್ಚರಣ ಪದ್ಯಮಾಲಾ', 'ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ', 'ನಾರಾಯಣ ಪಂಜರ' ಮತ್ತು 'ಸಮಗ್ರ ಭಾಗವತ' ಇವೇ ಮೊದಲಾದ ಹೊಸ ಕೃತಿ

ಗಳನ್ನು ಹೆಸರಿಸಿ ಅವುಗಳ ಭಾವವನ್ನೂ ವಿವರಣೆಯನ್ನೂ ಸಂಕ್ಷೇಪವಾಗಿ ಕೊಟ್ಟಿದ್ದಾರೆ. ನಾರದರು ಕೊರವಂಜಿ ವೇಷದಿಂದ ರುಕ್ಮಿಣಿಗೆ ಕೃಷ್ಣನನ್ನು ವರಿಸಲು ಶಕುನ ಹೇಳಿದ್ದು ಅಶ್ರುತಪೂರ್ವವಾಗಿದೆ. ಪುರಾಣಾಂತರಗಳಲ್ಲಿದ್ದ ವಿಷಯವನ್ನು ;ದಾಸರು ಈ ಕೃತಿಯಲ್ಲಿ ಸೇರಿಸಿಕೊಂಡಿರಬೇಕು. ಇದರ ಮೂಲವನ್ನು ಕಂಡುಹಿಡಿದು ಚರ್ಚಿಸುವುದು ಅವಶ್ಯವಾಗಿದೆ.

ನನ್ನ ' ಹರಿದಾಸ ಸಾಹಿತ್ಯ 'ದಲ್ಲಿ ಪ್ರಸನ್ನ ವೆಂಕಟದಾಸರ ಬಗ್ಗೆ ಕೆಳಗಿನ ಮಾತುಗಳು ಬಂದಿವೆ :—

" ಶ್ರೀವಿಜಯದಾಸರ ಸಮಕಾಲಿಕರಾಗಿ ಪ್ರಸನ್ನ ವೆಂಕಟದಾಸರು ಕನ್ನಡ ದಲ್ಲಿ ಅನೇಕ ಕೀರ್ತನೆಗಳನ್ನೂ ಕೃತಿಗಳನ್ನೂ ರಚಿಸಿದ್ದಾರೆ. ಇವರು ತಮ್ಮ ಹಾಡು ಗಳಲ್ಲಿ ಶ್ರೀಪುರಂದರದಾಸರಾಯರ ಸರಣಿಯನ್ನು ಅನುಸರಿಸಿದ್ದಾರೆ. ಭಾಷೆ ಹೊಸದಾದರೂ, ವಿವಿಧವೃತ್ತ, ಬಂಧ, ಅಲಂಕಾರ-ರಸಪಾಕದ ಪಂಡಿತರನ್ನು ಬೆರಗುಗೊಳಿಸುವಷ್ಟು ಬಂಧುರವೂ ಬಿಗುವುಳ್ಳದ್ದೂ ಆಗಿದೆ." ( ಪುಟ ೨೧೧ )....
ಪ್ರಸನ್ನ ವೆಂಕಟದಾಸರು ೧೭–೧೮ನೆಯ ಶತಮಾನದಲ್ಲಿ ವಿಜಾಪುರ ಪ್ರಾಂತ ದಲ್ಲಿ ಬಾಳಿದ ಭಕ್ತಾಗ್ರಣಿಗಳು. ಆ ಕಾಲದಲ್ಲಿ ಯುದ್ಧಗಳು, ಬಂಟರ ತಂಡ ಗಳು ವೀರಶೂರ ಷಂಡರು ಬಾಹುಬಲದಿಂದ ರಾಜ್ಯಕ್ರಾಂತಿಯನ್ನು ಮಾಡು ತ್ತಿದ್ದರು. ಈ ಕಾರ್ಯದ ಮೆರಗನ್ನೂ ಬಂಟತನವನ್ನೂ ದಾಸಾರ್ಯರು ದುರಿತ ಸೇನೆಯನ್ನು ಎದುರಿಸುವುದರಲ್ಲಿ ಉಪಯೋಗಿಸಬೇಕೆಂದೂ ಭಗವ ದ್ಭಕ್ತರ ಬಲವನ್ನು ಹೆಚ್ಚಿಸಿ ಹರಿಭಕ್ತಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂದೂ ಒಳ್ಳೆಯ ಮಾರ್ಮಿಕವಾಗಿ ತಮ್ಮ ಹಾಡುಗಳಲ್ಲಿ ಹೇಳುವರು. ಇವರ ಉಪದೇಶ ದಿಂದ ಹರಿಭಕ್ತಿಯ ಪ್ರವಾಹವು ಹೊಸ ಕಳೆಯಿಂದ ಬಲಗೊಂಡಿತು. ( ಪುಟ ೨೧೨ ) ಈ ಎಲ್ಲ ಅಂಶಗಳನ್ನು ವಿಸ್ತಾರವಾಗಿ ವಿಮರ್ಶಿಸಿ ಒಂದು ಸ್ವತಂತ್ರ ಪ್ರಬಂಧವಾಗುವಂತೆ ಬರೆದು ಮೂಲ ಸಾಮಗ್ರಿಗಳನ್ನು ಬಯಲಿಗೆ ಹಾಕಿದ ಶ್ರೇಯಸ್ಸು ಡಾ. ಪಾಟೀಲರಿಗೆ ಸಲ್ಲುತ್ತದೆ.

ಹರಿದಾಸ ಸಾಹಿತ್ಯದ ಪರಿಚಯವು ದಿನೇ ದಿನೇ ಕಡಮೆಯಾಗುತ್ತ ನಡೆ ದಿದೆ ಅಭ್ಯಾಸವಂತೂ ದೂರ ಉಳಿಯಿತು. ಶ್ರೀಹರಿಯಲ್ಲಿ ಮಾಹಾತ್ಮ್ಯಜ್ಞಾನ ಪೂರ್ವಕ ಸುದೃಢ ಸ್ನೇಹವೇ ಭಕ್ತಿಯೆಂದು ಶ್ರೀಮಧ್ವಾಚಾರ್ಯರು ಕೊಟ್ಟ

ಭಕ್ತಿಯ ಸ್ವರೂಪವನ್ನು ಹರಿದಾಸರು ಚೆನ್ನಾಗಿ ಅನುಷ್ಠಾನದಲ್ಲಿ ತಂದು ಹರಿಭಕ್ತರ ತಂಡಗಳನ್ನೂ ದಾಸಕೂಟಗಳನ್ನೂ ಸ್ಥಾಪಿಸಿ ಜನರಲ್ಲಿ ಸಾತ್ವಿಕ ಜೀವನವನ್ನು ಉಪದೇಶಿಸಿದ್ದಾರೆ. ತಮೋಗುಣದ ಕಾರ್ಯಗಳಾದ ಯುದ್ಧ-ಕಲಹ-ಸ್ವಾರ್ಥಲೋಲುಪತೆಗಳು ದೇಶದ ಜನರ ಮನಸ್ಸನ್ನು ಆವರಿಸುತ್ತಿದ್ದಾಗ ಹರಿದಾಸರು ಸತ್ವಗುಣವನ್ನು ಉದ್ರೇಕಿಸಿ ಸ್ವತಂತ್ರ-ಸರ್ವ ಗುಣಪೂರ್ಣನಾದ ಪರಮಾತ್ಮ-ಶ್ರೀಹರಿಯಲ್ಲಿ ಸರ್ವಸಮರ್ಪಣೆಯನ್ನು ಮಾಡಿ ಅಸ್ವತಂತ್ರರಾದ ಜೀವರು ವಿಷಯಾಲಂಬುದ್ಧಿ-ಆತ್ಮತೃಪ್ತಿಗಳನ್ನು ಹೊಂದಬೇಕೆಂದು ಉಪದೇಶಿಸಿದ್ದಾರೆ. ಇಂಥ ಅಮೂಲ್ಯವಾದ ಉಪದೇಶವುಳ್ಳ ದಾಸರ ಕೃತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಎಲ್ಲರಿಗೂ ಮನದಟ್ಟಾಗುವಂತೆ ಒಬ್ಬೊಬ್ಬ ದಾಸರಿಗೂ ಒಂದೊಂದು ಪ್ರಬಂಧವೆಂಬಂತೆ ಅಭ್ಯಾಸಗ್ರಂಥಗಳನ್ನು ಪ್ರಕಾಶಿಸುವದು ಈಗಿನ ಗ್ಲಾನಿಕಾಲದಲ್ಲಿಯಂತೂ ಅತ್ಯವಶ್ಯವಾಗಿದೆ. ಈ ಆವಶ್ಯಕ ಕರ್ತವ್ಯದಲ್ಲಿ ಶ್ರೀ. ಪಾಟೀಲರು ಒಂದು ಪ್ರಬಂಧವನ್ನು ಬರೆದು ಭಾಗವಹಿಸಿದ್ದಾರೆ. ಶ್ರೀ. ಬಾರ್ಲಿ ಬಿಂದುಮಾಧವಾಚಾರ್ಯರು ಇದರ ಪ್ರಕಾಶನವನ್ನು ಕೈಕೊಂಡು ಜ್ಞಾನಕಾರ್ಯದಲ್ಲಿ ತಮ್ಮ ಕರ್ತವ್ಯಭಾಗವನ್ನು ನಿರ್ವಹಿಸಿದ್ದಾರೆ.

ಆಯಾಯ ದಾಸರ ಕೃತಿಗಳ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಮೂಲಪಾಠಗಳನ್ನು ನಿರ್ಧರಿಸುವುದು ಈಗ ಅವಶ್ಯವಾಗಿ ಮಾಡತಕ್ಕ ಮುಂದಿನ ಕಾರ್ಯವು. ಅದಲ್ಲದೆ ದಾಸಸಾಹಿತ್ಯಕೋಶವನ್ನು ಎಲ್ಲರಿಗೂ ಉಪಕಾರಕವಾಗುವಂತೆ ನಿರ್ಮಿಸುವದು ಇದಕ್ಕೂ ಹೆಚ್ಚಿನ ಹೊಣೆಯ ಕಾರ್ಯವು. ಇವುಗಳನ್ನು ವಿದ್ವಾಂಸರು ಗಮನಿಸಿ ಕಾರ್ಯಪ್ರವೃತ್ತರಾಗಬೇಕೆಂದು ಕೋರುತ್ತೇನೆ.

‘ಪವಮಾನಸದನ’
ದುರ್ಮುಖಿ, ಅಶ್ವೀನ ಶುದ್ಧ ೫
ಮಾಳಮಡ್ಡಿ, ಧಾರವಾಡ
ಮಂಗಳವಾರ,
ತಾ. ೯-೧೦-೧೯೫೬

ವಿದ್ಯಾರತ್ನ **ಆರ್. ಎಸ್. ಪಂಚಮುಖಿ**
( ಪಂಚಮುಖಿ ರಾಘವೇಂದ್ರಾಚಾರ್ಯ )

# ಅನುಕ್ರಮಣಿಕೆ

ದೊರೆತ ವರ್ಷಾಶನಗಳು– ಹನ್ನೆರಡು ಹೊನ್ನು, ೩೩ ರೂ. ೩ ಆಣೆ, ೩ ರೂ. ೧೨ ಆಣೆ, ೩ ರೂ. ೧೨ ಆಣೆ, ೨ ರೂ. ೮ ಆಣೆ, ೩ ರೂ. ೧೧. ಗ್ರಾಮ ಸಾದಿಲವಾರ ಮತ್ತು ಕಿರುಕಳ ಗ್ರಾಮಗಳು. (ಅ) ಪರವತಿ, (ಬ) ನೀರಲಕೇರಿ, (ಕ) ಬ್ಯಣ್ಣೂರ, (ಡ) ಶಿರೂರ, (ಈ) ಹೈರಕಲ್ಲ, (ಫ) ಮಾರನ ಬಸರಿ. ಕಿರುಕಳ ಉತ್ಪನ್ನ, ೧೨. ಪ್ರಸನ್ನ ವೆಂಕಟರು ಮೆರೆದ ಪವಾಡಗಳು, ೧೩. ಪ್ರಚಲಿತ ಮಾತು, ೧೪. ನಿಜ ಸಂಗತಿ, ೧೫. ಪ್ರಸನ್ನವೆಂಕಟರಿಗೆ ಪುರಂದರದಾಸರು ಆದರ್ಶರಾದರು, ೧೬. ದಾಸರ ದೇಶಸಂಚಾರ, ೧೭. ದೇವರ ಪೂಜೆ, ೧೮. ಪ್ರಸನ್ನ ವೆಂಕಟರ ಗ್ರಂಥ ರಾಶಿ, ೧೯. ದೊರೆಯದೆ ಇದ್ದ ಪದಗಳು, ೨೦. ಪ್ರಸನ್ನ ವೆಂಕಟರ ಸ್ವಭಾವ, ೨೧. ಪ್ರಸನ್ನ ವೆಂಕಟರ ಕೊನೆಯ ಕಾಲ.

**ಭಾಗ ೫ ದಾಸರ ಗ್ರಂಥವಿಮರ್ಶೆ ಪುಟ ೫೮–೧೪೧**

**(ಅ) ಸ್ವೀಕೃತ ಮತ್ತು ಸ್ವತಂತ್ರ ವಿಷಯಗಳು—**

೧. ನಾಮಸ್ಮರಣೆ, ೨. ಮಾಧ್ವಪರಂಪರೆ, ೩. ಪಂಚಭೇದ, ೪. ನಿರ್ಮಲ ಭಕ್ತಿ.

**(ಬ) ಪ್ರಸನ್ನ ವೆಂಕಟರ ವಿಶೇಷ ಕೃತಿಗಳು—**

೧. ಸಮಸ್ತ ನಾಮಮಣಿಗಣ ಷಟ್‌ಚರಣ ಪದ್ಯಮಾಲಾ, ೨. ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ, ೩. ನಾರಾಯಣಪಂಜರ, ೪. ಭ್ರಮರ ಗೀತೆ, ೫. ಸತ್ಯಭಾಮಾ ವಿಲಾಸ ಇಲ್ಲವೆ ಶ್ರೀಕೃಷ್ಣ ಪಾರಿಜಾತ, ೬. ಪ್ರಸನ್ನವೆಂಕಟರ ಭಾಗವತ.

**(ಕ) ರೂಪ—**

೧. ಕೀರ್ತನೆ, (ಅ) **ಭಾವಗಳು**– ಆರ್ತಭಾವ, ವೈರಾಗ್ಯಭಾವ, ಮುಮುಕ್ಷುಭಾವ, ವ್ಯಾಕುಭಾವ, ಶಾಂತಭಾವ, ಸಖ್ಯಭಾವ, ವಾತ್ಸಲ್ಯ ಭಾವ, ಸಮರ್ಪಣಭಾವ, ೨. ಸುಳಾದಿ, ೩. ಉಗಾಭೋಗ.

**(ಡ) ಅಲಂಕಾರ—**

೧. **ಶಬ್ದಾಲಂಕಾರ**– ಛೇದಾನುಪ್ರಾಸ, ವೃತ್ತ್ಯನುಪ್ರಾಸ, ಯಮಕ, ೨. ಅರ್ಥಾಲಂಕಾರ, ವ್ಯಾಜಸ್ತುತಿ, ಉಪಮೆ, ದೀಪಕಜಾತಿ.

(ಇ) **ಪ್ರಾಸ—**

೧. **ಆದ್ಯಪ್ರಾಸ**– ಸಿಂಹಪ್ರಾಸ, ಗಜಪ್ರಾಸ, ವೃಷಭಪ್ರಾಸ, ಹಯ ಪ್ರಾಸ, ೨. ಮಧ್ಯಪ್ರಾಸ, ೩. ಅಂತ್ಯಪ್ರಾಸ.

(ಈ) **ನಾದಗುಣ** (ಉ) **ಶೈಲಿ—**

೧. ಮಾತನಾಡುವ ( ದಾಸರ ಕಾಲದ ) ಭಾಷೆ, ೨. ಶಬ್ದ ಜೋಡನೆ, ೩. ಮರಾಠಿ ಭಾಷೆಯ ಜ್ಞಾನ, ೪. ತಮಿಳು ಭಾಷೆಯ ಜ್ಞಾನ, ೫. ಸಂಸ್ಕೃತ ಭಾಷೆಯ ಜ್ಞಾನ, ೬. ತದ್ಭವಗಳು, ೭. ಗಾದೆಯ ಮಾತು.

**ಭಾಗ ೬ ಉಪದೇಶ ಪುಟ ೧೪೨–೧೪೯**

೧. ನಾಮಸ್ಮರಣೆ, ೨. ಗುರುವಿನ ಅಗತ್ಯ, ೩. ಸಜ್ಜನರ ಸೇವೆ, ೪. ಸದಾ ಚಾರ, ೫. ದೇಹವು ಅನಿತ್ಯ, ೬. ಸಂಸಾರ ಸುಖದ ಗುಟ್ಟು, ೭. ಸಾಧು ಸಂಗ, ೮. ವ್ರತಪಾಲನೆ.

**ಭಾಗ ೭ ರಾಜಕೀಯ ಪರಿಸ್ಥಿತಿ ಪುಟ ೧೫೦–೧೫೭**

**ಹಿನ್ನೆಲೆ**– ೧. ವಿಜಯನಗರ ಸಾಮ್ರಾಜ್ಯ, ೨. ಆನೆಗುಂದಿಯ ಅರಸರು, ೩. ಮದುರೆಯ ನಾಯಕರು, ೪. ಕೆಳದಿಯ ಅರಸರು, ೫. ವಿಜಾಪುರದ ಆದಿಲಶಾಹಿ, ೬. ಮರಾಠಿಗರು, ೭. ದಾಸರ ಕಾಲದ ಪರಿಸ್ಥಿತಿ. ತಲ್ಲಿ ಕಾರರು, ರಾವುತರು, ಹಡಗುಗಳ್ಳರು, ಆಯುಧಗಳ ವರ್ಣನೆ.

**ಭಾಗ ೮ ಸಾಮಾಜಿಕ ಜೀವನ ಪುಟ ೧೫೮–೧೭೨**

೧. ದೇವರು ಮತ್ತು ಧರ್ಮ, ೨. ಭಕ್ತಿ ಮತ್ತು ದಾನ, ೩. ನೀತಿ ಹಾಗೂ ರೀತಿ-ನಡತೆ, ೪. ಸಾಂಪ್ರದಾಯ, ೫. ವೇಷ-ಭೂಷಣ, ೬. ಊಟದ ಪದಾರ್ಥಗಳು, ೭. ಆಟ-ಪಾಟಗಳು, ೮. ಇತರ ವಿಷಯಗಳು, ೯. ದಾಸ ರಿಗೆ ದೊರೆತ ವರ್ಷಾಶನ, ದಾನಪತ್ರಗಳ ಮೇಲಿಂದ ತಿಳಿದುಬರುವ ಕೆಲವು ಸಂಗತಿಗಳು.

**ಭಾಗ ೯ ಕೀರ್ತನೆಗಳು** ( ಭಾಗ ೨ )

**ಪರಿಶಿಷ್ಟಗಳು. ಆಧಾರ ಗ್ರಂಥಗಳು.**

*

# ಉಪೋದ್ಘಾತ

ನಾನು ಮೊದಲು ಪಿಎಚ್. ಡಿ. ಅಭ್ಯಾಸದ ಸಲುವಾಗಿ ಧಾರವಾಡದಲ್ಲಿದ್ದ 'ಕನ್ನಡ ಸಂಶೋಧನ ಸಂಸ್ಥೆಯ' ಡಾಯರೆಕ್ಟರರಾದ ಶ್ರೀ ಆರ್. ಎಸ್. ಪಂಚಮುಖಿ, ಎಂ. ಎ. ಇವರನ್ನು ಕಂಡೆ. ಮತ್ತು ಅಪ್ಪಣೆಯನ್ನು ಪಡೆಯುವದಕ್ಕಾಗಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಅರ್ಜಿಯನ್ನು ಹಾಕಿದೆ. 'ಕನ್ನಡ ಸಂಶೋಧನ ಸಂಸ್ಥೆ'ಯ ಡಾಯರೆಕ್ಟರರ ನೇತೃತ್ವದಲ್ಲಿ ಪ್ರಬಂಧ ಬರೆಯಲು ತಾ. ೨೦—೨೨ ಸಪ್ಟೆಂಬರ ೧೯೪೫ರಲ್ಲಿ ಮುಂಬಯಿ ವಿಶ್ವವಿದ್ಯಾಲಯದಿಂದ ನನಗೆ ಅಪ್ಪಣೆ ದೊರೆಯಿತು. ಮತ್ತು ಈ ಪ್ರಬಂಧವನ್ನು ಕನ್ನಡದಲ್ಲಿ ಬರೆಯಲು ೬೨೩೧—೧೯೪೭ ನಂಬರಿನ ಪ್ರಕಾರ ತಾ. ೧೧–೧೩ ಮಾರ್ಚ ೧೯೪೭ ರಲ್ಲಿ ವಿಶ್ವವಿದ್ಯಾಲಯದಿಂದ ಅಪ್ಪಣೆ ದೊರೆಯಿತು.

ನನಗೆ ಮಾರ್ಗದರ್ಶಕರಾದ ಶ್ರೀ. ಆರ್. ಎಸ್. ಪಂಚಮುಖಿ ಎಂ. ಎ. ಇವರು ವಿಷಯಗಳನ್ನು ಸೂಚಿಸಿದರು. ಅವುಗಳಲ್ಲಿ "ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು" ಎಂಬ ವಿಷಯವಿದ್ದು, ಅದು ನನಗೆ ರುಚಿಸಿತು. ಅದನ್ನು ನಾನು ಆಯ್ದುಕೊಂಡೆ. ಆದಕ್ಕೆ ಕಾರಣಗಳಿಲ್ಲದಿಲ್ಲ. ೧) ನನಗೆ ಹರಿದಾಸ ಸಾಹಿತ್ಯವು ಸೇರುತ್ತದೆ ಮತ್ತು ೨) ದಾಸರ ಬಗ್ಗೆ ಪಿಎಚ್. ಡಿ. ಪರೀಕ್ಷೆಗೆ ಇಲ್ಲಿಯವರೆಗೆ ಯಾರೂ ಅಭ್ಯಾಸವನ್ನು ಕೈಕೊಂಡಿಲ್ಲ; ನಾನು ಮೊದಲಿಗನು. ಆಮೇಲೆ ನನ್ನ ಗುರುಗಳು ಮತ್ತು ಮಾರ್ಗದರ್ಶಕರು ಆದ ಶ್ರೀ ಪಂಚಮುಖಿ ಆರ್. ಎಸ್., ಎಂ. ಎ. ಇವರು ಮೊದಲು ನನಗೆ ಪ್ರಬಂಧ ಮೂಲಕ ಪಾಠವನ್ನು ಕೊಟ್ಟು, ಪ್ರಸನ್ನ ವೆಂಕಟದಾಸರ ಬಗ್ಗೆ ವರ್ಷಾಶನ, ದಾನಪತ್ರಗಳನ್ನು ಮತ್ತು ಅವರ ಕೀರ್ತನೆಗಳನ್ನು ಕಲೆ ಹಾಕಲು ಹೇಳಿ ಶ್ರೀ ಹಣಮಂತರಾವ ಗೋರಬಾಳ, ಲಿಂಗ್ಸುಗೂರ ಡಿಸ್ಟ್ರಿಕ್ಟ ರಾಯಚೂರ, ಶ್ರೀ ನಾರಾಯಣರಾವ ಕಲಮದಾನಿ, ರಿಟಾಯರ್ಡ್ ಇಂಜಿನಿಯರ ಹಾವೇರಿ, ಶ್ರೀ. ಬಿ. ಎಸ್. ಪಂಚಮುಖಿ, ಪ್ಲೀಡರ ಬಾಗಿಲುಕೋಟೆ ಮುಂತಾದ ಮಹನೀಯರ ಕಡೆಗೆ ನನ್ನನ್ನು ಕಳುಹಿದರು. ನಾನು ಈ ಮಹನೀಯರ ಕಡೆಗೂ ದಾಸರ ವಂಶಜರ ಕಡೆಗೂ ಮತ್ತು ಇನ್ನೂ ಕೆಲವು ಸದ್ಗೃಹಸ್ಥರ ಕಡೆಗೂ ಹೋದೆ.

ವರ್ಷಾಶನಗಳು, ದಾನಪತ್ರಗಳು, ವಂಶಾವಳಿ, ೨೦೩ ಕೀರ್ತನೆಗಳು, ೩ ಸುಳಾದಿ, ೩ ಉಗಾಭೋಗ, ಇವು ನನಗೆ ದೊರೆತವು. ಇವುಗಳನ್ನು ದೊರಕಿ ಸುವದರ ಸಲುವಾಗಿ ಆದ ಶ್ರಮವು ಶ್ರೀ ಪ್ರಸನ್ನ ವೆಂಕಟದಾಸರಿಗೆ ಗೊತ್ತು. ಇವುಗಳನ್ನು ನನ್ನ ಗುರುಗಳ ಮುಂದೆ ಇಟ್ಟೆ. ಅದನ್ನು ಕಂಡು ಅವರು ಸಂತೋಷಪಟ್ಟು ಇವುಗಳ ಸಹಾಯದಿಂದ ಹೇಗೆ ಪ್ರಬಂಧವನ್ನು ಬರೆಯ ಬೇಕೆಂಬುದನ್ನು ಹೇಳಿ, ಸಂದರ್ಭ ಗ್ರಂಥಗಳ ಪಟ್ಟಿಯನ್ನು ಕೊಟ್ಟರು. ಮುಂದೆ ನಾನು ದೊರಕಿಸಿದ ೨೦೯ ಕೀರ್ತನೆಗಳು, ವರ್ಷಾಶನ, ದಾನಪತ್ರ, ಶ್ರೀ ಕೌಜಲಗಿ ಬಂಡೇರಾಯರು ಅಚ್ಚು ಹಾಕಿದ ಶ್ರೀ ಪ್ರಸನ್ನ ವೆಂಕಟರ ೮೧ ಕೀರ್ತನೆಗಳು, ಶ್ರೀ ಆಬಾಜಿ ರಾಮಚಂದ್ರ ಸಾವಂತ, ಬೆಳಗಾವಿ ಇವರು ದೇವ ನಾಗರಿ ಲಿಪಿಯಲ್ಲಿ ಅಚ್ಚು ಹಾಕಿದ ೧೬ ಪದಗಳು ಮತ್ತು "ಶ್ರೀ ಪ್ರಸನ್ನ ವೆಂಕಟ ಭಾಗವತ" ಇವುಗಳ ಆಧಾರದಿಂದ ಗುರುಗಳು ಸೂಚಿಸಿದ ಸಂದರ್ಭ ಗ್ರಂಥಗಳ ಸಹಾಯದಿಂದ "ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿ ಗಳು" ಎಂಬ ಪ್ರಬಂಧವನ್ನು ಬರೆದೆ. ನನ್ನ ಮಾರ್ಗದರ್ಶಕರೂ ಗುರುಗಳೂ ಆದ ಶ್ರೀ. ಆರ್. ಎಸ್. ಪಂಚಮುಖಿ ಎಂ. ಎ. ಇವರು ಕಾಲಕಾಲಕ್ಕೆ ಸಲಹೆ ಸೂಚನೆಗಳನ್ನು ಕೊಟ್ಟರೆಂದೇ ಈ ಕೃತಿಯು ಪ್ರಬಂಧ ರೂಪವನ್ನು ತಾಳಿತು. ಇಲ್ಲವಾದರೆ ಅಸಾಧ್ಯ. ಈ ಪ್ರಬಂಧದಲ್ಲಿ ದಾಸರ ಕಾಲ ನಿರ್ಣಯ, ಅವರ ಚರಿತ್ರೆ ಮತ್ತು ಅವರ ಕೃತಿಗಳ ಬಗ್ಗೆ ಟೀಕೆ, ಟಿಪ್ಪಣಿಗಳನ್ನು ಕಾಣಬಹುದು.

---

# ಶ್ರೀಪ್ರಸನ್ನ ವೆಂಕಟದಾಸರು
## ಮತ್ತು
# ಅವರ ಕೃತಿಗಳು

## ಭಾಗ ೧.

## ವೈಷ್ಣವ ಭಕ್ತಿಯ ಬೆಳವಣಿಗೆ

### (ಅ) ಭಕ್ತಿ :—

ವೈಷ್ಣವ ಭಕ್ತಿಯು ಹೇಗೆ ಬೆಳೆಯಿತು ? ಎಂಬುದನ್ನು ಹೇಳುವದಕ್ಕಿಂತ ಮೊದಲು ಭಕ್ತಿಯೆಂದರೇನು ? ಎಂಬುದರ ಬಗ್ಗೆ ಸಾಮಾನ್ಯವಾಗಿ ತಿಳಿಯುವದು ಅಗತ್ಯ. ಮನುಷ್ಯನು ತನಗೆ ಸುಖ ದೊರೆಯಬೇಕೆಂದು ಪ್ರಯತ್ನಿಸುವನು. ನಿಜವಾದ ಸುಖ ದೊರೆಯುವದು ದೇವರ ಆರಾಧನೆಯಿಂದ—ಆ ಪರಮಾತ್ಮನಲ್ಲಿ ಪೂರ್ಣ ವಿಶ್ವಾಸ ಮತ್ತು ಶ್ರದ್ಧೆಯಿಟ್ಟು ಭಜಿಸುವದೇ ಭಕ್ತಿ. ಪರಮಾತ್ಮನಲ್ಲಿ ಸ್ನೇಹ ಬೆಳೆಸುವದು ಭಕ್ತಿಯೆಂದು ಹೇಳಿದ್ದಾರೆ. "ಸ್ನೇಹೋ ಭಕ್ತಿರಿತಿಪ್ರೋಕ್ತಃ" ದಾಸಈಶರನ್ನು ಕೂಡಿಸುವದೇ ಭಕ್ತಿಯು. "ಜ್ಞಾನಪೂರ್ವಃ ಪರಃ ಸ್ನೇಹೋ ನಿತ್ಯೋ ಭಕ್ತಿರಿತೀಯತೆ"[೧]

ಇನ್ನು ಈ ಭಕ್ತಿಯನ್ನು ಯಾವ ರೀತಿಯಿಂದ ಮಾಡಬೇಕೆಂದರೆ:—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮ-ನಿವೇದನಂ ॥
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚ ನವಲಕ್ಷಣಾ ॥[೨]

ದೇವರ ಮಹಿಮೆಯನ್ನು ಕೇಳುವುದು, ಗುಣಗಳನ್ನು ಹಾಡುವುದು, ನಾಮ

---

(೧) ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ:— ಅಧ್ಯಾಯ ೧ ಶ್ಲೋಕ ೮೦೬.

(೨) ಭಾಗವತ:— ಸ್ಕಂದ ೭ ಅಧ್ಯಾಯ ೫, ಶ್ಲೋಕ ೨೩.

ಸ್ಮರಣೆಯನ್ನು ಮಾಡುವುದು, ಸೇವೆಯನ್ನು ಸಲ್ಲಿಸುವದು, ಪೂಜೆ ಮಾಡುವದು, ವಂದಿಸುವುದು, ದೇವರು ಸಖನೆಂದು ತಿಳಿದು ಆತನ ಕೂಡ ಮಾತನಾಡುವದು, ತನ್ನ ಸುಖದುಃಖಗಳನ್ನು ದೇವರಿಗೆ ನಿವೇದಿಸುವದು, ಇವು ಭಕ್ತಿಯ ಮಾರ್ಗಗಳೆಂದೆನಿಸುತ್ತವೆ. ಶ್ರದ್ಧೆಯಿಂದ ಇವುಗಳನ್ನು ಮಾಡಿದರೆ, ಪರಮಾತ್ಮನು ಪ್ರಸನ್ನನಾಗಿ ಭಕ್ತನಿಗೆ ಇಹದಲ್ಲಿ ಸೌಖ್ಯ, ಪರದಲ್ಲಿ ಮುಕ್ತಿಯನ್ನು ಕೊಡುವನು.

ಇನ್ನು ಈ ಭಕ್ತಿಯ (ವೈಷ್ಣವ) ಮಾರ್ಗವನ್ನು ಕ್ರಿಸ್ತಶಕಾರಂಭದಿಂದ ಶ್ರೀ ಪ್ರಸನ್ನ ವೆಂಕಟದಾಸರ ವರೆಗೆ ಹಿಂದುಸ್ಥಾನದಲ್ಲಿ ಯಾರು ಮತ್ತು ಯಾವ ಕಾಲದಲ್ಲಿ ಆಕ್ರಮಿಸಿದರು ? ಎಂಬುದನ್ನು ನೋಡುವದು ಮುಂದಿನ ಹೆಜ್ಜೆ.

**೧. ಒಂದನೆಯ ಶತಮಾನ**:— ಕೃಷ್ಣ ಮತ್ತು ಬಲರಾಮರ ಪೂಜೆಯು ತಮಿಳು ನಾಡಿನಲ್ಲಿ ಕ್ರಿಸ್ತಾರಂಭದಲ್ಲಿಯೇ ಕಂಡುಬರುವದು. 'ಶಿಲಪ್ಪದಿಕಾರಮ್' ಮತ್ತು ಇತರ ತಮಿಳು ಕಾವ್ಯಗಳಲ್ಲಿ ಕೃಷ್ಣಬಲರಾಮರಿಗೆ 'ಮದುರೆ ಮತ್ತು ಕಾವಿರಿ ಪದ್ದಿನಮ್' ದಲ್ಲಿ ಗುಡಿಗಳನ್ನು ಕಟ್ಟಿಸಿದ್ದು ಕಂಡು ಬರುವದು.[೧] ಭಾಗವತ ಧರ್ಮವು ಉತ್ತರದಲ್ಲಿ ಇದ್ದರು ಕೂಡ, ಅದರ ಮುಖ್ಯ ಸ್ಥಾನವು ಮಧ್ಯ ಹಿಂದುಸ್ಥಾನ ಮತ್ತು ಗಂಗೆಯ ಧಡಗಳಾಗಿರದೆ, ತಮಿಳು ನಾಡಾಯಿತು. ಭಾಗವತ ಧರ್ಮವು ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿ ದಕ್ಷಿಣದಲ್ಲಿ ಬಂದಿದೆಯೆಂದು 'ನಾನಾ ಘಾಟ' ಶಾಸನದಿಂದ ತಿಳಿದುಬರುವದು.[೨]

ಮುಂದೆ ನಾಲ್ಕನೆಯ ಶತಮಾನದಲ್ಲಿದ್ದ ಗುಪ್ತರ ಕಾಲದ ವರೆಗೆ ಈ ಧರ್ಮವು ಇದ್ದದ್ದು ಕಂಡುಬರುವದಿಲ್ಲೆಂದು ಸರ್ ಆರ್. ಜಿ. ಭಾಂಡಾರಕರರ ಅಭಿಪ್ರಾಯ.[೩] ಆದರೆ ಯಜ್ಞಶಾತಕರ್ಣಿಯ ಕಾಲದ ಚೀನಾ ( China ) ಶಾಸನವು ಎರಡನೆಯ ಶತಮಾನದಲ್ಲಿ ಈ ಧರ್ಮವು ಕೃಷ್ಣಾ ಜಿಲ್ಹೆಯಲ್ಲಿ ಹುಟ್ಟಿ

---

(೧) Hemchandra Ray Chaudhari: Early History of Vaishnava Sect. Page 181.

(೨) Ibid Page 181.

(೩) Sir, R. G. Bhandarkar :— Vai. Sai. and Minor Religious Systems Chap. XII Page 42.

ತೆಂದು ಹೇಳುತ್ತದೆ.[೧]

೨. **ಐದನೆಯ ಶತಮಾನ :—** ಉದಯಗಿರಿಯಲ್ಲಿ ದೊರೆತ ಕೆತ್ತನೆಯಲ್ಲಿ ನಾಲ್ಕು ಹಸ್ತದ ಮೂರ್ತಿಯಿದೆ. ಅದು ವಿಷ್ಣುವಿನ ಮೂರ್ತಿಯೆಂದು ಕಾಣುತ್ತದೆ.[೨] ಗುಪ್ತ ಅರಸರಾದ ೨ನೆಯ ಚಂದ್ರಗುಪ್ತ, ಕುಮಾರಗುಪ್ತ ಸ್ಕಂದಗುಪ್ತರು ಪರಮ ಭಾಗವತರೆಂದು ಅವರ ನಾಣ್ಯಗಳ ಮೇಲಿದೆ. ಇವರ ಕಾಲ ಇ. ಸ. ೪೦೦ ರಿಂದ ೪೬೪.[೩] ಗುಪ್ತರ ಕಾಲದಲ್ಲಿ ಪಂಜಾಬ, ರಾಜಪುತಾನಾ, ಮಗಧ, ಪಶ್ಚಿಮ ಮತ್ತು ಮಧ್ಯ ಹಿಂದುಸ್ಥಾನದಲ್ಲಿ ಭಾಗವತ ಧರ್ಮವು ಹಬ್ಬಿದ್ದು ಕಂಡುಬರುವದು.[೪]

೩. **ಆರನೆಯ ಶತಮಾನ:—** ಸಂಯುಕ್ತ ಪ್ರಾಂತದ ಝಾಂಸಿ ಜಿಲ್ಹೆಯಲ್ಲಿ 'ಲಲಿತಪುರ' ವೆಂಬ ಮಹಾಲು. ಅಲ್ಲಿ 'ದೇವಗಡ' ಎಂಬ ಊರು. ಅಲ್ಲಿಯ ಗುಡಿಯಲ್ಲಿ ವಿಷ್ಣುವಿನ ಮೂರ್ತಿಯಿದ್ದು ಸುತ್ತಲೂ ದೇವತೆಗಳ ಮೂರ್ತಿ ನಿಂತಿವೆ.[೫] ಭೋಪಾಳ ಎಜನ್ಸಿಯಲ್ಲಿಯ 'ಪಥಾರಿ' ಯಲ್ಲಿ ಮನುಷ್ಯಾಕೃತಿಯ ಮೂರ್ತಿಗಳು ಇವೆ. ಕೃಷ್ಣನು ತಾಯಿಯ ಮಗ್ಗಲಿಗೆ ಒರಗಿದ್ದಾನೆ. ಐದುಜನ ಸೇವಕರು ನಿಂತಿದ್ದಾರೆ. ಈ ಮೂರ್ತಿಗಳು ೬ನೆಯ ಶತಮಾನದಲ್ಲಿಯವು ಎಂದು ಸ್ಮಿಥನ ಅಭಿಪ್ರಾಯ. ಇವುಗಳ ಮೇಲಿಂದ ಗುಪ್ತ ಅರಸರ ಕಾಲದ ವಿಷ್ಣು ಭಕ್ತಿಯು ಕಂಡುಬರುವುದು.[೬] ಸಾತ್ವತರು ಮತ್ತು ಭಾಗವತರು ಕೃಷ್ಣ ಮತ್ತು ವಿಷ್ಣು ಇಬ್ಬರು ಒಂದೆ ಎಂದು ತಿಳಿದುಕೊಂಡಿದ್ದುದು ಪಂಜಾಬದಲ್ಲಿದ್ದ ಹಿಸ್ಸಾರ ಜಿಲ್ಹೆಯಲ್ಲಿ ದೊರೆತ 'ತುಶಾಮ' ಶಾಸನದಿಂದ ತಿಳಿಯುತ್ತದೆ.[೭] ಆದರೂ ಕೃಷ್ಣನ ಹೆಸರಿಗಿಂತಲೂ ವಿಷ್ಣುವಿನ ಹೆಸರು ಹೆಚ್ಚು ಪ್ರಚಾರದಲ್ಲಿ

(೧) Hemchandra Ray Chaudhari:- E. H. V, S. Page 180.
(೨) Sir R. G. Bhandarkar:— Vai Sai & M. R. S. Chap. XII. Page 43.
(೩) Ibid Page 43.
(೪) Hemchandra Ray Chaudhari : E. H. V. S, Page 115.
(೫) V. Smith : History of fine Art in India & Ceylon. Page 164.
(೬) Hemchandra Ray Chaudhari: E. H. V. S. Page 172
(೭) Ibid Page 155.

ಬಂದಿದೆ. ವಿಷ್ಣು, ಪುರುಷ, ನಾರಾಯಣ ಇಲ್ಲವೆ ಜನಾರ್ದನನೇ ಪರದೈವತ. ಕೃಷ್ಣನು ಆತನ ಪೂರ್ಣ ಅವತಾರಿಯು ಎಂಬ ಭಾವವು ನೆಲೆಯೂರಿತ್ತು.[೧] ಇದೇ ಶತಮಾನದಲ್ಲಿ ಬದಾಮಿಯ ಚಾಲುಕ್ಯರ ಅರಸನಾದ ಮಂಗಲೀಶನು ಪರಮ ಭಾಗವತನೆಂದು ಹೇಳಿದೆ. (ಇ. ಸ. ೫೭೮).[೨]

**೪. ಆಳ್ವಾರರು :**— ಆಳ್ವಾರರೆಂದರೆ ದೇವರನ್ನು ತಿಳಿದುಕೊಳ್ಳುವಲ್ಲಿ ತನ್ಮಯರಾದವರು ಇಲ್ಲವೆ ದೇವರ ಧ್ಯಾನದಲ್ಲಿ ಮಗ್ನರಾದವರು. ತಮಿಳು ನಾಡಿನಲ್ಲಿ ವೈಷ್ಣವ ಭಕ್ತಿಯನ್ನು ಬೀರಿದವರೆಂದರೆ ಆಳ್ವಾರರು. ಇವರ ಕಾಲ ಕ್ರಿ. ಪೂ. ೪೨೦೩ ರಿಂದ ಕ್ರಿ. ಪೂ. ೨೭೦೬ ರ ವರೆಗೆ ಎಂದು ಕೆಲವರ ಅಭಿಪ್ರಾಯ. ಆದರೆ ಕಾಲ್ಡವೆಲ್, ಶೇಷಗಿರಿಶಾಸ್ತ್ರಿ, ಮೋನಿಯರ ವಿಲಿಯಮ್ಸ ಮಹನೀಯರು, ಆಳ್ವಾರರು ರಾಮಾನುಜರ ಕಾಲದವರೆಂದು ಅಭಿಪ್ರಾಯಪಡುತ್ತಾರೆ.[೩] ೫ನೆಯ ಇಲ್ಲವೆ ೭ನೆಯ ಶತಮಾನದವರೆಂದು ಸರ್. ಆರ್. ಜಿ. ಭಾಂಡಾರಕರರ ಅಭಿಪ್ರಾಯವಿದೆ.[೪] ಆದರೆ ಹೂಪರರ ಅಭಿಪ್ರಾಯದಂತೆ ಆಳ್ವಾರರು ೭ನೆಯ ಶತಮಾನದ ಮಧ್ಯದವರೆಂದು ತಿಳಿಯುವದು.[೫] ೭ನೆಯ ಇಲ್ಲವೆ ೮ನೆಯ ಶತಮಾನದಲ್ಲಿ ಆಳ್ವಾರರು ಇರಬಹುದೆಂದು ಶ್ರೀ ಚೌಧರಿಯವರು ಅಭಿಪ್ರಾಯ ಪಡುತ್ತಾರೆ.[೬] ಆದಬಳಿಕ ಆಳ್ವಾರರು ೭ನೇ ಶತಮಾನದವರೆಂದು ತಿಳಿಯಲು ಅಡ್ಡಿಯಿಲ್ಲ.

ಈ ಆಳ್ವಾರರಲ್ಲಿ ಮೊದಲಿಗನೆಂದರೆ ಭೂತಟ್ಟಾಳ್ವಾರನು. ಈತನ ಜನ್ಮಸ್ಥಳವು ಮಹಬಲಿಪುರಂ ಎಂದು ಹೇಳಿದೆ. ಪೊಯ್ ಕೈ ಆಳ್ವಾರ್ ಮತ್ತು

---

(೧) Ibid Page 172, 173.
(೨) Hemchandra Ray Chaudhari: E. H. V. S. Page 180 ಮತ್ತು Sir R. G, Bhandarkar Vai Sai & M. R. S. Page 44.
(೩) J. S. M. Hooper: Hymns of alwars Page 10-
(೪) Sir R. G. Bhandarkar: Vai. Sai. & M. R. S. Chap. XIV Page 50.
(೫) J. S. M. Hooper: Hymns of Alwars Page 10-11.
(೬) Hemchandra Ray Chaudhari; E. H. V. S. Page 187.

ಪೆಯ್ ಆಳ್ವಾರರು ಭುತಟ್ಟಾಳ್ವಾರರ ಸಮಕಾಲೀನರು.[೧]

೫ **ನಮ್ಮಾಳ್ವಾರ** :— ನಮ್ಮಾಳ್ವಾರ ಇಲ್ಲವೆ ಶಠಗೋಪನೆಂಬವನು ೯ನೇ ಶತಮಾನದಲ್ಲಿ ಪೂರ್ವಾರ್ಧದಲ್ಲಿ "ತಿರುವಿರುತ್ತಮ್" ಎಂಬ ಹೆಸರಿನಲ್ಲಿ ಪದಗಳನ್ನು ಬರೆದು, ಭಗವಂತನ ಅವತಾರದ ಕಲ್ಪನೆ, ಪುನರ್ಜನ್ಮದ ವಿಚಾರ, ಮನುಷ್ಯನು ಹೀನ ದೀನನು; ಕಾರಣ ದೇವರಿಗೆ ಶರಣು ಹೋಗಿ ಭಕ್ತಿಭಾವ ದಿಂದ ನಡೆದುಕೊಳ್ಳತಕ್ಕದ್ದು ಎಂಬುದನ್ನು ಹೇಳಿದನು.[೨]

೬. **ಕುಲಶೇಖರ ಆಳ್ವಾರ** :— ೯ನೇ ಶತಮಾನದ ಪೂರ್ವಾರ್ಧ ದಲ್ಲಿ ಈತನು ತ್ರಾವಣಕೋರದ ರಾಜನಾಗಿದ್ದನು. ಈತನು ರಾಜ್ಯಪ್ರವೀಣ ನಾಗಿದ್ದರೂ ತನ್ನ ಮನಸ್ಸನ್ನು ಧರ್ಮದ ಕಡೆ ಹೊರಳಿಸಿದನು. ರಾಮಾಯಣ ವನ್ನು ಅಭ್ಯಸಿಸಿ, "ಪೇರು ಮಾಲ ತಿರುಮೊಳಿ" ಎಂಬ ಗ್ರಂಥವನ್ನು ಈತನು ಬರೆದನು. ಇದರಲ್ಲಿ ದಾಸ, ಈಶ ಭಾವವು ಮೂಡಿದೆ.[೩]

ಕುಲಶೇಖರನ ತರುವಾಯ ಪೆರಿಯಾಳ್ವಾರ, ಆಂಡಾಳ್, ತೊಂಡರಡಿ ಪ್ಪೊಡಿ, ತಿರುಪ್ಪಾಣ ಆಳ್ವಾರರು ಆಗಿ ಹೋದರು. ಇವರಲ್ಲಿ ಭಕ್ತಿಯು ತುಂಬಿ ತುಳುಕುತ್ತಿತ್ತು. ಮುಂದೆ ತಿರುಮಂಗಲಿ ಆಳ್ವಾರನು ೯ನೇ ಶತಮಾನ ದಲ್ಲಿ ವೈಷ್ಣವ ಭಕ್ತನೆನಿಸಿಕೊಂಡನು.[೪]

ಆಳ್ವಾರರು ತಮ್ಮ ಕೃತಿಗಳಲ್ಲಿ ಪರಮಾನಂದವನ್ನು ತುಂಬಿದ್ದಾರೆ. ಭಾವನೆಗಳನ್ನು ವಿಕಾಸಗೊಳಿಸಿ ಪರಮಾತ್ಮನ ಮುಂದೆ ತಮ್ಮ ಮನಸ್ಸನ್ನು ಬಿಚ್ಚಿಟ್ಟು, ಆತನ ಸಾನ್ನಿಧ್ಯವಿಲ್ಲದೆ ಶಾಂತಿಯು ಲಭಿಸಲಾರದು ಎಂದು ತೋರಿಸಿ ಕೊಟ್ಟಿದ್ದಾರೆ.[೫] ಮತ್ತು ಸಾನ್ನಿಧ್ಯದ ಮುಂದೆ ಎಲ್ಲವೂ ತ್ಯಾಜ್ಯವೆಂದು ಕಂಡು ಹಿಡಿದಿದ್ದಾರೆ.[೬] ಆಳ್ವಾರರು ರಂಗನಾಥನನ್ನು, ವರದರಾಜ ಸ್ವಾಮಿಯನ್ನು ಇಲ್ಲವೆ ತಿರುಪತಿಯ ವೇಂಕಟೇಶನನ್ನು ಪೂಜಿಸುವ ಉದ್ದೇಶವೆಂದರೆ, ಯಾವ

---

(೧) J. S. M. Hooper: Hymns of Alwars Page 11.
(೨) Ibid Pages 12, 13 & 61.
(೩) J. S. M. Hoopers Hymns of Alwars Pages 47,48,44.
(೪) J. S. M. Hoopers: Hymns of Alwars Page 14, 16.
(೫) Ibid Page 21
(೬) Ibid Page 44.

ದೇವರನ್ನು ಪೂಜಿಸಿದರೂ ಸರ್ವೋತ್ತಮನಿಗೆ ಮುಟ್ಟುವದು. ವಿಷ್ಣು, ಶಿವ, ಬ್ರಹ್ಮ ಇವರು ಬೇರೆ ಬೇರೆ ಎಂದು ಕಂಡರೂ ಶಿವ, ಬ್ರಹ್ಮರಿಗೆ ಮಾಡಿದ ಸೇವೆಯು ಪರಮ ಪುರುಷನಿಗೆ ಸಲ್ಲುವುದು. ಶಿವನ ಪೂಜೆ ಮಾಡಿದರು ಕೂಡ ವಿಷ್ಣುವಿನ ಪೂಜೆ ಮಾಡಿದಂತೆ ಎಂದು ಆಳ್ವಾರರ ಪ್ರಬಂಧಗಳಲ್ಲಿ ಹೇಳಿದೆ.(೧)

೭. **ನಾಥಮುನಿ :—** ಆಳ್ವಾರರ ತರುವಾಯ ತಮಿಳು ನಾಡಿನಲ್ಲಿ ವೈಷ್ಣವ ಭಕ್ತಿಯನ್ನು ಬೆಳೆಸಿದವರೆಂದರೆ ಆಚಾರ್ಯರು. ಅವರಲ್ಲಿ ಮೊದಲಿಗ ರೆಂದರೆ ನಾಥಮುನಿಗಳು.(೨) ಶಠಕೋಪನು ಬರೆದ ಪ್ರಬಂಧಗಳು ಇವರಿಗೆ ಪ್ರಿಯವಾದವು. ಇವರು ನ್ಯಾಯತತ್ವವನ್ನು ಬರೆದರು. ಇದರಲ್ಲಿ ವಿಶಿಷ್ಟಾ ದ್ವೈತದ ಕುರುಹುಗಳು ಕಾಣುತ್ತವೆ. ಈ ಪಂಥವನ್ನು ಪ್ರಕಾಶಕ್ಕೆ ತಂದವ ರೆಂದರೆ, ಶ್ರೀರಾಮಾನುಜರು. ಭಗವದ್ಗೀತೆ ಮತ್ತು ಪಂಚರಾತ್ರ ತಂತ್ರ ಇವು ಈ ಧರ್ಮದ ತಳಹದಿಯಾಗಿವೆ.(೩) ಶರಣಾಗತರಾದವರನ್ನು ಪರಮಾತ್ಮನು ಮಾಯೆಯಿಂದ ಮುಕ್ತ ಮಾಡುತ್ತಾನೆ. ಎಂಬ ಗೀತೆಯ ಮಾತಿನ ಮೇಲೆ ಇವರ ಭಕ್ತಿ.(೪) ನಾಥ ಮುನಿಗಳು ಇ. ಸ. ೯೨೦ ರಲ್ಲಿ ತೀರಿದರು. ಇವರ ತರು ವಾಯ ಹೆಸರಾದವರೆಂದರೆ ಇವರ ಮೊಮ್ಮಕ್ಕಳಾದ ಯಮುನಾಚಾರ್ಯರು.(೫) ಇವರು ಆಗಮ ಪ್ರಾಮಾಣ್ಯವನ್ನು ಬರೆದು ಭಾಗವತ ಪಂಥವನ್ನು ಎತ್ತಿಹಿಡಿದು ಶ್ರೀ ಶಂಕರಾಚಾರ್ಯರ ಮತವನ್ನು ಖಂಡಿಸಿದರು. ಮತ್ತು ಚೋಳ ಅರಸರ ಆಸ್ಥಾನ ಪಂಡಿತರಾದ ಅಕ್ಕಿ ಆಳ್ವಾರರನ್ನು ಸೋಲಿಸಿ, ಚೋಳನ ರಾಣಿಯಿಂದ ಆಳ್ವಂದಾರ ( ವೀರ ) ನೆಂದು ಕರೆಯಿಸಿಕೊಂಡರು.(೬) ಇವರು ಗೀತಾರ್ಥ ಸಂಗ್ರಹವನ್ನು ಬರೆದು, ಭಕ್ತಿಗೆ ಕರ್ಮ ಮತ್ತು ಜ್ಞಾನಯೋಗ ಇವು ಸಾಧನ

---

(೧) J. S. M. Hooper: Hymns of Alwars Page 24 & Ibid Page 58.

(೨) Sir R. G. Bhandarkar Vai & Sai & M. R. S. p. 51.

(೩) Hemchandra Ray Chaudhari: E. H. V. S. p. 189,190

(೪) ಭಗವದ್ಗೀತೆ: ಅಧ್ಯಾಯ ೭ ಶ್ಲೋಕ ೧೪.

(೫) Sir R. G. Bhandarkar: Vai. Sai. & M. R. S. p. 191,

(೬) Hemchandra Ray Chaudhari: E. H. V. S. page 191.

ಗಳೆಂದು ಪ್ರತಿಪಾದಿಸಿದರು.[೧] ಇವರು "ಸ್ತೋತ್ರರತ್ನ" ವನ್ನು ಬರೆದು ದಕ್ಷಿಣ ದಲ್ಲಿ, ವೈಷ್ಣವ ಧರ್ಮದ ಮಹತ್ವವು ಎಷ್ಟಿದೆ ಎಂಬುವನ್ನು ತೋರಿಸಿಕೊಟ್ಟರು.

**೮. ರಾಮಾನುಜ :—** ಯಾಮುನಾಚಾರ್ಯರ ತರುವಾಯ ರಾಮಾ ನುಜಾಚಾರ್ಯರು ಆಚಾರ್ಯರಾದರು. ಇವರು ಇ. ಸ. ೧೦೧೭ ರಲ್ಲಿ ಹುಟ್ಟಿದರು. ಬಾಲ್ಯದಲ್ಲಿ ಕಾಂಚಿಪುರದಲ್ಲಿದ್ದು, ಯಾದವಪ್ರಕಾಶರಲ್ಲಿ ಅಭ್ಯಾಸ ಮಾಡಿದರು. ಯಾದವಪ್ರಕಾಶರ ಅದ್ವೈತ ತತ್ವಗಳನ್ನು ರಾಮಾನುಜರು ಒಪ್ಪಲಿಲ್ಲ. ಕಾರಣ ಅವರು ತಮ್ಮ ಗುರುಗಳನ್ನು ಬಿಟ್ಟು, ಶ್ರೀರಂಗಕ್ಕೆ ಹೋಗಿ, ಆಳ್ವಾರರ ಪ್ರಬಂಧ ಗಳನ್ನು ಓದಿಕೊಂಡರು. ಧರ್ಮ ಪ್ರಸಾರಕ್ಕೆ ಹೊರಟರು. ಮತ್ತು ದ್ವಾರ ಸಮುದ್ರದ ಬಿಟ್ಟಿದೇವನನ್ನು ವೈಷ್ಣವ ಮತಕ್ಕೆ ಎಳೆದುಕೊಂಡರು (ಇ. ಸ. ೧೦೯೮)[೨] ರಾಮಾನುಜರು ವೇದಾಂತಸೂತ್ರ, ವೇದಾರ್ಥ ಸಂಗ್ರಹ, ವೇದಾಂತದೀಪ ಮತ್ತು ಬ್ರಹ್ಮಸೂತ್ರ, ಭಗವದ್ಗೀತೆಗಳ ಮೇಲೆ ಭಾಷ್ಯಗಳನ್ನು ಬರೆದು, ದೇವರು ಎಲ್ಲರಿಗೂ ಸಮಾನ. ಭಕ್ತಿಯಿಂದ ಆತನನ್ನು ಸಾಧ್ಯ ಮಾಡಿಕೊಳ್ಳಬೇಕು ಎಂದು ಸಾರಿದರು. ಇದರಿಂದ ದಕ್ಷಿಣದಲ್ಲಿ ಈ ಪಂಥವು ಬೆಳೆಯಿತು. ಆದರೆ ಉತ್ತರದಲ್ಲಿ ಮಾತ್ರ ಅಷ್ಟು ಬೆಳೆಯಲಿಲ್ಲ.[೩]

**೯. ರಾಮಾನಂದ :—** ರಾಮಾನುಜರ ತರುವಾಯ ಉತ್ತರ ಭಾರತ ದವರಾದ ರಾಮಾನಂದರು ಆಚಾರ್ಯರಾದರು. ಮತ್ತು ಧರ್ಮಪ್ರಸಾರ ಮಾಡ ಹತ್ತಿದರು. ಇವರು ಕೂಡ ರಾಮಾನುಜರಂತೆ ಜಾತಿ ಮತಗಳ ಬಂಧನವನ್ನು ತೆಗೆದೊಗೆದರು. ಆದರೆ ಅವರ ಆಪ್ತರಿಗೆ ಇದು ರುಚಿಸಲಿಲ್ಲ. ಆದರಗೋಸ್ಕರ

---

(೧) Ibid Page 191.

(೨) Sir R. G. Bhandarkar: Vai. Sai. & M. R. S. Pages 51, 52 ಬಿಟ್ಟಿದೇವನನ್ನು ವೈಷ್ಣವ ಮತಕ್ಕೆ ಎಳೆದುಕೊಂಡದ್ದು ನಿಶ್ಚಿತವಿಲ್ಲ ಎಂದು Prof. Mugali R. S. ಇವರು ತಮ್ಮ Heritage of Karnatak p. 114,115ರ ಅಡಿ ಟಿಪ್ಪಣಿಯಲ್ಲಿ ಕಾಣಿಸಿದ್ದಾರೆ. ಇನ್ನೂ ಇದು ಚರ್ಚೆಯ ವಿಷಯ.

(೩) Sir R. G. Bhandarkar: Vai. Sai. & M. R. S. Page 56.

ಅವರು ರಾಮಾನಂದರನ್ನು ಅವಮಾನಗೊಳಿಸಿದರು.[೧] ರಾಮಾನಂದರು ಇದನ್ನು ಸಹಿಸದೆ ಉತ್ತರಕ್ಕೆ ಹೋಗಿ, ತಮ್ಮ ಜನ್ಮಸ್ಥಳವಾದ ಪ್ರಯಾಗದಲ್ಲಿ ರಲು ಹೊರಟು ಹೋದರು.[೨] ಮತ್ತು ಉತ್ತರದಲ್ಲಿ ಹೊಸ ಪಂಥವನ್ನು ಸ್ಥಾಪಿಸಿದರು. ಅದಕ್ಕೆ ಕಬೀರ, ತುಳಸೀದಾಸರಂಥವರು ಶಿಷ್ಯರು ದೊರಿತು, ಅವರು ಅದನ್ನು ಉತ್ತರದಲ್ಲಿ ಹಬ್ಬಿಸಿದರು.[೩]

## (ಬ) ಉತ್ತರ ಹಿಂದುಸ್ಥಾನದಲ್ಲಿ ಭಕ್ತಿಪಂಥ :—

ರಾಮಾನಂದರು ಉತ್ತರ ಹಿಂದುಸ್ಥಾನದಲ್ಲಿಯ ಜ್ಞಾನ ಮಾರ್ಗ ಮತ್ತು ಯೋಗಮಾರ್ಗ ಇವುಗಳಿಗೆ ಭಕ್ತಿಯನ್ನು ಕೂಡಿಸಿ, ಹೊಸ ಪಂಥವನ್ನು ಸ್ಥಾಪಿಸಿ, ಭಕ್ತಿಯೇ ಮುಕ್ತಿಗೆ ಕಾರಣವೆಂದು ಹೇಳಿದರು. ರಾಮಾನಂದರು ಜಾತಿಯ ಬಂಧನವನ್ನು ತೆಗೆದದ್ದರಿಂದ ಎಲ್ಲ ಜಾತಿಯವರು ಇವರ ಶಿಷ್ಯತ್ವವನ್ನು ವಹಿಸಿದರು.

ಇವರ ಮೊದಲಿನ ೧೨ ಶಿಷ್ಯರಲ್ಲಿ ರವಿದಾಸ ( ಸಮಗಾರ ), ಕಬೀರ (ಮುಸಲ್ಮಾನ), ಧನ್ನಾ (ಜತ ಒಕ್ಕಲಿಗ), ಸೆನಾ (ನಾವಲಿಗ), ಪೀಪಾ (ರಜಪೂತ), ಭವಾನಂದ, ಸುಖಾನಂದ, ಆಶಾನಂದ, ಸರಾ, ಪರಮಾನಂದ, ಸರಾನಂದ, ಮಹಾನಂದ ಮತ್ತು ಶ್ರೀಆನಂದ ಹೀಗೆ ಇವರು ಶಿಷ್ಯರಾಗಿಹೋದರು.[೪] ಇವರಲ್ಲಿ ಕಬೀರನು ಅಗ್ರಗಣ್ಯನು.

೧. **ಕಬೀರ :—** ಈತನು ಇ. ಸ. ೧೩೯೮ ರಲ್ಲಿ ಹುಟ್ಟಿದನು. ಈತನು ರಾಮಾನಂದರ ಕಡೆಯಿಂದ ಉಪದೇಶ ಹೊಂದಿದನು. ಜಾತಿ, ಮತ, ಮೂರ್ತಿಪೂಜೆ, ಯಾತ್ರೆ, ವ್ರತ, ಉಪವಾಸ ಮುಂತಾದ ಎಲ್ಲ ಬಂಧನಗಳನ್ನು

---

(೧) T. Rajagopalacharior: Vaishnava reforms p. 145.

(೨) Sir George Grierson : J. R. A. S. Oct. 1920 A. D. P. 591 and cultural Heritage of India Vol. II P. 249.

(೩) Hemchandra Ray Chaudhari : E. H. V. S. page 195.

(೪) The Cultural Heritage of India Vol. II Page 251.

ಕಿತ್ತು ಹಾಕಿದನು. ಮತ್ತು ಎಲ್ಲ ಮತೀಯರಿಗೆ ಸಮನಾಗಿ ಬೋಧಿಸಿದನು.[೧] ದೇವರು ಹೇಗೆ ದೊರೆಯುವನು? ಎಂಬುದಕ್ಕೆ ಕಬೀರನು ಒಂದು ನುಡಿಯಲ್ಲಿ ಹೇಳಿದ್ದಾನೆ. "ಎಲೈ ಭಕ್ತನೆ, ನೀನು ಅವನನ್ನು ಎಲ್ಲಿ ಹುಡುಕುವೆ? ಅವನು ಗುಡಿಯಲ್ಲಿಲ್ಲ. ಮಸೀದೆಯಲ್ಲಿಲ್ಲ. ಕಾಶಿಯಲ್ಲಿಲ್ಲ. ಕಾಬಾದಲ್ಲಿಲ್ಲ. ಪೂಜಾ ಪುನಸ್ಕಾರಗಳಲ್ಲಿಲ್ಲ. ಹೋಮ ಹವನಗಳಲ್ಲಿಲ್ಲ. ಯೋಗದಲ್ಲಿಲ್ಲ. ತ್ಯಾಗದಲ್ಲಿಲ್ಲ. ಆದರೆ ಪರಮಾತ್ಮನ ಉಪಾಸನೆಯನ್ನು ಮಾಡು........ಪರಮಾತ್ಮನ ಹಾಡುಗಳನ್ನು ಹಾಡು. ಅವನು ಲಭಿಸುವನು."[೨]

ಕಬೀರನು ಸದಾಚರಣೆಗೆ ಹೆಚ್ಚಿನ ಸ್ಥಾನವನ್ನು ಕೊಟ್ಟನು. 'ದೇವರು ಒಬ್ಬನಿದ್ದು, ಎಲ್ಲರಲ್ಲಿಯೂ ಇದ್ದಾನೆ. ಒಬ್ಬರೊಬ್ಬರಿಗೆ ದ್ವೇಷ ಬೇಡ. ಸತ್ಯದಿಂದ ನಡೆಯಿರಿ. ದಯೆಯನ್ನು ತೋರಿಸಿರಿ' ಎಂದು ಕಬೀರನು ಉಪದೇಶ ಮಾಡಿದನು.[೩] ಕಬೀರನ ಹೆಂಡತಿ ಲೋಯಿ ಮತ್ತು ಮಗ ಕಮಾಲ ಇವರೂ ಭಗವದ್ಭಕ್ತರು. ಕಬೀರನ ಶಿಷ್ಯನಾದ ಧರ್ಮದಾಸನು ಮಧ್ಯಪ್ರಾಂತದ ಛತ್ತಿಸಗಡದಲ್ಲಿ ಮಠವನ್ನು ಸ್ಥಾಪಿಸಿದನು. ಕಬೀರನ ಅನುಯಾಯಿಗಳಲ್ಲಿ ದಾದು ಹೆಚ್ಚಿನವನು. ಈತನು ಇ. ಸ. ೧೫೪೪ರಿಂದ ೧೬೦೩ರ ವರೆಗೆ ಇದ್ದನು. ರಜಪುತಾನಾದಲ್ಲಿಯ ನಾರಾಯಣ ಎಂಬ ಹಳ್ಳಿಯಲ್ಲಿದ್ದು ಈತನು ಉಪದೇಶ ಮಾಡಿದನು. ಭಕ್ತಿಯೇ ಮುಕ್ತಿಗೆ ನಿಜವಾದ ಮಾರ್ಗವೆಂದು ಹೇಳಿದನು. ಬಾಬಾಲಾಲನೆಂಬ ಸಾಧು ಪುರುಷನು ಮಾಳವದಲ್ಲಿ ಇ. ಸ. ೧೫೯೦ರಲ್ಲಿ ಹುಟ್ಟಿದನು. ಮುಂದೆ ಸನ್ಮಾರ್ಗದಿಂದ ನಡೆಯುವ ಈ ಬಾಬಾಲಾಲನು ಪಂಜಾಬದಲ್ಲಿ ಹೋಗಿ ಕಬೀರ, ದಾದು ಇವರಂತೆ ತಾನೂ ಬೋಧಿಸಿದನು.[೪]

೨. **ತುಳಸೀದಾಸ** :— ಬಾಂದಾ ಜಿಲ್ಲೆಯಲ್ಲಿ ಒಂದು ಬ್ರಾಹ್ಮಣ ಮನೆತನದಲ್ಲಿ ತುಳಸೀದಾಸನು ಇ. ಸ. ೧೫೩೨ರಲ್ಲಿ ಹುಟ್ಟಿದನು. ರಾಮಾನಂದರ ಪಂಥಕ್ಕೆ ಸೇರಿದರೂ ತುಳಸಿದಾಸನು ರಾಮಭಕ್ತನೆನಿಸಿಕೊಂಡನು.

---

(೧) Ibid Page 254.
(೨) ಕರ್ನಾಟಕ ಸಾಹಿತ್ಯ ಪತ್ರಿಕೆ : ಸಂಪುಟ ೧೬ ಸಂ. ೨ ಪುಟ ೧೨೪.
(೩) The Cultural Heritage of India Vol. II Page 255.
(೪) The Cultural Heritage of India Vol. II Page 258.

" ರಾಮಚರಿತಮಾನಸ " ಮತ್ತು " ವಿನಯಪತ್ರಿಕಾ " ಎಂಬ ಎರಡು ಗ್ರಂಥಗಳನ್ನು ಈತನು ಬರೆದನು. ಈ ಎರಡರಲ್ಲಿಯೂ ಭಕ್ತಿಯು ತುಂಬಿ ತುಳುಕುತ್ತದೆ. ತುಳಸೀದಾಸನು ಎಲ್ಲ ಉತ್ತರ ಹಿಂದುಸ್ಥಾನವನ್ನು ಮತ್ತು ದಕ್ಷಿಣದ ಕೆಲವು ಭಾಗವನ್ನು ಕಂಡು, ಜನರಿಗೆ ಉಪದೇಶ ಮಾಡಿದನು. ಮಧ್ಯಕಾಲದ ಸ್ವತಂತ್ರ ಮತದವರಾದ ಕಬೀರ, ದಾದು ಇವರ ಸಂಗಡಕ್ಕೆ ಈತನು ಸೇರಲಿಲ್ಲ. ಏಕೆಂದರೆ ತುಳಸೀದಾಸನು ಜಾತಿ-ಮತಗಳಿಗೆ ಅಂಟಿಕೊಂಡಿದ್ದನು. ಆದರೂ ಈತನ ಕವಿತಾಶಕ್ತಿ ಮತ್ತು ಭಕ್ತಿ ಇವುಗಳಿಂದ ಜನರು ಈತನನ್ನು ಪ್ರೀತಿಸುತ್ತಿದ್ದರು.[೧]

೩. **ರವಿದಾಸ**:—ರಾಮಾನಂದರ ಶಿಷ್ಯರಲ್ಲಿ ಶ್ರೇಷ್ಠನಾದ ರವಿದಾಸನು ಸಮಗಾರನಿದ್ದರೂ ಪವಿತ್ರ ಮತ್ತು ಶ್ರೇಷ್ಠವಾದ ಆಚರಣೆಯಲ್ಲಿ ಕಾಲಕಳೆದನು. ಚಿತೋಡದ ರಾಣಿಯಾದ ಝಾಲಿಯು ಮತ್ತು ಮೀರಾಬಾಯಿ ಇವರು ರವಿದಾಸನಿಂದ ಉಪದೇಶ ಹೊಂದಿದರು.[೨]

೪. **ಮೀರಾಬಾಯಿ** :— ಇವಳು ರಾಜಾ ಭೋಜನನ್ನು ಮದುವೆಯಾಗಿ ೧೦ ವರ್ಷದ ವರೆಗೆ ಸುಖವಾಗಿದ್ದಳು. ಮುಂದೆ ಗಂಡನು ತೀರಿದ ಬಳಿಕ ಪರಮ ಸಾಧ್ವಿಯಾದ ಮೀರಾಬಾಯಿಯು ಸಂಸಾರವನ್ನು ಬಿಟ್ಟು, ಪರಮಾತ್ಮನ ಪರಮ ಭಕ್ತಳಾದಳು.[೩]

## ( ಕ ) ಬಂಗಾಲದಲ್ಲಿ ಭಕ್ತಿ ಪಂಥ :—

೧. **ಚೈತನ್ಯ** :— ಇವರ ಮೊದಲಿನ ಹೆಸರು ವಿಶ್ವಂಭರನೆಂದಿದ್ದು, ಉತ್ತರ ಬಂಗಾಲದಲ್ಲಿಯ ಸಿಲ್ಹೆಟ ಜಿಲ್ಹೆಯಲ್ಲಿಯ ನವದ್ವೀಪ ಗ್ರಾಮದಲ್ಲಿ ಇ. ಸ. ೧೪೮೫ರಲ್ಲಿ ಇವರು ಹುಟ್ಟಿದರು.[೪] ಚೈತನ್ಯರಕ್ಕಿಂತ ಮೊದಲು ರಾಧಾ ಕೃಷ್ಣರ ಮೇಲೆ ಬರೆದ ಭಕ್ತಿಯ ಪದಗಳು ಚಂಡಿದಾಸ ಮತ್ತು ಜಯದೇವ

---

(೧) Ibid Page 253.

(೨) The Cultural Heritage of India Vol. II Page 253.

(೩) Ibid Page 253.

(೪) Sir R. G. Bhandarkar : Vai, Sai & M. R. S. Page 83.

ಇವರ ಕೃತಿಗಳಲ್ಲಿ ಬಂದಿವೆ.[೧] ಇಂಥ ಭಕ್ತಿಯನ್ನು ಪ್ರಚಾರ ಮಾಡಿದವರೆಂದರೆ ಮಾಧವೇಂದ್ರಪುರಿಗೋಸ್ವಾಮಿ ಮತ್ತು ಈತನ ಶಿಷ್ಯನಾದ ಈಶ್ವರಪುರಿಯು. ತರುವಾಯ ವ್ಯಾಸರಾಯರ ಶಿಷ್ಯರಾದ ಚೈತನ್ಯರು ಈ ಭಕ್ತಿಮಾರ್ಗವನ್ನು ಬಂಗಾಲದಲ್ಲಿ ಹರಡಿದರು.[೨] "ಚೈತನ್ಯ ಚರಿತಾಮೃತ"ದಿಂದ ತಿಳಿಯುವ ದೇನೆಂದರೆ, ರಾಜಾ ಪ್ರತಾಪರುದ್ರನ ವಿದ್ಯಾನಗರದ ಸರ್ವಾಧಿಕಾರಿಯಾದ ರಾಯ ರಮಾನಂದನು ರಾಧೆಯ ದಾಸಿಯಾಗಿ ಭಕ್ತಿಯನ್ನು ನಡೆಸಿದ್ದನು. ಆಮೇಲೆ ಚೈತನ್ಯರು ಈತನ ಕೂಡ ಸಾಧ್ಯಸಾಧನಗಳ ಬಗ್ಗೆ ವಿಚಾರ ಮಾಡಿ, ರಾಧಾ-ಕೃಷ್ಣನ ಭಕ್ತರಾಗಿ ಸೇವೆಯನ್ನು ಮಾಡಹತ್ತಿದರು. ಈ ಮಾರ್ಗವನ್ನು ಅಲಹಾಬಾದಿನ ರೂಪಗೋಸ್ವಾಮಿಗೂ, ಕಾಶಿಯ ಸನಾತನ ಗೋಸ್ವಾಮಿಗೂ ಇವರು ಹೇಳಿದರು. ಆಮೇಲೆ ಇವರು ಮತ್ತು ಇವರ ಅಳಿಯನಾದ ಜೀವ ಗೋಸ್ವಾಮಿಯು ಕೂಡಿ, ಯಾತ್ರಾಸ್ಥಳಗಳಲ್ಲಿ ಭಕ್ತಿಯ ಬಗ್ಗೆ ಉಪದೇಶ ಮಾಡಿ ದರು. ಈ ಪ್ರಚಾರದಿಂದ ರಾಧಾ-ಕೃಷ್ಣನ ಭಕ್ತಿಯು ಬೆಳೆದು ವೃಂದಾವನಕ್ಕೆ ಮಹತ್ವ ಪ್ರಾಪ್ತವಾಯಿತು.[೩]

ಬಂಗಾಲದಲ್ಲಿ ಬರಡಹದಲ್ಲಿದ್ದ ನಿತ್ಯಾನಂದ, ಸಂತಿಪುರದ ಅದ್ವೈತಾಚಾರ್ಯ, ನವದ್ವೀಪದ ಶ್ರೀವಾಸ, ಶ್ರೀಖಂಡ, ಸರ್ಕರ, ನರಹರಿ ಮತ್ತು ಇವರ ಶಿಷ್ಯಂದಿರು ಭಕ್ತಿಮಾರ್ಗವನ್ನು ಪ್ರಸ್ಥಾಪಿಸಿದರು. ದಕ್ಷಿಣದಲ್ಲಿ ಚೈತನ್ಯರು ಭಕ್ತಿಪಂಥ ವನ್ನು ಹಬ್ಬಿಸಿದರು. ಮತ್ತು ವೃಂದಾವನಕ್ಕೆ ಹೋಗುವ ಸಮಯದಲ್ಲಿ ಝುರಿ ಖಂಡದ ಜನರನ್ನು ವೈಷ್ಣವ ಮತಕ್ಕೆ ಎಳೆದರು. ಕಾಶಿಯಲ್ಲಿಯ ಶಾಂಕರ ಮತದವನಾದ ಪ್ರಕಾಶಾನಂದ ಮತ್ತು ಆತನ ಹತ್ತು ಸಾವಿರ ಶಿಷ್ಯರನ್ನು ಚೈತನ್ಯರು ತಮ್ಮ ಮತದವರನ್ನಾಗಿ ಮಾಡಿಕೊಂಡರು. ಇದಕ್ಕೆ ಮುಖ್ಯವಾಗಿ ಚೈತನ್ಯರ ಶಿಷ್ಯರಾದ ನಿತ್ಯಾನಂದರು ಕಾರಣರು.[೪]

ಚೈತನ್ಯರು ಇದೇ ಪ್ರಕಾರ ಆರು ವರ್ಷದ ವರೆಗೆ ಎಲ್ಲ ಕಡೆಗೂ ಅಲೆದಾಡಿ

---

(೧) S. K. De: E. H. of V. Faith etc. Page 1.
(೨) The Cultural Heritage of India Vol. II Page 152.
(೩) The Cultural Heritage of India Vol. II Pages 152 153.
(೪) Ibid Page 153.

ತಮ್ಮ ವಯಸ್ಸಿನ ಮೂವತ್ತನೆಯ ವರ್ಷಕ್ಕೆ ಪುರಿಯಲ್ಲಿ ಬಂದು ನೆಲಿಸಿದರು (ಇ. ಸ. ೧೫೧೫). ಮತ್ತು ತಮ್ಮ ಕೊನೆಯ ೧೮ ವರ್ಷಗಳನ್ನು ಜಗನ್ನಾಥನ ಸೇವೆ ಮಾಡುತ್ತ ಕಳೆದರು. ಚೈತನ್ಯರು ಇ. ಸ. ೧೫೩೩ರ ಜುಲೈ ತಿಂಗಳಲ್ಲಿ ತೀರಿಕೊಂಡರು.[೧] ತರುವಾಯ ಚೈತನ್ಯ ಪಂಥಕ್ಕೆ ಸೇರಿದ ಮುರಾರಿ ಗುಪ್ತ, ಕವಿಕರ್ಣಪುರ ಮತ್ತು ವೃಂದಾವನದಾಸ ಠಾಕೂರರು ಚೈತನ್ಯರ ಚರಿತ್ರೆ ಬರೆದು ಭಕ್ತಿಮಾರ್ಗವನ್ನು ಹರಡಿದರು. ವೃಂದಾವನದಾಸನು ಇ. ಸ. ೧೫೭೫ರಲ್ಲಿ "ಚೈತನ್ಯ ಭಾಗವತ"ವನ್ನು ಬರೆದನು.[೨]

೨. **ಕೃಷ್ಣದಾಸ**:— ಇವರು "ಶ್ರೀಚೈತನ್ಯ ಚರಿತಾಮೃತ"ವನ್ನು ಬರೆದರು. ಮತ್ತು ಅವರಲ್ಲಿ 'ಚೈತನ್ಯರಲ್ಲಿ ಶ್ರೀಕೃಷ್ಣನ ರೂಪವನ್ನು ನೋಡಿದೆನು' ಎಂದು ಬರೆದರು. ಇದರಿಂದ ಚೈತನ್ಯರ ಮೇಲೆ ಜನರ ಭಕ್ತಿಯು ದೃಢವಾಗಿ, ಚೈತನ್ಯರು 'ಶ್ರೀಕೃಷ್ಣ ಪರಮಾತ್ಮ' ಎಂದು ಭಾವಿಸಿ ಜನರು ಅವರ ಸೇವೆಯನ್ನು ಮಾಡಹತ್ತಿದರು.[೩]

ಈ ಭಕ್ತಿ ಪಂಥವು ೧೭ನೆಯ ಶತಮಾನದ ಪೂರ್ವಾರ್ಧದಲ್ಲಿ ಬಂಗಾಲವನ್ನು ತುಂಬಿಕೊಂಡಿತು. ಇವನ್ನು ಹಬ್ಬಿಸಲು ರೂಪಗೋಸ್ವಾಮಿ, ಜೀವಗೋಸ್ವಾಮಿ ಮತ್ತು ಕೃಷ್ಣದಾಸ, ಕವಿರಾಜ ಗೋಸ್ವಾಮಿ, ಇವರು ಕಾರಣರಾದರು.[೪]

೩. **ಹೇಮಲತಾ ಠಾಕುರಾಣಿ**:— ವೈಷ್ಣವ ಭಕ್ತಿಯು ಬಂಗಾಲದಲ್ಲಿ ಹಬ್ಬುತ್ತ ನಡೆದಂತೆ ಎಲ್ಲರೂ ರಾಧಾ-ಕೃಷ್ಣನ ಪೂಜೆ ಮಾಡಹತ್ತಿದರು. ಮತ್ತು ತಾವು ಕೂಡ ಪ್ರಚಾರ ಮಾಡಹತ್ತಿದರು. ಹೀಗೆ ಈ ಪಂಥವನ್ನೂ ಭಕ್ತಿಯನ್ನೂ ಕಾಯ್ದುಕೊಂಡು ಬಂದವರಲ್ಲಿ ಹೇಮಲತಾ ಠಾಕುರಾಣಿ ಮತ್ತು ಅವಳ ಶಿಷ್ಯರು.[೫]

---

(೧) S.K. De: E. H. of V. F. & M. in B. Poge 75.
(೨) The Cultural Heritage of India Vol. II Page 155.
(೩) Ibid Page 157.
(೪) The Culturol Heritage of India Vol II Page 160-
(೫) Ibid Pages 160, 161.

೪. **ಬಲದೇವ ವಿದ್ಯಾಭೂಷಣ:**—೧೭ನೇ ಶತಮಾನದ ಕೊನೆಯ ಭಾಗದಲ್ಲಿ ವಿಶ್ವನಾಥ ಚಕ್ರವರ್ತಿಯು ರಾಧಾಕೃಷ್ಣರ ಮೇಲೆ ಉತ್ತಮ ಗ್ರಂಥ ಗಳನ್ನು ಬರೆದನು. ಮತ್ತು ಭಕ್ತಿಯನ್ನು ಪಸರಿಸಿದನು. ಇವನಿಗಿಂತಲೂ ಹೆಚ್ಚಾಗಿ ಪ್ರಚಾರ ಮಾಡಿದವರೆಂದರೆ, ಬಲದೇವ ವಿದ್ಯಾಭೂಷಣರು. ೧೮ನೇ ಶತಮಾನದ ಪೂರ್ವಭಾಗದಲ್ಲಿ ಇವರು ಬ್ರಹ್ಮಸೂತ್ರದ ಮೇಲೆ ಎಲ್ಲರಲ್ಲಿಯೂ ಭಕ್ತಿಯು ಬಿಂಬಿಸುವಂತೆ " ಗೋವಿಂದ ಭಾಷ್ಯ "ವನ್ನು ಬರೆದರು. ಇದರಿಂದ ಈ ಪಂಥದ ರಕ್ಷಣೆಯಾಯಿತು.[೧]

ಮುಂದೆ ಇವರಲ್ಲಿ ರೂಪಕವಿರಾಜನೆಂಬವನು ಕೇವಲ ಕೃಷ್ಣನ ಲೀಲೆಗಳ ಬಗ್ಗೆ ಧ್ಯಾನ ಮಾಡತಕ್ಕದ್ದೆಂದು ಬೋಧ ಮಾಡಹತ್ತಿದನು. ಇದು ಭಕ್ತರಿಗೆ ರುಚಿಸಲಿಲ್ಲ. ಅವರು ರೂಪಕವಿರಾಜನನ್ನು ತಮ್ಮ ಪಂಥದಿಂದ ಹೊರತಳ್ಳಿ ದರು. ಆಮೇಲೆ ಆತನು ಸಹಜೀಯಾ ಪಂಥವನ್ನು ನಿರ್ಮಾಣ ಮಾಡಿದನು. ಈ ಮಾರ್ಗದವರು ಪ್ರೇಮಕ್ಕೆ ಮಹತ್ವ ಕೊಟ್ಟರು. ಸಾಧನೆ ಮಾಡುವ ಕಾಲಕ್ಕೆ ಈ ಮಾರ್ಗದವರಿಗೆ ಹೆಂಗಸು ಬೇಕು; ಹೆಂಡತಿ ಬೇಡ. ಹೆಂಗಸು ರಾಧೆ ಮತ್ತು ತಾನು ಕೃಷ್ಣ ಎಂದು ತಿಳಿದು, ಇವರು ಪ್ರೇಮಲೀಲೆ ಗಳನ್ನು ಆಡುತ್ತಾರೆ. ಈ ಕಾರಣಗಳ ಮೂಲಕ ಈ ಪಂಥದಲ್ಲಿ ಬೈರಾಗಿ ಮತ್ತು ಬೈರಾಗಿಣಿಯರು ಹೆಚ್ಚಾಗಿ ಬೆಳೆದರು. ಇದರಿಂದ ಚೈತನ್ಯ ಪಂಥವು ಕುಗ್ಗುತ್ತ ನಡೆಯಿತು.

## ( ಡ ) ಮಹಾರಾಷ್ಟ್ರದಲ್ಲಿ ಭಕ್ತಿಪಂಥ :—

೧. **ಹದಿಮೂರನೆಯ ಶತಮಾನ:**—ಇ. ಸ. ೧೨೭೮ರಲ್ಲಿ ಪಂಢರ ಪುರದಲ್ಲಿ ವಿಠ್ಠಲನ ಭಕ್ತಿಯು ಪ್ರಚಾರದಲ್ಲಿದ್ದಿತು. ಈ ಕಾಲದಲ್ಲಿ ಪುಂಡಲೀಕ ಮತ್ತು ಮುಕುಂದರಾಜ ಇವರು ಕನ್ನಡ ನಾಡಿನಲ್ಲಿದ್ದ ವಿಠ್ಠಲನ ( ವಿಷ್ಣು ) ಭಕ್ತರಾದರು.[೨] ಆದರೆ ಮಹಾರಾಷ್ಟ್ರದಲ್ಲಿ ಭಕ್ತಿಯ ಮಾರ್ಗ ತೋರಿಸಿದವರೆಂದರೆ

---

(೧) The Cultural Heritage of India Vol. II Pages 160, 161.
(೨) G. S. Sirdesai : H. M. I. Part II M. P. Vol. I Page 39.

ಜ್ಞಾನೇಶ್ವರರು. ( ಇ. ಸ. ೧೨೭೧-೧೨೯೬ ) ಕೇವಲ ಭಕ್ತಿಯಿಂದಲೇ ದೇವರು ಸಾಧ್ಯನೆಂದು ಅವರ ಮತ.[೧]

೨. **ಹದಿನಾಲ್ಕನೆಯ ಶತಮಾನ** :— ಈ ಕಾಲದಲ್ಲಿ ಪಂಢರಪುರದ ವಿಠ್ಠಲನ ಭಕ್ತರು ಹೆಚ್ಚಾಗಿ ಕಂಡುಬರುತ್ತಾರೆ. ನಾಮದೇವ, ಸವತಾಮಾಳಿ, ಗೋರಾ ಕುಂಭಾರ, ವಿಸೋಬಾ ಖೇಚರ, ನರಹರಿ ಸೋನಾರ, ಚೋಖಾ ಮೇಳಾ ಮತ್ತು ರೋಹಿದಾಸ ಚಾಂಭಾರ ಇವರು ಅಗ್ರಗಣ್ಯರು. ಇವರಲ್ಲಿ ಗೋರಾ ಕುಂಭಾರನು ಭಕ್ತಿಯಲ್ಲಿ ಪರಮ ಶ್ರೇಷ್ಠನೆನಿಸಿಕೊಂಡನು. ನರಹರಿ ಸೋನಾರನು ಮೊದಲು ಶಿವಭಕ್ತನಿದ್ದು, ಆಮೇಲೆ ವಿಠ್ಠಲನ ಭಕ್ತನಾದನು. 'ಎಲ್ಲರೂ ಹರಿಭಕ್ತರಾಗಿರಿ' ಎಂದು ಉಪದೇಶ ಮಾಡಿದನು. ನಾಮದೇವ ನಂತೂ ಅಭಂಗಗಳನ್ನು ಬರೆದು, ಅವುಗಳನ್ನು ಪ್ರಚಾರದಲ್ಲಿ ತಂದು ಭಕ್ತಿ ಯನ್ನು ಎಲ್ಲ ಕಡೆಗೂ ಬೀರಿದನು.[೨]

೩. **ಹದಿನೈದನೆಯ ಶತಮಾನ** :— ದಾಮಾಜಿ ಪಂತನು ಪಂಢರ ಪುರದ ವಿಠ್ಠಲನ ಪರಮ ಭಕ್ತನೆಂದು ತೋರುತ್ತದೆ. ಏಕೆಂದರೆ ಈತನ ಸಲುವಾಗಿ ವಿಠ್ಠಲನು ಹೊಲೆಯನ ವೇಷ ಧರಿಸಿ ಸೇವೆಯನ್ನು ಕೈಕೊಂಡನು.[೩] ಸೇನ ನಾವಲಿಗನು ಬೀದರ ರಾಜ್ಯದಲ್ಲಿದ್ದವನು; ಮತ್ತು ವಿಠ್ಠಲನ ಪರಮ ಭಕ್ತನು. ಇದೇ ಸಮಯದಲ್ಲಿ ಮಂಗಳವೇಢೆಯಲ್ಲಿ ಕಾನ್ಹೋಪಾತ್ರಾ ಎಂಬ ಪಾತರದವಳು ವಿಠ್ಠಲನ ಪರಮ ಭಕ್ತಳಾದಳು. ಇವಳು ತನ್ನ ಸಂಸಾರವನ್ನು ಬಿಟ್ಟು ವಿಠ್ಠಲನ ಪಾದದಲ್ಲಿ ತನ್ನ ಪ್ರಾಣವನ್ನು ಬಿಟ್ಟಳು.[೪]

೪. **ಹದಿನಾರನೆಯ ಶತಮಾನ** :— ಈ ಶತಮಾನದಲ್ಲಿ ಭಕ್ತರಲ್ಲಿ ಶ್ರೇಷ್ಠರೆಂದರೆ ಏಕನಾಥನು. ಈತನು " ಭಾಗವತಾವರೀಲ ಟೀಕಾ " "ರುಕ್ಮಿಣೀ ಸ್ವಯಂವರ " " ರಾಮಗೀತಾ " " ಆನಂದಲಹರಿ " " ಭಾವಾರ್ಥ ರಾಮಾ

---

(೧) R. D. Rande: H. I. P. I. Min. M. Page 111.
(೨) G. S. Sirdesai: H. M. I. Part II M. P. Vol. I Pages 41. 42.
(೩) Ibid Page 44.
(೪) R. D. Ranade : H. I. P. I. M. M. in M. Pages 190, 191.

ಯಣ " "ಏಕನಾಥಿ ಭಾಗವತ"ಗಳನ್ನು ಬರೆದು, ಭಕ್ತಿಮಾರ್ಗವನ್ನು ತೋರಿಸಿಕೊಟ್ಟನು.[೧]

೫. **ಹದಿನೇಳನೆಯ ಶತಮಾನ** :— ಮಹಾರಾಷ್ಟ್ರದಲ್ಲಿ ಈ ಶತಮಾನವನ್ನು ಕೀರ್ತಿಯಿಂದ ಅಲಂಕರಿಸಿದವನೆಂದರೆ, ತುಕಾರಾಮನು. ಪಂಢರಪುರದ ವಿಠ್ಠಲನ ಪರಮ ಭಕ್ತನು. ವಾರಕರಿ ಪಂಥವು ಇವನಿಂದಲೇ ಆರಂಭವಾಯಿತು. ಈತನು ಇ. ಸ. ೧೬೫೦ರಲ್ಲಿ ತೀರಿದನು.[೨] ಈತನು ತನ್ನ ಅಭಂಗಗಳಲ್ಲಿ ತೀರ್ಥಯಾತ್ರೆಯನ್ನು ಜರೆದಿದ್ದಾನೆ. ಯಜ್ಞಯಾಗಾದಿಗಳು ತ್ಯಾಜ್ಯವೆಂದು ಹೇಳಿದ್ದಾನೆ. ಜೋಖಾಯಿ, ಭಹಿರವ, ಗಣಪತಿ ಮುಂತಾದ ದೇವರ ಪೂಜೆಯನ್ನು ಮಾಡುವದು ಸರಿಯಲ್ಲವೆಂದು ತೋರಿಸಿ, ಕೇವಲ ವಿಠ್ಠಲನ ಭಕ್ತನಾಗಿ ಮುಕ್ತಿಯನ್ನು ಪಡೆಯಬೇಕೆಂದು ಉಪದೇಶ ಮಾಡಿದ್ದಾನೆ.[೩]

ರಾಮದಾಸನು ರಾಮನ ಪರಮ ಭಕ್ತನು. ಈತನು ಬರೆದ "ಮನಾಚಿ ಶ್ಲೋಕ"ದಲ್ಲಿ ಮನಸ್ಸಿಗೆ ಬೋಧೆಯಿದೆ. "ದಾಸಬೋಧ"ದಲ್ಲಿ ಸಂಸಾರದಿಂದ ಪಾರಾಗಬೇಕಾದರೆ, ದೇವರ ಧ್ಯಾನವನ್ನು ಮಾಡುವದು ಮನುಷ್ಯನ ಕರ್ತವ್ಯವೆಂದು ಹೇಳಿದೆ.

## (ಇ) ಕರ್ನಾಟಕದಲ್ಲಿ ಭಕ್ತಿಪಂಥ :—

ಉತ್ತರ ಹಿಂದುಸ್ಥಾನ, ಬಂಗಾಲ, ಮಹಾರಾಷ್ಟ್ರಗಳಲ್ಲಿ ವೈಷ್ಣವ ಭಕ್ತಿಯು ಬೆಳೆದಂತೆ ಕರ್ನಾಟಕದಲ್ಲಿಯೂ ಬೆಳೆದದ್ದು ಕಂಡುಬರುವದು. ಈ ಭಕ್ತಿಮಾರ್ಗವನ್ನು ದಾಸಕೂಟದವರು ಹಾಕಿಕೊಟ್ಟರು. ಈ ದಾಸಕೂಟದ ಪರಂಪರೆಯು ಪ್ರಸನ್ನ ವೆಂಕಟದಾಸರ ವರೆಗೆ ಕೆಳಗಿನಂತಿದೆ.

---

(೧) G. S. Sardesai : H. M. I. Part II M. P. Vol. I Page 45.

(೨) R. D. Ranade : H. I. P. I. M. in M. Page 263.

(೩) Sir R. G. Bhandarkar : Vai. Sai. & M. R. S. Pages 96, 97.

## ೧. ಒಂಭತ್ತನೆಯ ಶತಮಾನ

**ಅಚಲಾನಂದರು** :— ಇವರು ಬೆಂಗಳೂರ ಜಿಲ್ಲೆಯಲ್ಲಿಯ ಹೈಗಣಪುರದ ಭಾಗವತ ಧರ್ಮಾಭಿಮಾನಿಗಳಾದ ಬ್ರಾಹ್ಮಣರು. ಇವರು ಭರತಖಂಡವನ್ನು ಪಾದಚಾರಿಗಳಾಗಿ ಸಂಚರಿಸಿ, ಎಲ್ಲೆಲ್ಲಿಯೂ ಭಾಗವತ ಧರ್ಮವನ್ನು ಉಪದೇಶ ಮಾಡಿದರು. ತೀರ್ಥಯಾತ್ರೆಗೆ ಸಾಗಿದ್ದಾಗ ಪಂಢರಪುರಕ್ಕೆ ಬಂದು ಕೆಲವು ಕಾಲ ವಿಠ್ಠಲನನ್ನು ಸೇವಿಸಿದರು. ಅಚಲಾನಂದರಿಗೆ ಶಕೆ ೮೧೧ರಲ್ಲಿ ಅಂದರೆ ಇ. ಸ ೮೮೯ರಲ್ಲಿ ವಿಠ್ಠಲನ ದರ್ಶನವಾಯಿತೆಂದು ಅವರು ಹೇಳಿದ್ದಾರೆ. ತೀರ್ಥಯಾತ್ರೆ ಮುಗಿಸಿದ ನಂತರ ಅಚಲಾನಂದರು ರಟ್ಟೆರಲ್ಲಿ ನೆಲಸಿದರು. ಕರ್ನಾಟಕದಲ್ಲಿ ಮೊದಲು ವೈಷ್ಣವ ಭಕ್ತಿಯನ್ನು ಬೀರಿದವರೆಂದರೆ ಅಚಲಾನಂದರು. ಇವರ ಸಂತತಿಯಲ್ಲಿ ಕ್ರಮವಾಗಿ ಮುದ್ದುವಿಠ್ಠಲ, ಗೋಪೀನಾಥ, ತಿಮ್ಮಣ್ಣದಾಸ ಮತ್ತು ಪಾಂಡುರಂಗ ಎಂದು ಹರಿದಾಸರು ಆಗಿ ಹೋದರು.[೧]

## ೨. ಹದಿಮೂರನೆಯ ಶತಮಾನ

**ಶ್ರೀನರಹರಿತೀರ್ಥರು** :— ಇವರು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಅವರಿಂದ ಸ್ಥಾಪಿಸಲ್ಪಟ್ಟ ಮಾಧ್ವಪೀಠವನ್ನು ಇವರು ಇ. ಸ. ೧೩೨೪ರಿಂದ ೧೩೩೩ರ ವರೆಗೆ ಅಲಂಕರಿಸಿದರು. ಮೊದಲು ಇವರು ಗಂಜಾಂ ಪ್ರಾಂತದಲ್ಲಿ ದಫ್ತರದಾರರಾಗಿದ್ದು, ಶ್ರೀಮದಾನಂದತೀರ್ಥರ ಕಡೆಯಿಂದ ವೈಷ್ಣವ ದೀಕ್ಷೆಯನ್ನು ಹೊಂದಿ, ಮೂಲ ಸೀತಾ-ರಾಮರ ಪ್ರತಿಮೆಗಳನ್ನು ಕಲಿಂಗ ರಾಜರ ಬೊಕ್ಕಸದಿಂದ ತಂದು, ತಮ್ಮ ಗುರುಗಳಿಗೆ ಒಪ್ಪಿಸಿದರು. ಅಚಲಾನಂದರ ತರುವಾಯ ಭಕ್ತಿಗೆ ಪುಟ ದೊರೆತದ್ದು ನರಹರಿತೀರ್ಥರಿಂದ. ಇವರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆಯಲು ಮೊದಲು ಆರಂಭ ಮಾಡಿದರು. ಇವರು ಬರೆದ ಎರಡು ಪದಗಳು ಮಾತ್ರ ದೊರೆತಿವೆ. ಇವರು ದೇವರಿಗೆ ಪ್ರಾರ್ಥಿಸುವ ರೀತಿಯನ್ನು ನೋಡಬಹುದಾಗಿದೆ. "ಹರಿಯೆ, ನಾನು ನಿನ್ನ ದಾಸನು. ಶಬ್ದಮಾತ್ರದಲ್ಲಿ, ಕೃತಿಯಲ್ಲಿ ಸಂಸಾರ ಸುಖಕ್ಕೆ ಮನಸೋತಿರುವೆನು, ದಾನ-ಧರ್ಮದಲ್ಲಿ ಒಂದು ಕಾಸು ವೆಚ್ಚ ಮಾಡಿದೆನೆಂದರೆ ಸಾವಿರ

---

(೧) ಶ್ರೀ. ಬೇಲೂರ ಕೇಶವದಾಸ: ಕ. ಭ. ವಿ. ಭಾಗ ೧ ಪುಟಗಳು ೭-೧೦.

ಹೊನ್ನು ಕೊಟ್ಟೆನೆಂದು ತಿಳಿದುಕೊಳ್ಳುತ್ತೇನೆ. ಆದರೆ ದುರ್ವ್ಯಸನದಲ್ಲಿ ಕೋಟ್ಯಾವಧಿ ಹಣವನ್ನು ವೆಚ್ಚ ಮಾಡಿದರೂ ಒಂದು ಕಾಸು ವೆಚ್ಚ ಮಾಡಿದೆನೆಂದು ತಿಳಿದುಕೊಳ್ಳುತ್ತೇನೆ. ಭಕ್ತಾಭಿಮಾನಿಯೆ, ಪ್ರಲ್ಹಾದ, ಅಜಾಮಿಳ, ಅಹಲ್ಯೆ ಮುಂತಾದ ಅನೇಕ ದಾಸರಿಗೆ ಸಂಕಟ ಕಾಲದಲ್ಲಿ ನೆರವಾಗುವಿ. ನಾನು ನಿನ್ನ ದಾಸನಾಗಿರುವೆನು. ಈ ಸಂಸಾರದಿಂದ ನೀನು ನನ್ನನ್ನು ದಾಟಿಸು."೧ ಇದರಿಂದ ನರಹರಿತೀರ್ಥರ ಹರಿದಾಸನಾಗಬೇಕೆಂಬ ಹಿರಿದಾದ ಬಯಕೆ ಕಂಡು ಬರುವದು.

## ೩. ಹದಿನೈದನೆಯ ಶತಮಾನ

ಹದಿಮೂರನೆಯ ಶತಮಾನದಲ್ಲಿ ನರಹರಿತೀರ್ಥರು ಆಗಿಹೋದ ಬಳಿಕ ಹದಿನಾಲ್ಕನೆಯ ಶತಮಾನದಲ್ಲಿ ದಾಸರು ಯಾರೂ ಆಗಲಿಲ್ಲವೆಂದು ಇಲ್ಲಿಯವರೆಗೆ ದೊರೆತ ಇತಿಹಾಸದಿಂದ ಕಾಣುತ್ತದೆ. ಹದಿನೈದನೆಯ ಶತಮಾನದ ಪೂರ್ವಾರ್ಧದಲ್ಲಿ ಮೊದಲು ದಾಸರಾದವರೆಂದರೆ, ಶ್ರೀಪಾದರಾಯರು.

i) **ಶ್ರೀಪಾದರಾಯರು:—** ಇವರು ಒಂದು ಮಠವನ್ನು ಸ್ಥಾಪಿಸಿ, ದೇವರ ಪೂಜೆಗೈಯುತ್ತ ಸುಖದಿಂದ ಕಾಲ ಕಳೆದರು. ಇವರು ಮತ್ತು ಇವರ ಸಮಕಾಲೀನರಾದ ರಘುನಾಥತೀರ್ಥರು ಕಾಶಿ, ದ್ವಾರಕಾ, ವೃಂದಾವನ ಮುಂತಾದ ಯಾತ್ರೆಗಳನ್ನು ಮಾಡಿದರು.೨ ಶ್ರೀಪಾದರಾಜರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆದು ಪೂಜೆಯ ಕಾಲಕ್ಕೆ ಪಠಿಸಲು ಆರಂಭ ಮಾಡಿದರು. ಇವರು ಬರೆದ "ಭ್ರಮರ ಗೀತೆ" "ವೇಣು ಗೀತೆ" ಮತ್ತು "ಗೋಪೀ ಗೀತೆ" ಇವು ಅವರ ವಾಣಿಯಲ್ಲಿದ್ದ ಮಾಧುರ್ಯವನ್ನು ಎತ್ತಿ ತೋರಿಸುತ್ತವೆ. ಶ್ರೀಪಾದರಾಯರಲ್ಲಿದ್ದ ಗುಣಗಳಿಗೆ ಮೆಚ್ಚಿ ಚಂದ್ರಗಿರಿಯ ಸಾಳ್ವ ನರಸಿಂಹನು ಇವರಿಗೆ ಕನಕಾಭಿಷೇಕ ಮಾಡಿದನು. (ಇ. ಸ. ೧೪೯೭)೩ ಶ್ರೀಪಾದರಾಜರು ತಮ್ಮ ಕೀರ್ತನೆಗಳಲ್ಲಿ ಶ್ರೀ ವಾಯು, ಹನುಮ, ಭೀಮ, ಮಧ್ವರ ವರ್ಣನೆ, ಕೃಷ್ಣನ ಬಾಲಲೀಲೆಯ ವರ್ಣನೆ, ದೇವರ ಅಗಾಧ ಮಹಿಮೆ, ತಮ್ಮಲ್ಲಿ

೧. A. P. K. & N. B. K: M, T. of H. K. pages 28, 29,

೨. ಕ. ಹ. ಕೀ. ತ. ಸಂ. ೩. ಸಂಚಿಕೆ ಶ್ರೀಪಾದರಾಜರು ಪುಟ ೭.

೩. A. P. K. & N. B. K: M. T. of H. K. pages 30, 31.

ತುಂಬಿದ ದೋಷಗಳು, ಇವುಗಳನ್ನು ನಿವಾರಿಸಲು ದೇವರಿಗೆ ಸಾಧ್ಯ, ತಾವು …………ದೇವರ ದಾಸರು ಮುಂತಾದ ವಿಷಯುಗಳ ಬಗ್ಗೆ ಬರೆದಿದ್ದಾರೆ. ಕೃತಿಗಳಲ್ಲಿಯ ತಿರುಳೆಂದರೆ, ಶ್ರೀಹರಿಯು ಸರ್ವೋತ್ತಮನು, ಆತನನ್ನು ಭಜಿಸಿದರೆ ಮಾತ್ರ ಮನುಷ್ಯನು ಸಂಸಾರದಿಂದ ಮುಕ್ತನಾಗುವನು.

**ii) ವ್ಯಾಸರಾಯರು:**—(ಇ. ಸ. ೧೪೪೬-೧೫೩೯).

ಶ್ರೀಮದುತ್ತರಾದಿ ಮಠದ ಪೀಠಸ್ಥರಾದ ಶ್ರೀ ವಿದ್ಯಾಧಿರಾಜರು ರಾಜೇಂದ್ರರೆಂಬವರಿಗೆ ಆಶ್ರಮುವನ್ನು ಕೊಟ್ಟರು. ಶ್ರೀರಾಜೇಂದ್ರರು ಸೋಸಲೆಯಲ್ಲಿ ಬೇರೊಂದು ಮಠವನ್ನು ಸ್ಥಾಪಿಸಿದರು. ಈ ಮಠವಲ್ಲಿ ಮುಂದೆ ಶ್ರೀ ವ್ಯಾಸರಾಯರು ಬಂದು ಬಹು ಮಹಿಮೆ ತೋರಿಸಿದರು. ಆದಕಾರಣದಿಂದ ಈ ಮಠಕ್ಕೆ ವ್ಯಾಸರಾಯರ ಮಠವೆಂಬ ಹೆಸರು ಬಂದಿತು.೧ ವ್ಯಾಸರಾಯರ ಕಾಲದಲ್ಲಿ ದಾಸಕೂಟ ಮತ್ತು ವ್ಯಾಸಕೂಟ ಎಂಬ ಎರಡು ಭೇದಗಳು ಕಂಡು ಬರುತ್ತವೆ. ಕನ್ನಡಕ್ಕೆ ಮಠದಲ್ಲಿ ಪ್ರೋತ್ಸಾಹ ಕೊಟ್ಟವರೆಂದರೆ ಶ್ರೀವ್ಯಾಸರಾಯರೆ. ಇವರು ಸಂಸ್ಕೃತದಲ್ಲಿ ಪಂಡಿತರಿದ್ದು "ತರ್ಕತಾಂಡವ" "ನ್ಯಾಯಾಮೃತ" ಮತ್ತು "ಚಂದ್ರಿಕಾ" ಇವುಗಳನ್ನು ಬರೆದಿದ್ದಾರೆ. ಇವರು ಬರೆದ ಕೀರ್ತನೆಗಳಂತೂ ಹೇರಳವಾಗಿವೆ. ಕುಹು ಯೋಗದಿಂದ ವಿಜಯನಗರದ ಕೃಷ್ಣರಾಯನನ್ನು ಇವರು ರಕ್ಷಿಸಿದರೆಂಬ ಪ್ರತೀತಿ ಇದೆ. ಇವರು ವಿಜಯನಗರದ ಅರಸರಿಗೆ ಗುರುಗಳಾಗಿದ್ದರು. ಇವರ ವೃಂದಾವನವು ಆನೆಗುಂದಿಯಲ್ಲಿದೆ.೨ ಹಿಂದಿನವರಂತೆ ಶ್ರೀವ್ಯಾಸರಾಯರು ಕೂಡ ತಮ್ಮನ್ನು ಸಂಸಾರದಿಂದ ಮುಕ್ತ ಮಾಡು ಎಂದು ದೇವರಿಗೆ ಬೇಡಿಕೊಂಡಿದ್ದಾರೆ. ಭಕ್ತಿಯೇ ಮೋಕ್ಷಕ್ಕೆ ಮೂಲವೆಂದು ಇವರ ಕೂಗು.

## ೪. ಹದಿನಾರನೆಯ ಶತಮಾನ.

**i) ಶ್ರೀಪುರಂದರದಾಸರು:**—(ಇ. ಸ. ೧೪೮೪-೧೫೬೪)

ಇವರು ೧೫ನೇ ಶತಮಾನದ ಕೊನೆಯ ಭಾಗದಲ್ಲಿ ಹುಟ್ಟಿ, ೧೬ನೇ ಶತಮಾನದಲ್ಲಿ ದಾಸರೆಂದೆನಿಸಿಕೊಂಡರು. ಇವರ ಪೂರ್ವಾಶ್ರಮದ ಹೆಸರು

೧. ಭೀ. ಕಮಲಾಪೂರ: ಸತ್ಕಥಾ ಪುಟ ೧೪೫.

೨. A. R. K. & N. B. K: M. T. of H. K. pages 39, 41.

ಸೀನಪ್ಪ ಎಂದಿದ್ದು ಇವರು ಪುರಂದರಗಡದಲ್ಲಿ ಹುಟ್ಟಿದರು. ಮುಂದೆ ತಾರುಣ್ಯಾವಸ್ಥೆಯಲ್ಲಿ ಸಂಸಾರವನ್ನು ಬಿಟ್ಟು, ಪಂಢರಪುರದ ವಿಠ್ಠಲನ ಭಕ್ತರಾದರು. ಮತ್ತು ವ್ಯಾಸರಾಯರ ಶಿಷ್ಯತ್ವವನ್ನು ವಹಿಸಿದರು. ದಾಸಕೂಟಕ್ಕೆ ಸೇರಿದರು. ದ್ವೈತ ಸಂಪ್ರದಾಯಕ್ಕೆ ಮೆಚ್ಚಿ, ಕೀರ್ತನೆಗಳನ್ನು ರಚಿಸಿದರು. ಪುರಂದರ ದಾಸರು ಕವಿಗಳು, ತತ್ವಜ್ಞಾನಿಗಳು, ಅನುಭವಿಗಳು, ದಯಾಸಂಪನ್ನರು ಮತ್ತು ಹರಿಭಕ್ತಿಪರಾಯಣರು, ಎಂದು ಇವರ ಕೀರ್ತನೆಗಳ ಮೇಲಿಂದ ಕಂಡುಬರುವದು. ಇವರ ಸಾಹಿತ್ಯಸೇವೆಯು ಅಪಾರವಾದದ್ದು. ಇವರು ಅಡಿಗಡಿಗೆ ಹರಿಮಹಿಮೆಯನ್ನು ತೋರಿಸಿದ್ದಾರೆ. ೧

ii) **ಶ್ರೀಕನಕದಾಸರು**:— ಇವರು ವ್ಯಾಸರಾಯರ ಪರಮ ಶಿಷ್ಯರಾಗಿದ್ದರು. ದಾಸಕೂಟಕ್ಕೆ ಸೇರಿದರು. ಮೊದಲು ಶ್ರೀವೈಷ್ಣವ ಮತಕ್ಕೆ ಸೇರಿ, ಆಮೇಲೆ ಮಧ್ವಮತಾನುಯಾಯಿಯಾದರು. ಇವರು ಹರಿಯ ಪರಮ ಭಕ್ತರು. ದಾಸಕೂಟದಲ್ಲಿ ಪುರಂದರದಾಸರ ತರುವಾಯ ಕನ್ನಡ ಸಾಹಿತ್ಯವನ್ನು ಬೆಳೆಸಿದವರೆಂದರೆ ಕನಕದಾಸರು. "ನರಸಿಂಹ ಸ್ತೋತ್ರ" "ಮೋಹನ ತರಂಗಿಣಿ" "ರಾಮಧ್ಯಾನ ಮಂತ್ರ" "ಹರಿಭಕ್ತಿಸಾರ" ಮತ್ತು "ನಳ ಚರಿತ್ರೆ ಇವುಗಳನ್ನು ನೋಡಿದರೆ, ದಾಸರ ಭಕ್ತಿ ಮತ್ತು ಪಾಂಡಿತ್ಯ ಕಂಡುಬರುವವು. ಹಿಂದಿನ ದಾಸರ ಪರಂಪರೆಯು ಇವರಲ್ಲಿಯೂ ಕಂಡುಬರುವದು.೨

iii) **ಶ್ರೀವಾದಿರಾಜತೀರ್ಥರು**:— (ಇ. ಸ. ೧೪೮೦–೧೬೦೦)

ಶ್ರೀವಾದಿರಾಜತೀರ್ಥರು ಇಲ್ಲವೆ ಸೋದೆಯ ರಾಜರು ಶ್ರೀಮಧ್ವಾಚಾರ್ಯರ ತರುವಾಯ ಪ್ರಸಿದ್ಧಿಗೆ ಬಂದರು. ಸೋದೆಯ ರಾಜರು ಮಹಾ ತಪಸ್ವಿಗಳೂ, ಯೋಗಮರ್ಮಜ್ಞರೂ, ಮಹಾಪಂಡಿತರೂ, ತ್ರಿಕಾಲಜ್ಞರೂ, ಶಾಪಾನುಗ್ರಹ ಶಕ್ತರೂ ಆಗಿ ಧರ್ಮರಕ್ಷಣೆ ಮಾಡಿದರು. ಇವರು ೧೨೦ ವರುಷಗಳ ಅವಧಿಯಲ್ಲಿ ಸಂಸ್ಕೃತ ಗ್ರಂಥಗಳನ್ನೂ, ಕನ್ನಡ ಗ್ರಂಥಗಳನ್ನೂ, ಕೀರ್ತನೆಗಳನ್ನೂ, ತುಳು ಭಾಷೆಯಲ್ಲಿ ದಶಾವತಾರವನ್ನೂ ಬರೆದರು. ಹಿಂದುಸ್ಥಾನದಲ್ಲಿದ್ದ ಎಲ್ಲ ತೀರ್ಥಯಾತ್ರೆಗಳನ್ನು ಮಾಡುವ ಕಾಲದಲ್ಲಿ ವಿಜಯನಗರದ

---

೧. A. P. K. & N. B. K: M. T. of H. K. pages 49, 53.

೨. Ibed pages 68, 70.

ಅರಸರಾದ ವೆಂಕಟಪತಿರಾಜರ ಆಸ್ಥಾನದಲ್ಲಿದ್ದ ಸಕಲ ವಾದಿಗಳನ್ನು ಜಯಿಸಿದರು. ಇವರ ಕೃತಿಗಳಲ್ಲಿ ಭಕ್ತಿಯು ತುಂಬಿದೆ. ವಾದಿರಾಜತೀರ್ಥರು ದಾಸಕೂಟದ ಸಂಪ್ರದಾಯದಂತೆ ಎಲ್ಲ ವಿಷಯಗಳ ಬಗ್ಗೆ ಬರೆದಿದ್ದಾರೆ.[೧]

ಇಲ್ಲಿಯ ವರೆಗೆ ಅಚಲಾನಂದರಿಂದ ಶ್ರೀಪ್ರಸನ್ನ ವೆಂಕಟರ ವರೆಗಿನ ಹೆಸರಾದ ಮತ್ತು ವೈಷ್ಣವ ಭಕ್ತಿಯನ್ನು ಹರಡಿದ ದಾಸರ ಪರಂಪರೆಯನ್ನು ಕೊಡಲಾಯಿತು. ಶ್ರೀಪ್ರಸನ್ನ ವೆಂಕಟದಾಸರ ಸಮಕಾಲೀನರಾದವರು ಶ್ರೀವಿಜಯದಾಸರು, ಶ್ರೀ ಗೋಪಾಲದಾಸರು ಮತ್ತು ಶ್ರೀ ಜಗನ್ನಾಥದಾಸರು. ಇವರ ಕೃತಿಗಳನ್ನು ನೋಡಿದರೆ, ತಮ್ಮ ಪೂರ್ವಿಕರಂತೆ ಹರಿಯ ಹಿರಿಮೆ, ಭವಬಂಧನ ಪಾಶದಿಂದ ಮುಕ್ತರಾಗಲು ಪ್ರಾರ್ಥನೆ, ಈಶ-ಜೀವ-ಜಗತ್ತು ಇವುಗಳಲ್ಲಿಯ ಭೇದ, ಮಧ್ವ ಮತದಲ್ಲಿದ್ದ ತಾರತಮ್ಯ ಭಾವ, ಭಕ್ತಿಯೇ ಮುಕ್ತಿಗೆ ಸಾಧನ ಮುಂತಾದ ವಿಷಯಗಳಮೇಲೆ ಇವರು ಬರೆದಿದ್ದಾರೆ. ಇನ್ನು ಶ್ರೀಪ್ರಸನ್ನ ವೆಂಕಟದಾಸರು ಈ ಪರಂಪರೆಯನ್ನು ಎಷ್ಟರ ಮಟ್ಟಿಗೆ ಕಾಯ್ದುಕೊಂಡಿದ್ದಾರೆ, ವೈಷ್ಣವ ಭಕ್ತಿಯು ಯಾವ ಮಟ್ಟಕ್ಕೆ ಮುಟ್ಟಿದೆ, ಅವರಲ್ಲಿ ಔಚಿತ್ಯವು ಎಷ್ಟರ ಮಟ್ಟಿಗೆ ಇದೆ, ಕೃತಿಗಳ ಮೇಲಿಂದ ದಾಸರ ವ್ಯಕ್ತಿತ್ವ ಹೇಗೆ ಕಾಣುತ್ತದೆ, ಎಂಬುದನ್ನು ನೋಡುವದು ಈ ಪ್ರಬಂಧದ ಉದ್ದೇಶವಾದ್ದರಿಂದ ಅವುಗಳನ್ನು ಮುಂದೆ ಕೊಡಲಾಗಿದೆ.

---

೧. ಕರ್ನಾಟಕ ಹರಿದಾಸ ಕೀ. ತ. ಸಂಪುಟ ೩ ವಾದಿರಾಜ ಕೃ. ಪು. ೧—೧೨.

ಭಾಗ ೨.

# ದ್ವೈತ ಸಿದ್ಧಾಂತದ ಪ್ರಮೇಯಗಳು
ಮತ್ತು
# ದಾಸರಲ್ಲಿ ಅವುಗಳನ್ನು ಕಾಣುವ ಬಗೆ.

ಶ್ರೀಮನ್ ಮಧ್ವಾಚಾರ್ಯರು ಬರುವದಕ್ಕಿಂತ ಮುಂಚಿತವಾಗಿ ಭರತ ಖಂಡದಲ್ಲಿ ಇಪ್ಪತ್ತೊಂದು ಮತಗಳು ಸ್ಥಾಪಿತವಾಗಿ ಅವು ತಮ್ಮ ತತ್ವಗಳನ್ನು ಬೀರುತ್ತಲಿದ್ದವು. ಶ್ರೀ ಮಧ್ವಾಚಾರ್ಯರು ಹಿಂದಿನ ಇಪ್ಪತ್ತೊಂದು ಮತ ಗಳನ್ನು ಖಂಡಿಸಿ ದ್ವೈತ ಮತವನ್ನು ಸ್ಥಾಪಿಸಿದರು. ಈ ಮತದ ತಿರುಳನ್ನು ಶ್ರೀವ್ಯಾಸರಾಯರು ಈ ಪ್ರಕಾರ ಹೇಳಿದ್ದಾರೆ:—

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ |
ಭಿನ್ನಾ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ||
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ ಸಾಧನಮ್ |
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ||

ಶ್ರೇಷ್ಠರಾದ ಶ್ರೀಮಧ್ವಾಚಾರ್ಯರಿಂದ ಸ್ಥಾಪಿತವಾದ ದ್ವೈತ ಮತದಲ್ಲಿ ಕಾಣುವದೇನಂದರೆ:—

೧. ಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠರಾದವರೆಂದರೆ, ಶ್ರೀಯು, ಲಕ್ಷ್ಮೀದೇವಿಯು. ಇವಳು ನಿತ್ಯ ಮುಕ್ತಳು. ಇವಳಿಗಿಂತಲೂ ಶ್ರೇಷ್ಠನಾ ದವನು ಶ್ರೀಮನ್ ನಾರಾಯಣನು, ಹರಿಯು, ಪರಮಾತ್ಮನು. (ಪರತರಃ)

೨. ನಿಜವಾಗಿ ಜಗತ್ತು ಸತ್ಯವಾದದ್ದು.

೩. ಜೀವರಾಶಿಗಳು ನಿಜವಾಗಿ ಭಿನ್ನವಾದವುಗಳು, ಅಂದರೆ ಜೀವ ಜೀವ ಭೇದ, ಜಡ ಜಡ ಭೇದ, ಜೀವ ಜಡ ಭೇದ, ಜೀವ ಈಶಗೆ ಭೇದ, ಜಡ ಈಶಗೆ ಭೇದ. ಹೀಗೆ ಪಂಚ ಭೇದಗಳು.

೪. ಜೀವರಾಶಿಯಿಂದ ದೇವರ, ಪರಮಾತ್ಮನ ವರೆಗೂ ತಾರತಮ್ಯ ದಿಂದ ಭೇದವು ಕಾಣುವುದು. ಉಚ್ಚ ನೀಚ ಭಾವವು ಇರುವದು. ಉದಾ ಹರಣೆಗಾಗಿ ಹೇಳುವುದಾದರೆ, ಲಕ್ಷ್ಮಿಯು ಬ್ರಹ್ಮನನ್ನು ದೇಹಯೋಗದಿಂದ ಸೃಜಿಸಬಲ್ಲಳು. ಜಗದ್ ವ್ಯಾಪಾರವನ್ನು ನಿಲ್ಲಿಸಬಲ್ಲಳು. ನಿತ್ಯ ಮುಕ್ತಳು. ಆದರೂ ಲಕ್ಷ್ಮಿಯು ಸರ್ವೋತ್ತಮನಾದ ಹರಿಯ ಸಮಾನಳಾಗಲಾರಳು. ಅದೇ ಪ್ರಕಾರ ಬ್ರಹ್ಮಾದಿ ದೇವತೆಗಳು ಲಕ್ಷ್ಮಿಯ ಸಮಾನವಾಗಲಾರರು. ಮತ್ತು ಉಳಿದ ಜೀವರಾಶಿಗಳು ಬ್ರಹ್ಮಾದಿ ದೇವತೆಗಳನ್ನು ಹೋಲಲಾರವು.

೫. ನಿಜವಾಗಿ ಬ್ರಹ್ಮಾದಿ ದೇವತೆಗಳಿಂದ ಜೀವರಾಶಿಗಳವರೆಗೆ ಎಲ್ಲರೂ ಪರಮಾತ್ಮನ ಸೇವಕರು.

೬. ನೈಜ—ನಿಜ ಸಂಬಂಧಿ—ಸ್ವರೂಪ ಸಂಬಂಧ ಅನುಭವವೇ ಮುಕ್ತಿಯು.

೭. ನಿರ್ಮಲವಾದಂಥ ಭಕ್ತಿಯು ಮುಕ್ತಿಗೆ ಸಾಧನವು. ಸ್ವರೂಪ ಭಕ್ತಿಯೇ ನಿರ್ಮಲ ಭಕ್ತಿಯು.

೮. ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳು ಯಥಾರ್ಥ ಜ್ಞಾನಕ್ಕೆ ಸಾಧನಗಳು.

೯. ಸಮಸ್ತ ವೇದಗಳಿಂದ ಮುಖ್ಯವಾಗಿ ತಿಳಿದುಕೊಳ್ಳಲಿಕ್ಕೆ ಯೋಗ್ಯ ನಾದಂಥವನು ಶ್ರೀಹರಿಯು. “ವೇದವಿದೇವ ಚಾಹಮ್” ಎಂದು ಪರ ಮಾತ್ಮನು ಗೀತೆಯಲ್ಲಿ ಹೇಳಿದಂತೆ ಎಲ್ಲ ವೇದಗಳನ್ನು ತಿಳಿದುಕೊಳ್ಳುವವನು ಶ್ರೀಹರಿಯು.

ಶ್ರೀ ವ್ಯಾಸರಾಯರು ಮಠಾಧೀಶರಷ್ಟೇ ಅಲ್ಲ, ದಾಸರೂ ಆಗಿದ್ದರು. ಅವರು ಈ ಮೇಲಿನ ಮಧ್ವಮತದ ತಿರುಳನ್ನು ತಮ್ಮ ಕೀರ್ತನೆಗಳ ಮೂಲಕ ಎಲ್ಲ ಕಡೆಗೂ ಬೀರಿದರು. ಇದೇ ಪ್ರಕಾರ ಉಳಿದ ದಾಸರು ಕೂಡ ತಮ್ಮ ಕೀರ್ತನೆಗಳಲ್ಲಿ ಇವುಗಳನ್ನು ತಂದು ದ್ವೈತ ಮತವನ್ನು ಎಲ್ಲ ಕಡೆಗೆ ಹಬ್ಬಿಸಿ, ಹರಿಯು ಸರ್ವೋತ್ತಮನು, ಎಲ್ಲ ಜೀವರು ಪರಮಾತ್ಮನ ಸೇವಕರು, ಭಕ್ತಿಯೇ ಸಾಧನ, ಮುಕ್ತಿಯೇ ಗುರಿ, ಎಂದು ಸಾರಿದರು.

ಈ ತತ್ವಗಳು ಬೇರೆ ಬೇರೆ ದಾಸರ ಕೃತಿಗಳಲ್ಲಿ ಮತ್ತು ವಿಶೇಷವಾಗಿ ಶ್ರೀಪ್ರಸನ್ನ ವೆಂಕಟದಾಸರ ಕೃತಿಗಳಲ್ಲಿ ಎಷ್ಟರ ಮಟ್ಟಿಗೆ ಕಾಣುತ್ತವೆ, ಎಂಬು

ದನ್ನು ನೋಡಬಹುದು.

ಶ್ರೀ ಕನಕದಾಸರು **ಹರಿಯು ಸರ್ವೋತ್ತಮನು** ಎಂದು ಹೇಳಿದ್ದಾರೆ.

ಪರಮ ಪುರುಷ ಹರಿ ಗೋವಿಂದ ಕರಿ
ವರದ ನಾರಾಯಣ ಗೋವಿಂದ ||೧

ಶ್ರೀ ವಿಜಯದಾಸರು **ಹರಿಯು ಸರ್ವೋತ್ತಮನು** ಎನ್ನುವದಕ್ಕೆ "ಹರಿಯೆ ಎಲ್ಲವೂ ನಿನ್ನಾಧೀನ ||೨ ಎಂದು ಹೇಳಿದ್ದಾರೆ. ಇನ್ನು ಶ್ರೀಪ್ರಸನ್ನ ವೆಂಕಟದಾಸರಲ್ಲಿ ಈ ಮಾತನ್ನು "ದೇವ ದೇವೇಶಾ ವೆಂಕಟೇಶಾ ||" "ಶ್ರೀ ವಿಧಾತಾವಂದ್ಯ ಭೂವೈಕುಂಠೇಶಾ||"೩ ಎಂಬ ನುಡಿಯಲ್ಲಿ ಕಾಣಬಹುದು. ಈ ನುಡಿಯಲ್ಲಿಯ ದೀರ್ಘಸ್ವರಗಳು ಹರಿಯ, ದೇವದೇವೇಶನ, ಆ ಪರಮಾತ್ಮನ ವಿಶಾಲತೆಯನ್ನು (Magnanimity) ಎತ್ತಿ ತೋರಿಸುತ್ತಿವೆ.

**ಜಗತ್ತು ಸತ್ಯ**ವೆಂಬುದನ್ನು ದಾಸಶ್ರೇಷ್ಠರೆನಿಸಿದ ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಹೇಳಿದ್ದು ಕಂಡುಬರುವದು.

"ಜೀವೇಶರೈಕ್ಯವು ಜಗತ್ತು ಮಿಥ್ಯವೆಂಬ ।

" ಈ ವಿಧ ಪೇಳುವ ಮಾಯಿಗಳಳಿಯೆಂದು ||"೪ ಎಂದರೆ ಜಗತ್ತು ಮಿಥ್ಯ ಎಂಬುವ ಮಾಯಾವಿಗಳನ್ನು ನಾಶ ಮಾಡು ಎಂದು ದೇವರಿಗೆ ಪ್ರಾರ್ಥಿಸಿದ್ದಾರೆ. ಅದೇ ಪ್ರಕಾರ ಶ್ರೀಪ್ರಸನ್ನ ವೆಂಕಟದಾಸರು ಜಗತ್ತು ಸತ್ಯವೆಂಬುದನ್ನು "ಸತ್ಯ ಬ್ರಹ್ಮಾಂಡದ ರಕ್ಷಾ ||"೫ ಎಂದು ಹೇಳಿದ್ದಾರೆ.

**ಪಂಚಭೇದ** :— ಶ್ರೀಮಧ್ವಾಚಾರ್ಯರು ಹೇಳಿದಂತೆ ಶ್ರೀಪುರಂದರ ದಾಸರು ಈಶ, ಜೀವ ಮತ್ತು ಜಗತ್ತು ಇವುಗಳಲ್ಲಿಯ ಪರಸ್ಪರ ಭೇದವನ್ನು ಹೇಳಿದ್ದಾರೆ.

---

೧. ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ: ಸಂಪುಟ ೨ ಪುಟ ೧೬.

೨. ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ ಸಂಪುಟ ೨ ಪುಟ ೧೫೪.

೩. ಪ್ರಬಂಧ ಪದಗಳಲ್ಲಿಯ ಪದ ಸಂಖ್ಯೆ ೩೨.

೪. ಕ. ಹ. ಕೀ. ತ. ಸಂಪುಟ ೧ ಸಂಚಿಕೆ ೧೨ ಪುಟ ೧೯೫

೫. ಪ್ರಬಂಧ ಪದಗಳಲ್ಲಿಯ ಸಂಖ್ಯೆ ೧೧೫.

"ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ ||
"ಜೀವ ಈಶಗೆ ಭೇದ ಸರ್ವತ್ರ | ಜೀವ ಜೀವಕೆ ಭೇದವು ||
ಜೀವ ಜಡಕೆ ಜಡಜಡಕ್ಕೆ | ಜೀವ ಜಡ ಪರಮಾತ್ಮಗೆ ||"[೧]

ಶ್ರೀಪ್ರಸನ್ನ ವೆಂಕಟದಾಸರೂ ಇಂಥ ಮಾತನ್ನು ತಮ್ಮ ಕೀರ್ತನೆಗಳಲ್ಲಿ ಹೇಳಿದ್ದಾರೆ.

"ಪಂಚಸಂಸ್ಕಾರ ಭೇದ ಪಂಚಯುಕ್ತರಾಗಿ | ಪ್ರ-ಪಂಚ ಸೂರಿ ಪ್ರಸನ್ವೆಂ
ಕಟ | ಪಂಚ ಬಾಣಸಯ್ಯನವರ ||"[೨]

ಈ ನುಡಿಯು ಎಷ್ಟು ಪ್ರಾಸಬದ್ಧವಾಗಿದೆ ಎಂಬುದನ್ನು ನೋಡಬಹುದು.

**ತಾರತಮ್ಯ**:— ಶ್ರೀಪುರಂದರದಾಸರು ತಾರತಮ್ಯದಿಂದ ಈ ಭೇದವನ್ನು ಹೇಳಿದ್ದಾರೆ.

"ತಾರತಮ್ಯ ಪಂಚಭೇದ ಸತ್ಯವೆಂಬ
ಸಾರ ಮಧ್ವಶಾಸ್ತ್ರ ಉದ್ಧಾರ ಮಾಡೆಂದು ||"[೩]

ಶ್ರೀ ಪ್ರಸನ್ನ ವೆಂಕಟದಾಸರೂ ಕೂಡ ತಮ್ಮ ಕೃತಿಗಳಲ್ಲಿ " ಎಷ್ಟು (ತಾತ್ಪರ್ಯ) ತಾರತಮ್ಯ ವರ್ಣನೆಯೂ ||"[೪] ಎಂದು ಹೇಳಿದ್ದಾರೆ.

**ಸೇವ್ಯ-ಸೇವಕ ಭಾವ** :— ಹರಿ ಸರ್ವೋತ್ತಮನು. ಸೇವೆ ಮಾಡಿಸಿಕೊಳ್ಳತಕ್ಕಂಥವನು. ಮತ್ತು ಮನುಷ್ಯನು ಸೇವೆ ಮಾಡುವವನು. ಈ ದಾಸ ಮತ್ತು ಈಶ ಭಾವ ಎಲ್ಲ ದಾಸಶ್ರೇಷ್ಠರಲ್ಲಿಯೂ ಕಾಣುವುದು. ಶ್ರೀವ್ಯಾಸರು ವೈಷ್ಣವ ಮತವನ್ನು ಅಂದರೆ ದ್ವೈತಮತವನ್ನು ಬೀರುವವರಲ್ಲಿ ಪ್ರಮುಖರು. ಅಂದರೆ ಶ್ರೀ ಮಧ್ವಾಚಾರ್ಯ ಮತ್ತು ಟೀಕಾರಾಯರ ತರುವಾಯ ಪ್ರಸಿದ್ಧಿಗೆ ಬಂದವರು. ಅವರು ತಮ್ಮ ಕೃತಿಗಳಲ್ಲಿ:—

---

೧. ಕ. ಹ. ಕೀ. ತ. ಸಂಪುಟ ೧ ಸಂಚಿಕೆ ೭ ಪುಟ ೬೬.
೨. ಪ್ರಬಂಧ ಪದ ಸಂಖ್ಯೆ ೧೧೦.
೩. ಕ. ಹ. ಕೀ. ತ. ಸಂಪುಟ ೧ ಭಾಗ ೧೨.
೪. ಪ್ರಬಂಧ ಪದ ಸಂಖ್ಯೆ .೬೨

"ಶರಣು ಶರಣು । ಶರಣು ಮತ್ಸ್ಯಗೆ ಕೂರ್ಮ ಕ್ರೋಡ। ನರಹರಿ ವಟು
ಭಾರ್ಗವ । ಶರಣು ರಾಘವ ಕೃಷ್ಣ ಬುದ್ಧ । ಶರಣು ಕಲ್ಕಿ ರೂಪನೆ ॥"೧

ಎಂದು ಪರಮಾತ್ಮನಿಗೆ ಶರಣು ಹೋಗಿದ್ದಾರೆ. ಇವೇ ಭಾವವನ್ನು ಶ್ರೀವಾದಿರಾಜ ಸ್ವಾಮಿಗಳವರು--

ಸೇವಕನೆಲೊ ನಾನು ನಿನ್ನಯ ಪಾದ । ಸೇವೆ ನೀಡೆಲೊ ನೀನು ॥೨

ಹೀಗೆ ತಾವು ಪಾದಸೇವಕರೆಂದು ಹೇಳಿ, ಎಲ್ಲರೂ ಪರಮಾತ್ಮನ ಸೇವಕರು ಎಂದು ಹೇಳಿದ್ದು, ಕೆಳಗಿನ ಚರಣದ ಮೇಲಿಂದ ತಿಳಿಯಬಹುದಾಗಿದೆ.

ಶಂಕರ ಸುರ ಸೇವಿತಾ ಗರುಡಾ । ಲಂಕಾರ ಮಣಿ ಶೋಭಿತಾ ।
ಪಂಕಜನಯನ ಮೀನಾಂಕಜನಕ ಪಾದ । ಪಂಕಜವಿನುತ ತಿರುಪತಿ ।
ವೆಂಕಟಾ ಬಿರುದಾಂಕ ಜಯ ಜಯ ॥೩

ಇನ್ನು ಶ್ರೀಪ್ರಸನ್ನ ವೆಂಕಟದಾಸರಲ್ಲಿಯೂ ಈ ಭಾವವನ್ನು ನೋಡಿಕೊಳ್ಳಬಹುದು.

"ಶರಣು ಮಂಗಳ ದೇವತಿ ವರ । ಶರಣು ಚಿದ್ಗುಣಸಾಗರಾ ।
ಶರಣು ಅಗಣಿತ ಸುಖಾಕರ । ಶರಣು ವೆಂಕಟಮಂದಿರಾ ॥"೪

ಇನ್ನೊಂದು ನುಡಿಯಲ್ಲಿ ಶ್ರೀಪ್ರಸನ್ನ ವೆಂಕಟದಾಸರು—

ತಾತನೆಂಬೆ ಅದ್ಯಾಪ್ತನೆಂಬೆ । ನಾಥಾನಾಥೆಂಬೆ ಪಾತಕ ಕೌರವ
ರಾಂತಕ ಬಡಿಸಿ ಸಂಪ್ರೀತಿಲಿ ಪಾಂಡವರ । ಕಾಯುವೆಯೆಂದು ॥೫

ಎಂದು ಪರಮಾತ್ಮನಿಗೆ ನಾಥನೆಂದೂ ಈಶನೆಂದೂ ರಕ್ಷಕನೆಂದೂ ಕರೆದಿದ್ದಾರೆ.

**ಮುಕ್ತಿ**:— ಎಲ್ಲ ದಾಸರೂ ಹೆಣಗಿದ್ದು ಮುಕ್ತಿಗಾಗಿ. ಮುಕ್ತಿಯು ನೈಜ ಸುಖ. ಇದನ್ನು ದಯಪಾಲಿಸುವವನು ಶ್ರೀಹರಿಯು. ಆದಕ್ಕೋಸ್ಕರ

---

೧. ಕ. ಹ. ಕೀ. ತ. ಸಂಪುಟ ೩ ಭಾಗ ೧ ಪುಟ ೧೯೪.
೨. ಕ. ಹ. ಕೀ. ತ. ಸಂಪುಟ ೩ ಭಾಗ ೧ ಪುಟ ೧೧೧.
೩. ಕ. ಹ. ಕೀ. ತ. ಸಂಪುಟ ೩ ಭಾಗ ೧ ಪುಟ ೧೧೨
೪, ಪ್ರಬಂಧ ಪದ ಸಂಖ್ಯೆ ೧೮೯ ಭಾಗ ೨ ನುಡಿ ೧.
೫. ಪ್ರಬಂಧ ಪದ ಸಂಖ್ಯೆ ೧೭೧ ನುಡಿ ೨.

ದಾಸರು ಪರಮಾತ್ಮನನ್ನು "ಮುಕ್ತಿಯನ್ನು ಕೊಡು" ಎಂದು ಬೇಡಿದ್ದಾರೆ. ಶ್ರೀವಿಜಯದಾಸರು ತಮ್ಮ ಸುಳಾದಿಯಲ್ಲಿ ಹೀಗೆ ಹೇಳಿದ್ದಾರೆ.

ಭಕ್ತಿಯೆ ಪ್ರಧಾನವಾದ ಚಿಂತೆಯ ಮಾಡು ।
ಮುಕ್ತಿದಾಯಕ ದೇವ ವಿಜಯ ವಿಠ್ಠಲ ಒಲಿವ ॥ ೧

ಇದನ್ನು ಶ್ರೀ ಜಗನ್ನಾಥರು—

ಯಾತರ ಭಯ ಶ್ರೀನಾಥನ ಪರಮ । ಪ್ರೀತಿಯ ಪಡೆದವಗೆ ॥೨

ಎಂಬಲ್ಲಿ ಪರಮಾತ್ಮನ ಪ್ರೀತಿಯನ್ನು ಪಡೆದ ನರನಿಗೆ ಭಯವಿಲ್ಲ, ಆತನು ಮುಕ್ತನು, ಎಂದು ಹೇಳಿದ್ದಾರೆ. ಶ್ರೀಪ್ರಸನ್ನ ವೆಂಕಟದಾಸರು ಎನ್ನುವದೇ ನಂದರೆ, ಹರಿ ಸರ್ವೋತ್ತಮನು ಮುಕ್ತಿಯನ್ನು ಕೊಡುವವನು, ಅನ್ಯರಾರೂ ಆತನನ್ನು ಹೋಲುವದಿಲ್ಲ. ಈ ಭವಪಾಶದಿಂದ ದೂರಾಗುವದೆಂದರೆ ಮುಕ್ತಿಯು. ಇದನ್ನು ಕೆಳಗಿನ ನುಡಿಯಲ್ಲಿ ಕಾಣಬಹುದು.

ಹರಿಯಲ್ಲದನ್ಯ ದೈವಂಗಳು ಕೈವಲ್ಯನೀವವೇನೈ । ಶ್ರೀ
ಹರಿಯ ಕರುಣ ಸಾಗರಕೆ ಕೂಪ ವಾಪಿಯು ಹೋಲ್ವವೇನೈ ॥೩

**ನಿರ್ಮಲ ಭಕ್ತಿ** :— ಮುಕ್ತಿ ಸಾಧನೆಗಾಗಿ ನಿರ್ಮಲ ಭಕ್ತಿಯು ಅವಶ್ಯ. ಶ್ರೀ ವಿಜಯದಾಸರೆಂದಂತೆ "ಭಕ್ತಿ ಕಕ್ಕಡವೆಂಬ ಜ್ಞಾನದೀಪ"೪ ಭಕ್ತಿಯೇ ಜ್ಞಾನವನ್ನು ಕೊಡುವದು. ಅಂದರೆ ಪರಮಾತ್ಮನ ಜ್ಞಾನವನ್ನು ಮಾಡಿ ಕೊಡುವದು. ಮತ್ತು ಆದರಿಂದಲೇ ಮೋಕ್ಷಪ್ರಾಪ್ತಿ. ದಾಸರ ಕೀರ್ತನೆಗಳೆಂದರೆ ಭಕ್ತಿಯ ಭಾವಗೀತೆಗಳು. ಹಿಂದಿನ ದಾಸರಲ್ಲಿ ಹೇಗೋ ಹಾಗೆಯೇ ಶ್ರೀಪ್ರಸನ್ನ ವೆಂಕಟದಾಸರ ಕೀರ್ತನೆಗಳಲ್ಲಿಯೂ ಭಕ್ತಿಯು ತುಂಬಿ ತುಳುಕುವದು. ಶ್ರೀ ಕನಕದಾಸರು ಭಕ್ತಿಯ ಮಹಿಮೆಯನ್ನು ಹೀಗೆ ಹೇಳಿದ್ದಾರೆ.

---

೧. ಕ. ಹ. ಕೀ. ತ. ಸಂಪುಟ ೨ ಭಾಗ ೪ ಪುಟ ೧೫೫.

೨. ಕ. ಹ. ಕೀ. ತ. ಸಂಪುಟ ೨ ಭಾಗ ೧ ಪುಟ ೧೩೬.

೩. ಪ್ರಬಂಧ ಪದ ಸಂಖ್ಯೆ ೨೧-ಪಲ್ಲ.

೪. ಕ. ಹ. ಕೀ. ತ. ಸಂಪುಟ ೨ ಭಾಗ ೪ ಪುಟ ೬೭.

"ಭಜಿಸಿ ಬದುಕೆಲೊ ಮಾನವ । ಅಜಭವೇಂದ್ರಾದಿಗಳು ಪೂಜಿಸುವ ಪಾದವನು ||೧"

ಇದೇ ಪ್ರಕಾರ ಶ್ರೀವಾದಿರಾಜ ಸ್ವಾಮಿಗಳವರ ಭಕ್ತಿಯು ಕಂಡು ಬರುವುದು.

"ಹರಿಭಕ್ತಿ ಹರಿಗೋಲಿಂದ ಮೆಲ್ಲಮೆಲ್ಲನೆ । ವಿರಜಾನದಿಯು ದಾಟಿರೊ"೨

ಇನ್ನು ಶ್ರೀಪ್ರಸನ್ನ ವೆಂಕಟದಾಸರಲ್ಲಿ ಭಕ್ತಿಯ ಮಟ್ಟವನ್ನು ನೋಡಬಹುದು.

"ಕಲ್ಲು ಬೀಳಾಲಿ ಮೇಲ್ಮುಗಿಲ್ಲು ಬೀಳಾಲಿ ।
ಫುಲ್ಲನಾಭ ನಿನ್ನ ಪಾದ ಪಲ್ಲವಾಭಯ ಬಿಡೆ ||"೩

ಹರಿಪಾದಸೇವೆಯಲ್ಲಿಯ ದಾಸರ ಭಕ್ತಿಯು ಅಪಾರವಾಗಿದೆ. "ಕಲ್ಲು ಬೀಳಾಲಿ ಮೇಲ್ಮುಗಿಲ್ಲು ಬೀಳಾಲಿ" ಎಂದು ಅನ್ನುವದರಿಂದ ದಾಸರ ಈ ಕೀರ್ತನೆಯಲ್ಲಿ ಅವರ ಭಕ್ತಿಯ ದಾರ್ಢ್ಯ ಅಧಿಕತರವಾಗಿ ವ್ಯಕ್ತವಾಗಿದೆ ಎಂಬುವದರಲ್ಲಿ ಸಂಶಯವಿಲ್ಲ. ಇಲ್ಲಿದೆ ಶ್ರೀಪ್ರಸನ್ನ ವೆಂಕಟದಾಸರ ವೈಶಿಷ್ಟ್ಯ.

**ಪ್ರಮಾಣ** :— ಶ್ರೀಪುರಂದರ ದಾಸರು ತಮ್ಮ ಕೀರ್ತನೆಗಳಲ್ಲಿ ಶ್ರೀಪರಮಾತ್ಮನನ್ನು ಹೇಗೆ ಕಂಡು ಹಿಡಿಯಬೇಕೆಂಬುದನ್ನು ಹೇಳಿದ್ದಾರೆ. ಆ ಮಾರ್ಗದಿಂದ ನಡೆವವಗೆ ಅನಂತನು ಪ್ರತ್ಯಕ್ಷನಾಗುವನು. ಸವನುಮಾನದಿಂದ ಅವನನ್ನು ಕಂಡುಕೊಳ್ಳಬಹುದು, ಆಗಮಗಳು ಅವನನ್ನು ಹೊಗಳುತ್ತವೆ.

"ಆಗಮ ನಿಗಮ ಪುರಾಣಗಳೆಲ್ಲವು । ಯೋಗಿ ಜನಗಳೆಲ್ಲ ಪೊಗಳುತಿರೆ ।
ನಾಗಶಯನ ಭೋಗಿಭೂಷಣ ವಂದಿತ । ಭಾಗವತರ ಪ್ರಿಯ
ಪುರಂದರವಿಠಲ || "೪

---

೧. ಕ. ಹ. ಕೀ. ತ. ಸಂಪುಟ ೨ ಕನಕದಾಸರು ಪುಟ ೨೬.
೨. ಕ. ಹ. ಕೀ. ತ. ಸಂಪುಟ ೩ ಪುಟ ೧೧೩ ಪದ ೭೨ ನುಡಿ ೧
೩. ಕೌಜಲಗಿ ಬಂಡೆಪ್ಪ: ಪ್ರ. ವೆ. ಕೀರ್ತನೆಗಳು ಪುಟ ೩೨.
೪. ಕ.ಹ.ಕೀ.ತ. ಸಂಪುಟ ೧ ಸಂಚಿಕೆ ೩ ಪುಟ ೬.

ಇದೇ ಪ್ರಕಾರ ಶ್ರೀಪ್ರಸನ್ನ ವೆಂಕಟದಾಸರೂ ತಮ್ಮ ಕೀರ್ತನೆಗಳಲ್ಲಿ ಪ್ರತ್ಯಕ್ಷ, ಅನುಮಾನ ಆಗಮಗಳು ಪ್ರಮಾಣಗಳೆಂದು ಹೇಳಿದ್ದಾರೆ.

ಈ ಪ್ರಕಾರ ಮೇಲೆ ವಿವರಿಸಿದ ದ್ವೈತ ತತ್ವಗಳನ್ನು ತಮ್ಮ ಕೃತಿಗಳಲ್ಲಿ ಅಂದರೆ ಕೀರ್ತನೆಗಳಲ್ಲಿಯಾಗಲಿ, ಸುಳಾದಿ, ಉಗಾಭೋಗಗಳಲ್ಲಾಗಲಿ ವಿವರಿಸಿ ಸಾಮಾನ್ಯ ಜನರಿಗೆ ಅವುಗಳ ಜ್ಞಾನವಾಗುವಂತೆ ಅವರ ಮುಂದೆ ಇಟ್ಟಿದ್ದಾರೆ. ಮತ್ತು ಈ ತತ್ವಗಳನ್ನು ಬೀರಿದ ಶ್ರೀಗುರು ಮಧ್ವಾಚಾರ್ಯರನ್ನಂತೂ ಎಲ್ಲ ದಾಸರೂ ಕೊಂಡಾಡಿದ್ದಾರೆ. ಶ್ರೀವಿಜಯದಾಸರು ತಮ್ಮ ಕೃತಿಗಳಲ್ಲಿ ಶ್ರೀಮಧ್ವಾಚಾರ್ಯರನ್ನು ಹೀಗೆ ಸ್ತುತಿಸಿದ್ದಾರೆ. "ಮಧ್ವಮುನಿಯೇ ಎನ್ನ ಹೃತ್ಕುಮುದ ಚಂದ್ರ ।[೨] ಅದ್ವೈತಮತ ವಿಪಿನ ದಹನ ಗುಣಸಾಂದ್ರಾ ॥"[೩] ಶ್ರೀಪ್ರಸನ್ನ ವೆಂಕಟದಾಸರು ಕೂಡ

"ಹನುಮ ನಮ್ಮ ತಾಯಿ ತಂದೆ । ಭೀಮ ನಮ್ಮ ಬಂಧು ಬಳಗ ।
ಆನಂದತೀರ್ಥರೆ ನಮ್ಮ ಗತಿ ಗೋತ್ರರೂ ॥ "[೪]

ಎಂದು ಮೂರು ಅವತಾರಗಳನ್ನು ಸ್ಮರಿಸಿದ್ದಾರೆ. ಶ್ರೀಪ್ರಸನ್ನ ವೆಂಕಟದಾಸರು ಎಲ್ಲ ದಾಸರಂತೆ ವೈಷ್ಣವ ಪ್ರಮೇಯಗಳನ್ನು ತಮ್ಮ ಕೀರ್ತನೆಗಳಲ್ಲಿ ತಂದಿದ್ದಾರೆ. ಮತ್ತು ಇಲ್ಲಿಯೇ ಅವರ ವೈಶಿಷ್ಟ್ಯವಿದೆ.

---

(೧) ಕ.ಹ.ಕೀ.ತ. ಸಂಪುಟ ೧ ಸಂಚಿಗ ೩ ಪುಟ ೬.
(೨) ಕ.ಹ.ಕೀ.ತ. ಸಂಪುಟ ೨ ಭಾಗ ೪ ಪುಟ ೩೫.
(೩) ಕ.ಹ.ಕೀ.ತ. ಸಂಪುಟ ೨ ಭಾಗ ೪ ಪುಟ ೩೫.
(೪) ಪ್ರಬಂಧಪದ ಸಂಖ್ಯೆ ೯ ಪಲ್ಲ.

ಭಾಗ ೩

# ಶ್ರೀಪ್ರಸನ್ನ ವೆಂಕಟದಾಸರ ಕಾಲ ನಿರ್ಣಯ

ಶ್ರೀಪ್ರಸನ್ನ ವೆಂಕಟದಾಸರ ಕೃತಿಗಳಿಂದ ಇವರು ಮೇಧಾವಿಗಳು, ಪಂಡಿತರು, ಭಕ್ತರು ಮತ್ತು ಜ್ಞಾನಿಗಳು ಎಂದು ಗೊತ್ತಾಗುತ್ತದೆ. ಅಂದಬಳಿಕ ಇಂಥವರಿಗೆ ಇವರ ಕಾಲದಲ್ಲಿ ಎಲ್ಲರಿಂದ ಮನ್ನಣೆ ದೊರೆತಿದ್ದರೆ ಏನಾಶ್ಚರ್ಯ! ಅಂತೆ ಸರದಾರರಿಂದ, ಸಾಮಂತರಿಂದ, ನಾಯಕರಿಂದ ಮತ್ತು ಗೌಡ ಶಾನುಭೋಗರಿಂದ ಹೊಲ-ಮನೆಗಳು ಮತ್ತು ವರ್ಷಾಶನಗಳು ಶ್ರೀಪ್ರಸನ್ನ ವೆಂಕಟದಾಸರಿಗೆ ದೊರೆತಿವೆ. ಇವುಗಳ ಆಧಾರದಿಂದ ಮತ್ತು ಕೆಲವು ಅಂತಸ್ಥ ಪ್ರಮಾಣಗಳಿಂದ ಈ ದಾಸರ ಕಾಲನಿರ್ಣಯ ಮಾಡಬಹುದು.

## (ಅ) ಬಾಹ್ಯಪ್ರಮಾಣಗಳು

೧. ಗುತ್ತಾ (ಸೊಂಡೂರು) ಸರದಾರರಾದ ಹಿಂದೂರಾವ ಮಮಲಕತ ಮದಾರರೆಂಬ ಬಿರುದುಳ್ಳ ಸಿಂಧೋಜಿರಾವ ಘೋರ್ಪಡೆಯೆಂಬುವರು, ಶ್ರೀಪ್ರಸನ್ನ ವೆಂಕಟದಾಸರಿಗೆ ೧೨ ಹೊನ್ನುಗಳ ವರ್ಷಾಶನವನ್ನು ಶಕೆ ೧೬೬೧ ಸಿದ್ಧಾರ್ಥಿ ಸಂವತ್ಸರ ಫಾಲ್ಗುಣ ವದ್ಯ ಪ್ರತಿಪದೆಯ ದಿವಸ ( ಇ. ಸ. ೧೭೪೦ ಮಾರ್ಚ ೩ ) ಹಾಕಿ ಕೊಟ್ಟರು.[೧]

೨. ಶ್ರೀಪ್ರಸನ್ನ ವೆಂಕಟದಾಸರು ಘೋರ್ಪಡೆಯವರಿಂದ ಪಡೆದ ದಾನಪತ್ರದಕ್ಕಿಂತಲೂ ಮೊದಲು ಅನೇಕರಿಂದ ದಾನಗಳನ್ನು ಪಡೆದಿದ್ದಾರೆ. ಮಾಮಲ ಬಾಗಲಕೋಟೆಯ ನಾನಾ ಮೇಲಗಿರಿ ದೇಸಾಯಿ, ಸರದೇಸಾಯಿಯವರು ಮುಚಗಂಡಿಯ ಒಂದು ಹೊಲವನ್ನು ಶಕೆ ೧೬೪೫ ಚೈತ್ರ ವದ್ಯ ೫ ದಿವಸ

(೧) ಸಿ.ವಿ. ಚಿತ್ರಾವ: ಮಧ್ಯಯುಗೀನ ಚರಿತ್ರಕೋಶ ಪುಟ ೬೪೭ ಮತ್ತು The Humble Memorial of Major Sardar Narasingrao alias Babasaheb Ghorpade (೧) ಪರಿಶಿಷ್ಟ ೭.

( ಇ. ಸ. ೧೭೨೩ ಎಪ್ರಿಲ ೧೬ ) ಶ್ರೀಪ್ರಸನ್ನ ವೆಂಕಟದಾಸರಿಗೆ ದಾನವಾಗಿ ಕೊಟ್ಟಿದ್ದಾರೆ.[೧]

೩. ಇಮ್ಮಡಿ ಹಮ್ಮೀ ನಾಯಕರೆಂಬುವವರು, ತಾವು ಹರಿದಾಸರ ನಡೆ ನುಡಿಗೂ ಭಕ್ತಿಗೂ ಮೆಚ್ಚಿದ ಕಾರಣ ಅವರು ಸುಖವಾಗಿ ಬಾಳಿ ತನ್ನನ್ನು ಹರಿಸಬೇಕೆಂಬ ಬುದ್ಧಿಯಿಂದ, ಹರಿಗುರು ಭಕ್ತಪರಾಯಣರಾದ ಶ್ರೀಪ್ರಸನ್ನ ವೆಂಕಟದಾಸರಿಗೆ, ತುಳಸೀಗೆರಿಯಲ್ಲಿಯ ಒಂದು ಹೊಲವನ್ನು ಶಕೆ ೧೬೪೫ ಚೈತ್ರ ವದ್ಯ ೬ ( ಇ. ಸ. ೧೭೨೩ ಎಪ್ರಿಲ ೧೫ ) ದಿವಸ ದತ್ತಿಯಾಗಿ ಕೊಟ್ಟಿದ್ದಾರೆ.[೨]

ಶ್ರೀಪ್ರಸನ್ನ ವೆಂಕಟದಾಸರಿಗೆ ಮೇಲೆ ಕೊಟ್ಟ ವರ್ಷಾಶನ, ಹೊಲಗಳ ದಾನಪತ್ರಗಳನ್ನು ಬಿಟ್ಟು, ಇನ್ನೂ ಎಷ್ಟೋ ವರ್ಷಾಶನಗಳು ದೊರೆತಿವೆ ಎಂಬುದು ತಿಳಿಯುವದಕ್ಕೆ ಆಧಾರಗಳಿವೆ. ಅಂದರೆ ಶ್ರೀಪ್ರಸನ್ನ ವೆಂಕಟದಾಸರ ಮರಿಮಕ್ಕಳಾದ ವೇದಶಾಸ್ತ್ರ ಸಂಪನ್ನ ಅಣ್ಣಯ್ಯಾಚಾರ್ಯ, ಬಾಳಾಚಾರ್ಯ ಮತ್ತು ರಾಮಾಚಾರ್ಯ ಎಂಬ ಈ ಮೂವರು ಅಣ್ಣ-ತಮ್ಮಂದಿರಲ್ಲಿ ಪಾಲು ಆಗುವ ಕಾಲಕ್ಕೆ ತಮ್ಮ ತಮ್ಮಲ್ಲಿ ಹಂಚಿಕೊಂಡ ಮನೆಯ ಸಾಮಾನು, ಪುಸ್ತಕ, ವರ್ಷಾಶನ ಮುಂತಾದವುಗಳ ಬಗ್ಗೆ ಒಂದು ಯಾದಿಯು ದೊರೆತಿದೆ. ಇದು ಬಾಳಾಚಾರ್ಯರ ಪಾಲಿಗೆ ಬಂದ ಸಾಮಾನಿನ ಯಾದಿಯು.[೩] ಇದರ ಮೇಲಿಂದ ದಾಸರಿಗೆ ವರ್ಷಾಶನಗಳು ಎಷ್ಟು ದೊರೆತಿವೆ ಎಂಬ ಮಾತು ತಿಳಿಯುವದು. ಆದರೆ ಅವು ಯಾರಿಂದ, ಯಾವಾಗ್ಗೆ ದೊರೆತಿವೆ ಎಂಬುದು ತಿಳಿಯಲು ಸಾಧ್ಯವಿಲ್ಲ.

೪. ಶ್ರೀಪ್ರಸನ್ನ ವೆಂಕಟರ ಮರಿಮಕ್ಕಳಾದ ವೇ. ಶಾ. ಸ. ಅಣ್ಣಯ್ಯಾಚಾರ್ಯರು ತಮ್ಮ ಮುತ್ತಜ್ಜರಾದ ಪ್ರಸನ್ನ ವೆಂಕಟರು ಗಳಿಸಿದ ಮೂರು ರೂಪಾಯಿಗಳ ವರ್ಷಾಶನವನ್ನು ಯಾವುದೋ ಕಾರಣದಿಂದ ೨ ರೂಪಾಯಿ ಆದದ್ದನ್ನು ಮತ್ತೆ ಮೂರು ರೂಪಾಯಿ ಮಾಡಿಸಿಕೊಂಡರು. ಹೀಗೆ ಮಾಡಿ

---

(೧) ಮುಚಂಡಿ ಹೊಲದ ದಾನಪತ್ರ, ಪರಿಶಿಷ್ಟ ೧೦.

(೨) ದಾನಪತ್ರ ಪರಿಶಿಷ್ಟ ೧೧.

(೩) ಬಾಳಾಚಾರ್ಯರ ಪಾಲಿಗೆ ಬಂದ ಸಾಮಾನುಗಳ ಯಾದಿ, ಪರಿಶಿಷ್ಟ ೧೪.

ಕೊಟ್ಟವರು, ಗೋಸಲ ಸಿಂಗಪ್ಪಾ ಏಡೇರು ಮತ್ತು ಎಲಗುರದಪ್ಪ ನಾಯೀಕ. ಇವರ ಹಿರಿಯರೇ ಪ್ರಸನ್ನ ವೆಂಕಟರಿಗೆ ೩ ರೂ. ವರ್ಷಾಶನ ಕೊಟ್ಟವರು. ಆದರೆ ಇವರು ಯಾರು? ಇವರ ಕಾಲವಾವುದು? ಎಂಬ ಸಂಗತಿಯು ತಿಳಿಯುವದಿಲ್ಲ.[೧]

ಮೇಲೆ ಕಾಣಿಸಿದ ಅಣ್ಣಯ್ಯಾಚಾರ್ಯರ ಸನದಿನಲ್ಲಿ ಇವರಿಗೆ ಮತ್ತು ಪ್ರಸನ್ನ ವೆಂಕಟದಾಸರಿಗೆ ಸಂಬಂಧ ಹೇಳುವ ಕಾಲದಲ್ಲಿ "ಅಪಲಾ **ಆಜಾ** ವೇದಶಾಸ್ತ್ರ ಸಂಪನ್ನ ವೆಂಕಪ್ಪಯ್ಯಾ" ಎಂದು ಹೇಳಿದೆ. "ಆಜಾ" ಎಂದರೆ ಮುತ್ತಯ್ಯಾ, ತಂದೆಯ ತಂದೆ ಎಂದರ್ಥವಾಗುತ್ತದೆ. ಆದರೆ ಪ್ರಸನ್ನ ವೆಂಕಟದಾಸರು ಅಣ್ಣಯ್ಯಾಚಾರ್ಯರಿಗೆ ಮುತ್ತಯ್ಯರಾಗದೆ ಪಿತಾಮಹರಾಗುತ್ತಾರೆಂದು ಅವರ ವಂಶಾವಳಿಯಿಂದ ಮತ್ತು ಅಣ್ಣಯ್ಯಾಚಾರ್ಯರು ಕೊಟ್ಟ ದಾನಪತ್ರ ಇವುಗಳ ಮೇಲಿಂದ ತಿಳಿಯಬಹುದಾಗಿದೆ.[೨]

## ಅಂತಸ್ಥ ಪ್ರಮಾಣಗಳು

೧. ಶ್ರೀಪ್ರಸನ್ನ ವೆಂಕಟದಾಸರು ಉತ್ತರಾದಿಮಠದ ಪೀಠಾಧೀಶರಾದ ಶ್ರೀಸತ್ಯಾಭಿನವತೀರ್ಥ[೩] ಮತ್ತು ಚಿಕ್ಕ ಮಠಾಧೀಶರಾದ ಶ್ರೀಸತ್ಯಾಧಿರಾಜ[೪] ಗುರುಗಳನ್ನು ತಮ್ಮ ಒಂದು ಕೀರ್ತನೆಯಲ್ಲಿ ಸ್ತುತಿಸಿದ್ದಾರೆ.

ಅಂದು ನರಹರಿಯತಿಗೆ ಒಲಿದಂತೆ ಒಲಿದು ।
ಬಂದು ನೀ ನಿಂತೆ ನಿಜ ರಮಣಿಯೊಡನೆ ।
ಎಂದೆಂದು **ಸತ್ಯಾಭಿನವತೀರ್ಥ** ಗುರುಹೃದಯ ।
ಮಂದಿರನೆ ಪ್ರಸನ್ವೆಂಟಕ ವರದಾ ರಾಮಾ ॥[೫]

---

(೧) ಅಣ್ಣಯ್ಯಾಚಾರ್ಯರಿಗೆ ದೊರೆತ ಸನದು, ಪರಿಶಿಷ್ಟ ೮.

(೨) ಶ್ರೀಪ್ರಸನ್ನ ವೆಂಕಟದಾಸರ ವಂಶಾವಳಿ ಪರಿಶಿಷ್ಟ ೧೫, ಮತ್ತು ಅಣ್ಣಯ್ಯಾಚಾರ್ಯರು ಕೊಟ್ಟ ದಾನಪತ್ರ ಪರಿಶಿಷ್ಟ ೧೩.

(೩) ಶ್ರೀ. ಕಮಲಾಪುರ ಭೀಮರಾಯರು: ಸತ್ಕಥಾ ಪುಟ ೬೫.

(೪) ಆಬಾಜಿ ರಾಮಚಂದ್ರ ಸಾವಂತ: ಉತ್ತರಾಧಿಮಠದ ಪೀಳಿಗೆ.

(೫) ಇದೇ ಪ್ರಬಂಧ: ಪದಸಂಖ್ಯೆ ೧೯೭.

೨. ಸತ್ಯಾಧಿರಾಜರ ಮತ್ತು ಸತ್ಯಾಭಿನವತೀರ್ಥರ ಬಗ್ಗೆ—

ಸ್ವಾಮಿ **ಸತ್ಯಾಧಿರಾಜ** ಮುನಿಗೆಣೆಗಾಣೆ ನಾ ।
ಭೂಮಿಯ ಮ್ಯಾಲೆ ಚತುರನಾ ।
ಸಾಮರ್ಥ್ಯ ನೋಡಿರಿ ಭಕುತಿಯಾ ನರಿಯು
ಪಾಮರರನು ಬಾಗಿಸುಪಾ ॥

ಗುರು **ಸತ್ಯಾಭಿನವ**ರಾಯನ ಪಟ್ಟದಾನೆಯು
ಧರೆಯ ಮ್ಯಾಲೋಡ್ಯಾಡುವಂತೆ ।
ಚರಿಸುತಾ ಖಳರನಂಜಿಸಿ ಕಪ್ಪವ ಕೊಂಡು
ಗುರುಪಾದಕೊಪ್ಪಿಸಿ ನಿಂತಾ ॥[೧]

ಶ್ರೀಸತ್ಯಾಧಿರಾಜರು ಉತ್ತರಾದಿಮಠದ ಸಂಸ್ಥಾನವನ್ನು ಆಳದೆ ಚಿಕ್ಕ ಮಠವನ್ನು ಆಳಿದರು. ಇವರ ಗುರುಗಳು ಸತ್ಯಪ್ರಿಯರಾಗಿದ್ದು,[೨] ಸತ್ಯಪ್ರಿಯರ ಗುರುಗಳು ಉತ್ತರಾದಿಮಠದ ಶ್ರೀಸತ್ಯಪೂರ್ಣತೀರ್ಥರು. ಇವರು ( ಗಾರ್ಲ ಪಾಡ ರಾಮಾಚಾರ್ಯರಿಗೆ ) ಸತ್ಯಪ್ರಿಯರಿಗೆ ಚಿಕ್ಕಮಠವೊಂದನ್ನು ಸ್ಥಾಪಿಸಿ ಕೊಟ್ಟರು.[೩] ಶ್ರೀಸತ್ಯಪೂರ್ಣರು ಶಕೆ ೧೬೪೮ರಲ್ಲಿ ವೃಂದಾವನಸ್ಥರಾದರು. ಅವರು ಇದಕ್ಕೂ ಮೂರು ನಾಲ್ಕು ವರ್ಷ ಮುಂಚೆ ಶ್ರೀಸತ್ಯಪ್ರಿಯರಿಗೆ ಚಿಕ್ಕ ಸಂಸ್ಥಾನವನ್ನು ನಿರ್ಮಿಸಿ ಕೊಟ್ಟಿರಬಹುದು. ಅಂದರೆ ಶಕೆ ೧೬೪೪ ಅಂದರೆ ಇ. ಸ. ೧೭೨೨ರಲ್ಲಿ ಸ್ಥಾಪಿಸಿರಬಹುದು. ಶ್ರೀಸತ್ಯಾಧಿರಾಜರು ಶ್ರೀಸತ್ಯಪ್ರಿಯರ ತರುವಾಯ ಪಟ್ಟವನ್ನೇರಿದರು. ಇವರ ಕಾಲನಿರ್ಣಯವನ್ನು ಉತ್ತರಾದಿ ಮಠದ ಪೀಳಿಗೆಯ ಮೇಲಿಂದ ಮಾಡಬಹುದು. ಉತ್ತರಾದಿಮಠದ ಸಿಂಹಾ ಸನದ ಮೇಲೆ ಶಕೆ ೧೧೨೦ರಿಂದ ೧೮೩೩ರ ವರೆಗೆ ಅಂದರೆ ೭೧೩ ವರ್ಷಗಳಲ್ಲಿ ಶ್ರೀಮದಾನಂದತೀರ್ಥರಿಂದ ಶ್ರೀಸತ್ಯಜ್ಞಾನತೀರ್ಥರ ವರೆಗೆ ೩೭ ಮಠಾಧೀಶರು ಆಳಿದರು. ಸಾಧಾರಣವಾಗಿ ಪ್ರತಿಯೊಬ್ಬರು ಸರಾಸರಿ ೧೯ ವರ್ಷ ಆಳಿದರು. ಕನಿಷ್ಠಪಕ್ಷಕ್ಕೆ ಪ್ರತಿ ಪೀಠಸ್ಥರು ೧೫ ವರ್ಷ ಸಂಸ್ಥಾನವನ್ನು ಆಳಿದರು ಎಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

---

(೧) ಇದೇ ಪ್ರಬಂಧ ಪದ ಸಂಖ್ಯೆ ೧೮೫.
(೨) ಕಮಲಾಪೂರ ಭೀಮರಾಯರು: ಸತ್ಕಥಾ ೨ನೇ ಆವೃತ್ತಿ, ಪುಟ ೭೧.
(೩) ಕಮಲಾಪೂರ ಭೀಮರಾಯರು: ಸತ್ಕಥಾ ೨ನೇ ಆವೃತ್ತಿ ಪುಟ ೭೧.

ಈ ಶ್ರೀ ಸತ್ಯಪ್ರಿಯರು ಇ. ಸ. ೧೭೨೨ರಲ್ಲಿ ಚಿಕ್ಕ ಸಂಸ್ಥಾನವನ್ನು ಆಳಲಾರಂಭಿಸಿ, ೧೫ ವರ್ಷದ ತರುವಾಯ ಸಂಸ್ಥಾನವನ್ನು ಶಿಷ್ಯೋತ್ತಮರಾದ ಶ್ರೀಸತ್ಯಾಧಿರಾಜರ ವಶದಲ್ಲಿ ಕೊಟ್ಟರು. ಇವರು ೧೭೩೭ರಲ್ಲಿ ಚಿಕ್ಕ ಸಂಸ್ಥಾನವನ್ನು ವಶದಲ್ಲಿ ತೆಗೆದುಕೊಂಡು ೧೫ ವರ್ಷಗಳ ವರೆಗೆ ಆಳಿದರೆಂದೆನ್ನಬಹುದು. ಅಂದಬಳಿಕ ಇವರ ಕಾಲವು ಇ. ಸ. ೧೭೫೨ರ ವರೆಗೆ ಆಗಬಹುದು. ಇದರಿಂದ ಊಹಿಸುವದೇನಂದರೆ, ಶ್ರೀಪ್ರಸನ್ನ ವೆಂಕಟದಾಸರು ಇ. ಸ. ೧೭೩೬ ರಿಂದ ೧೭೫೨ ರ ವರೆಗೆ ಇದ್ದು, ಆ ಕಾಲದಲ್ಲಿ ಸತ್ಯಾಧಿರಾಜರನ್ನು ನೋಡಿರಬಹುದು. ಹಾಗೂ ಇದಕ್ಕೂ ಮುಂಚೆಯೂ ಜೀವಿಸಿರಬಹುದು ಎಂದು ತಿಳಿಯಬಹುದು. ಇನ್ನು ಶ್ರೀಸತ್ಯಾಭಿನವತೀರ್ಥರ ಬಗ್ಗೆ ವಿಚಾರ ಮಾಡುವಾ. ಇವರು ಶಕೆ ೧೫೯೫ ರಿಂದ ೧೬೨೮ರ ವರೆಗೆ ಅಂದರೆ ಇ. ಸ. ೧೭೦೬ರ ವರೆಗೆ ಉತ್ತರಾದಿ ಮಠದ ಸಿಂಹಾಸನದ ಮೇಲಿದ್ದರು. ಇವರ ಸ್ತುತಿಯನ್ನು ಶ್ರೀಪ್ರಸನ್ನ ವೆಂಕಟದಾಸರು ಮಾಡಿದ್ದಾರೆ. ಇಲ್ಲಿ ಶ್ರೀಪ್ರಸನ್ನ ವೆಂಕಟದಾಸರು ಶ್ರೀಸತ್ಯಾಭಿನವತೀರ್ಥರನ್ನು ನೋಡಿರಬಹುದು ಎಂಬ ಊಹೆಗೆ ಆಸ್ಪದವಿದೆ.

ಶ್ರೀಪ್ರಸನ್ನ ವೆಂಕಟದಾಸರು ಶಕೆ ೧೬೭೪ ಆಂಗಿರಸ ಸಂವತ್ಸರದ ಭಾದ್ರಪದ ಶುದ್ಧ ೧೨ನೆಯ ದಿವಸ ವೈಕುಂಠವಾಸಿಗಳಾದರೆಂದು ಪ್ರಚಲಿತವಾದ ತಿಳುವಳಿಕೆ ಇದೆ. ಇದಕ್ಕೆ ಆಧಾರ ವಿಶೇಷವಿಲ್ಲ. ವಿವರಸಹಿತವಾಗಿ ಮಿತಿ, ಸಂವತ್ಸರ ಮುಂತಾದವುಗಳನ್ನು ನೋಡಿದರೆ, ಇದು ಸತ್ಯವಾಗಿ ಕಾಣುವದು. ಮತ್ತು ಶ್ರೀಪ್ರಸನ್ನ ವೆಂಕಟದಾಸರು ಶ್ರೀಸತ್ಯಾಧಿರಾಜರನ್ನು ವರ್ಣಿಸಿದ್ದಾರೆ. ಇವರ ಕೊನೆಯ ಕಾಲವು ಇ. ಸ. ೧೭೫೨ ಎಂದು ಊಹಿಸಲಾಗಿದೆ. ಅಂದಬಳಿಕ ದಾಸರ ಕೊನೆಯ ಕಾಲವು ಶಕೆ ೧೬೭೪ ಭಾದ್ರಪದ ಶುದ್ಧ ದ್ವಾದಶಿ ಎಂಬುದು ಸರಿಹೋಗುವದು. ಆದರೆ ಆ ದಿನವು ದ್ವಾದಶಿಯಾಗಿರದೆ ಏಕಾದಶಿಯಾಗಿರಬೇಕೆಂದು ತೋರುತ್ತದೆ.[1]

---

೧. ಭಾದ್ರಪದ ಶುದ್ಧ ೧೨ ಎಂದು 'ಪ್ರಸನ್ನ ವೆಂಕಟನ ಭಾಗವತ' ದ ಪ್ರಸ್ತಾವನೆಯಲ್ಲಿ ಹೇಳಿದೆ. ಆದರೆ ದ್ವಾದಶಿಯ ತಿಥಿಯ ಬಗ್ಗೆ ವಿಚಾರ ಮಾಡಬೇಕಾಗಿದೆ. ಅದೇನೆಂದರೆ ಕೊನೆಯ ಕಾಲದ ತಿಥಿಯು ೧೨ ಆಗಿರದೆ ಏಕಾದಶಿಯೆಂದು ಶ್ರೀ. ನಾರಾಯಣರಾವ ಕಲಮದಾನಿಯವರು ಅಭಿಪ್ರಾಯಪಡುತ್ತಾರೆ. ಇವರ ಬಗ್ಗೆ ದಾಸರ ವಂಶಿಕರನ್ನು ಕೇಳಲಾಗಿ ಅವರಲ್ಲಿ ಹಿರಿಯರಾದ ಶ್ರೀ. ಗೋಪಾಲಾಚಾರ್ಯ ಮತ್ತು

ಇಲ್ಲಿಯ ವರೆಗೆ ಕಾಣಿಸಿದ ಸಂಗತಿಗಳಿಂದ ಕೆಲವು ಊಹೆಗಳನ್ನುಮಾಡ ಬಹುದು. ೧. ದಾಸರಿಗೆ ದಾನಪತ್ರ, ವರ್ಷಾಶನಗಳು ಇ. ಸ. ೧೭೨೩ ರಿಂದ ಇ. ಸ. ೧೭೪೦ ರ ವರೆಗೆ ದೊರೆತಿವೆ. ಇವು ಅವರ ಆಯುಷ್ಯದ ಪರಿಣತಾವಸ್ಥೆಯಲ್ಲಿ ಅಂದರೆ ಅವರ ವಯುಸ್ಸಿನ ನಾಲ್ವತ್ತು ವರ್ಷದಿಂದ ಮುಂದಿನ ಕಾಲದಲ್ಲಿ ದೊರೆತಿರಬಹುದು. ಅಂದರೆ ನಲವತ್ತರಿಂದ ಅರವತ್ತು ವರುಷದ ವರೆಗೆ ವೃದ್ಧಾಪ್ಯ ಬರುವದರೊಳಗಾಗಿ ಇವು ದೊರೆತಿವೆಯೆಂದು ಅರ್ಥ ಮಾಡಿಕೊಳ್ಳಬಹುದು.

೨. ನಿರ್ಯಾಣ ಕಾಲ. ಇದು ತಾ॥ ೧೯—೯—೧೭೫೨ ಇಸ್ವಿ ಎಂಬುದು ಮೇಲಿನ ಸಂಗತಿಯಿಂದ ಸತ್ಯವೆಂದು ಗ್ರಹಿಸಬಹುದಾದರೆ ಸುಮಾರು ೭೨ ವರ್ಷಗಳ ವರೆಗೆ ಶ್ರೀಪ್ರಸನ್ನ ವೆಂಕಟದಾಸರು ಜೀವಿಸಿರಬಹುದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಏಕೆಂದರೆ, ಇ. ಸ. ೧೭೨೩ರಲ್ಲಿ, ಸನದು ದೊರೆತಾಗ್ಗೆ ದಾಸರಿಗೆ ೪೩ ವರ್ಷ, ಮುಂದೆ ಇ. ಸ. ೧೭೪೦ರ ವರೆಗೆ ೧೭ ವರ್ಷ (ಏಕೆಂದರೆ ಇ. ಸ. ೧೭೪೦ರಲ್ಲಿ ದಾಸರಿಗೆ ಸನದು ದೊರೆತಿದೆ), ಮುಂದೆ ಇ. ಸ. ೧೭೪೦ರಿಂದ ನಿರ್ಯಾಣಕಾಲದ ವರೆಗೆ (ಇ.ಸ. ೧೭೫೨ರ ವರೆಗೆ) ೧೨ ವರ್ಷ, ಹೀಗೆ ೭೨ ವರ್ಷದ ಲೆಕ್ಕವನ್ನು ಹಾಕಬಹುದು. ಇದಕ್ಕಿಂತ ಹೆಚ್ಚಾಗಿ ಏನೂ ಹೇಳಲು ಬರುವದಿಲ್ಲ. ಅವರ ಜನ್ಮಕಾಲ ಇನ್ನೂ ಅನಿಶ್ಚಿತವಾಗಿದೆ. ಆದರೂ ನಿರ್ಯಾಣ ಕಾಲವು ಇ. ಸ. ೧೭೫೨ ರಲ್ಲಿ ಎಂದು ತಿಳಿದು ಇ. ಸ. ೧೭೨೩ರ ಸುಮಾರಕ್ಕೆ ದಾಸರ ವಯುಸ್ಸು ೩೩ ಎಂದು ಗ್ರಹಿಸಿ ಹೊರಟಿದ್ದು ಒಪ್ಪುವಂತಾದರೆ, ಅವರ ಜನ್ಮ ಸುಮಾರು ೧೬೮೦ನೇ ಇಸ್ವಿಯಲ್ಲಿ ಆಗಿರಬಹುದೆಂದು ಊಹಿಸಲು ಅಡ್ಡಿಯಿಲ್ಲ. ಒಟ್ಟಿನಲ್ಲಿ ಶ್ರೀಪ್ರಸನ್ನ ವೆಂಕಟದಾಸರು ೧೭ನೆಯ ಶತಮಾನದ ಕೊನೆಯಲ್ಲಿ ಜನ್ಮತಾಳಿ ೧೮ನೆಯ ಶತಮಾನದ ಬಹುಭಾಗದಲ್ಲಿ ಜೀವಿಸಿದ್ದರೆಂದು ತಿಳಿಯಲು ಯಾವ ಆತಂಕವೂ ಇಲ್ಲ.

---

ವೆಂಕಟೇಶಾಚಾರ್ಯ ಇವರು ೬೦-೬೫ ವರ್ಷದವರಿದ್ದು ಪೆನ್‌ಶನ್ ಶಿಕ್ಷಕರಿದ್ದಾರೆ. ಇವರು ಶ್ರೀಪ್ರಸನ್ನ ವೆಂಕಟರಿಂದ ೬ನೆಯ ತಲೆಯವರು. ಇವರು ಹೇಳಿದ್ದೇನಂದರೆ, ಶ್ರೀಪ್ರಸನ್ನ ವೆಂಕಟದಾಸರ ನಿರ್ಯಾಣಕಾಲವು ಭಾದ್ರಪದ ಶುದ್ಧ ೧೧ ನೆಯ ದಿವಸವಾಯಿತು. ಆದರೆ ಆರಾಧನೆಯನ್ನು ವೈಷ್ಣವರಾದ ನಾವು ವೈಷ್ಣವ ಸಾಂಪ್ರದಾಯದಂತೆ ೧೨ನೆಯ ದಿವಸ ಮಾಡುತ್ತೇವೆ.

## ಭಾಗ ೪.

# ಶ್ರೀಪ್ರಸನ್ನ ವೆಂಕಟದಾಸರ ಜೀವನಚರಿತ್ರೆ.

ಯಾವದಾದರೊಂದು ಪ್ರಸಿದ್ಧ ಪುರುಷನ ಜೀವನಚರಿತ್ರೆಯನ್ನು ಬರೆಯಬೇಕಾದರೆ ಐತಿಹಾಸಿಕ ಸಂಗತಿಗಳ ಜ್ಞಾನವು ಮುಖ್ಯವಾಗಿ ಬೇಕು. ಆದರೆ ಈ ಕಾಲದಲ್ಲಿ ಐತಿಹಾಸಿಕ ಸಾಮಗ್ರಿಯ ಕೊರತೆಯು ಕಂಡುಬರುವದು. ದಾಸರ ಮಹಾತ್ಮ್ಯವನ್ನು ಸೂಚಿಸುವ, ಅವರ ವಿಷಯಕವಾದ ದಂತಕಥೆಗಳು ಮಾತ್ರ ಹೆಚ್ಚಾಗಿ ದೊರೆಯುವವು. ಇವುಗಳಲ್ಲಿ ಭಾವಿಕರ ದೃಷ್ಟಿಯು ಕಂಡುಬರುವದು. ಹೀಗಾಗಿ ಐತಿಹಾಸಿಕ ದೃಷ್ಟಿಯಿಂದ ಸತ್ಯಾಂಶವನ್ನು ಕಂಡು ಹಿಡಿಯುವದು ಬಹು ಕಷ್ಟವಾಗುತ್ತದೆ. ಇಂಥಹದರಲ್ಲಿಯೂ ಸಾಧ್ಯವಾದಷ್ಟು ದೊರೆತ ಆಧಾರಗಳ ಮೇಲಿಂದ ಶ್ರೀಪ್ರಸನ್ನ ವೆಂಕಟದಾಸರ ಜೀವನ ಚರಿತ್ರೆಯನ್ನು ನಿರೂಪಿಸಲಾಗಿದೆ. ಈ ಸಾಮಗ್ರಿಗಳಲ್ಲಿ ಮುಖ್ಯವಾದುವುವೆಂದರೆ, ಆ ಕಾಲದ ವರ್ಷಾಶನಗಳು, ಆ ಮುಂದಿನ ಕಾಲದ ಕಾಗದಪತ್ರಗಳು, ಪ್ರಚಲಿತ ಚರಿತ್ರೆಗಳು ಮತ್ತು ಅಂತಸ್ಥ ಪ್ರಮಾಣಗಳು.

### ೧. ಶ್ರೀಪ್ರಸನ್ನ ವೆಂಕಟದಾಸರ ಪೂರ್ವಜರು.

ಸುಮಾರು ೧೭ನೇ ಶತಮಾನದ ಮಧ್ಯದಲ್ಲಿ ದಾಸರ ಮನೆತನದ ಮೂಲ ಪುರುಷರಾದ ಮತ್ತು ಶ್ರೀಪ್ರಸನ್ನ ವೆಂಕಟದಾಸರಿಗೆ ಜನ್ಮವಿತ್ತ, ಕಾಶ್ಯಪ ಗೋತ್ರಜರೂ ಆಶ್ವಲಾಯನ ಸೂತ್ರ ಋಕ್‌ಶಾಖಾಧ್ಯಾಯಿಯುವರೂ ಆದ ಕಾಖಂಡಕಿ ನರಸಪ್ಪಯ್ಯನವರು ಬಾಗಡಕೋಟಿ (ಬಾಗಲಕೋಟಿ) ಯಲ್ಲಿ ವಾಸಿಸುತ್ತಿದ್ದರು.[೧] ಈ ಕಾಲದಲ್ಲಿ ವಿಜಾಪೂರದಲ್ಲಿ ಮಹಮೂದ ಆದಿಲಶಹನು ಆಳುತ್ತಿದ್ದನು. ನರಸಪ್ಪಯ್ಯನವರು ವೈದಿಕ ವೃತ್ತಿಯಿಂದ ಜೀವನ ಮಾಡುತ್ತಿದ್ದರು. ಇವರು ಆ ಕಾಲಕ್ಕೆ ಗಳಿಸಿದ ಒಂದು ಮನೆ ಬಾಗಲಕೋಟಿಯಲ್ಲಿದೆ.[೨] ಈಗಿದ್ದ ಎಲ್ಲ ಹೊಲಗಳು ಶ್ರೀಪ್ರಸನ್ನ ವೆಂಕಟರ ಆನು

---

೧. ಪ್ರಸನ್ನ ವೆಂಕಟರಿಗೆ ದೊರೆತ ಸನದಿನ ಮೇಲಿಂದ — ಪರಿಶಿಷ್ಟ ೭

೨. ಪರಿಶಿಷ್ಟ ೧

ವಂಶಿಕರ ಕಡೆಗೆ ಇವೆ. ಆವು ಪ್ರಸನ್ನ ವೆಂಕಟರಿಗೆ, ಅವರ ಮಕ್ಕಳಾದ ವೆಂಕಟ ಕೃಷ್ಣಾಚಾರ್ಯರಿಗೆ, ಅವರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯ ಮತ್ತು ಬಾಳಾಚಾರ್ಯ ಇವರಿಗೆ ದೊರೆತುವು ಎಂದು ಅವರವರಿಗೆ ದೊರೆತ ಸನದುಗಳ ಮೇಲಿಂದ ಕಂಡುಬರುವದು.೧ ನರಸಪ್ಪಯ್ಯನವರ ಮನೆತನದ ಹೆಸರಿನ ಮೇಲಿಂದ ಇವರು ಕಾಖಂಡಿಕಿಯವರೆಂದು ತೋರುತ್ತದೆ. ಸಾಮಾನ್ಯ ವಾಗಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಇಲ್ಲವೇ ಒಂದು ಊರಿಂದ ಬೇರೊಂದು ಊರಿಗೆ ಯಾರಾದರೂ ಕುಟುಂಬ ಸಹಿತವಾಗಿ ಹೋಗಿ ನೆಲೆಸಿ ದಾಗ್ಯೂ ಅಂಥವರ ಮೊದಲಿನ ದೇಶದ ಇಲ್ಲವೆ ಊರಿನ ಹೆಸರೇ ಹೆಗ್ಗುರುತಾಗಿ ಉಳಿಯುವುದು ವಾಡಿಕೆಯಾಗಿದೆ. ನರಸಪ್ಪಯ್ಯನವರು ಕಾಖಂಡಿಕಿಯವರಾ ದರೂ ಕಾಖಂಡಿಕಿಯವರೆಂದು ಹೇಳಲು ಈಗ ಅಲ್ಲಿ ಏನೂ ಕುರುಹುಗಳಿಲ್ಲ. ಅಲ್ಲಿ ಅವರ ಹೊಲಗಳಿಲ್ಲ, ಮನೆಯಿಲ್ಲ ಮತ್ತು ಅವರ ಅನುವಂಶಿಕರೂ ಇಲ್ಲ.

ನರಸಪ್ಪಯ್ಯನವರು ತಮ್ಮ ಪತ್ನಿಯಾದ ಲಕ್ಷ್ಮೀಬಾಯಿಯ ಕೂಡ ಬಾಗಲಕೋಟೆಯಲ್ಲಿ ಇರುತ್ತಿರುವಾಗ ಸುಮಾರು ೧೬೮೦ ನೇ ಇಸ್ವಿಯಲ್ಲಿ ಈ ಪ್ರಬಂಧದ ನಾಯಕರಾದ ಶ್ರೀಪ್ರಸನ್ನ ವೆಂಕಟದಾಸರು ಜನ್ಮ ತಾಳಿದರು. ಇವ ರಿಗೆ ವೆಂಕಟೇಶನೆಂದು ನಾಮಕರಣ ಮಾಡಲಾಯಿತು.೨ ವೆಂಕಪ್ಪಯ್ಯ ಎಂದು ಅವರನ್ನು ಕರೆಯಹತ್ತಿದರು. ಇವರು ಪವಿತ್ರ ಕುಲೋತ್ಪನ್ನರೂ ನೀತಿ ವಂತರೂ ಸಾಮಾನ್ಯ ಸ್ಥಿತಿಯಲ್ಲಿ ಇದ್ದವರೂ ಆಗಿದ್ದರೆಂದು ತಿಳಿಯುತ್ತದೆ.

## ೨. ಶ್ರೀಪ್ರಸನ್ನ ವೆಂಕಟದಾಸರ ಬಾಲ್ಯ.

ನರಸಪ್ಪಯ್ಯನವರ ನಿರ್ಯಾಣವು ಯಾವಾಗ ಆಯಿತು ಎಂಬುದನ್ನು ಹೇಳಲು ಆಧಾರಗಳಿಲ್ಲ. ಅವರ ನಿರ್ಯಾಣ ಕಾಲದಲ್ಲಿ ಈ ಚರಿತ್ರನಾಯಕ ನಾದ ವೆಂಕಟೇಶನು ಚಿಕ್ಕ ಬಾಲಕನಾಗಿದ್ದನು. ತಾಯಿಯ ವಿಯೋಗವೂ ಯಾವಾಗ ಆಯಿತೆಂಬುದನ್ನು ಕೂಡ ಹೇಳಲು ಸಾಧ್ಯವಿಲ್ಲ. ಈತನಿಗೆ ಒಬ್ಬ

---

೧. ಪ್ರಸನ್ನ ವೆಂಕಟದಾಸರಿಗೆ ದೊರೆತ ಹೊಲಗಳು ತುಚಿಗೇರೀ ಹೊಲ ಪರಿಶಿಷ್ಟ ೧೦—೧೧.

೨. ಪರಿಶಿಷ್ಟ ೧೫

ಅಣ್ಣ ಸಿದ್ದನೆಂಪೂ ತಂದೆ ತಾಯಿಗಳು ತೀರಿದ ಮೇಲೆ ಅಣ್ಣನ ಮನೆಯಲ್ಲಿಯೇ ಇವನು ವಾಸವಾಗಿದ್ದನೆಂದೂ ಕಂಡುಬರುತ್ತದೆ.೧ ಅನಾಥನಾದ ಹಾಗೂ ಅನಾದರಣೀಯನಾದ ವೆಂಕಟೇಶನು ಸರಿಯಾದ ವಯಸ್ಸಿನಲ್ಲಿ ಶಾಲೆಯನ್ನು ಕಾಣದೆ, ಅಡವಿಗೆ ದನಕರಗಳನ್ನು ಮೇಯಿಸಲು, ತನ್ನ ಅಣ್ಣ ಹಾಗೂ ಅತ್ತಿಗೆಯ ಪ್ರೇರಣೆಯಿಂದ ಕಳಿಸಲ್ಪಡುತ್ತಿದ್ದನು. ಈ ರೀತಿಯಾಗಿ ಬಾಲ್ಯದಿಂದಲೂ ಅವನು ಬಹು ದೀನನಾಗಿ ಅಣ್ಣನ ಮನೆಯಲ್ಲಿ ಕಾಲ ಕಳೆಯುತ್ತಿದ್ದನು. ಹೀಗಿರಲು ಪದ್ಧತಿಯಂತೆ ಶ್ರೀವೆಂಕಟೇಶಮಹಾತ್ಮ್ಯವನ್ನು ಅಣ್ಣನು ಪಠಿಸುವಾಗ್ಗೆ ವೆಂಕಟೇಶನು ಬಹು ಆಸ್ತಿಕ ಬುದ್ಧಿಯಿಂದ ಅದನ್ನು ಆಲಿಸುತ್ತಿದ್ದನು. ಮೊದಲೇ ಸಾತ್ವಿಕ ಜೀವಿಯು. ಮೇಲೆ ಸದ್ವಂಶಜನು. ಅದರ ಮೇಲೆ ಮನೆಯಲ್ಲಿ ಪುರಾಣಾದಿಗಳ ಶ್ರವಣವನ್ನು ಸದಾ ಮಾಡುತ್ತಿದ್ದ. ಆವನಿಗೆ ಶ್ರೀನಿವಾಸದೇವರಲ್ಲಿ ನಿರ್ಮಲ ಭಕ್ತಿಯು ಅಂಕುರಿಸಿ, ಅಭಿವೃದ್ಧಿ ಹೊಂದುತ್ತಿದ್ದುದು ಸ್ವಾಭಾವಿಕವಾಗಿದ್ದಿತು. ಆ ದೇವದೇವೋತ್ತಮನಲ್ಲಿ ಹೀಗೆ ನಿತ್ಯವೂ ಬೆಳೆಯುತ್ತಿದ್ದ ಅತ್ಯುತ್ಕಟವಾದ ಪ್ರೇಮವೇ ಮುಂದೆ ಆತನ ವೆಂಕಟಗಿರಿಯ ಪ್ರಯಾಣಕ್ಕೆ ಕಾರಣವಾಯಿತು.೨

## ೩. ಗಿರಿಗೆ ಪ್ರಯಾಣ

ಹೀಗೆ ಕಾಲಕ್ಷೇಪವನ್ನು ಮಾಡುತ್ತಿರುವಾಗ್ಗೆ ಬಹು ನಿಷ್ಕರುಣೆಯೂ ಭೂತದಯೆ ವಿಹೀನಳೂ, ಅತಿ ಕಠೋರ ಉಕ್ತಿಯಿಂದ ಕೂಡಿದವಳೂ ಆದ ಅತ್ತಿಗೆಯಿಂದ ಆವುದೋ ಒಂದು ಕಿರುಕಳ ನಿಮಿತ್ತವಾಗಿ ಅಲ್ಲಸಲ್ಲದ ದುರುಕ್ತಿಗಳನ್ನು ಆಡಿಸಿಕೊಂಡು ವೆಂಕಟೇಶನು ಬಹು ಮನನೊಂದವನಾದನು. ಇನ್ನು ಮುಂದೆ ಅವಳ ಸೇವೆಯನ್ನು ಗೈಯುತ್ತ, ಅವಳು ಉಂಡುಬಿಟ್ಟು ಹಾಕಿದ ತಂಗೂಳನ್ನು ತಿಂದುಕೊಂಡು ಜೀವನ ಕಳೆಯುವದು ತನಗೆ ಬೇಡವಾಗಿ, ಜೀವದ ಹಂಗುದೊರೆದು ಅಂತಃಪ್ರೇರಕನ ಇಚ್ಛೆಯಂತೆ ವಿಚಾರಮಾಡಿ ಅವನು ಅತ್ತಿಗೆಯವರಿಗೆ "ಅತ್ತಿಗೆಯವರೆ, ತಾಪವಾಯಿತು. ನಾನು ಹೋಗಿ ಬರುತ್ತೇನೆ. ಅಣ್ಣನು ಊರಿಗೆ ಬಂದರೆ, ನಾನು ತಿರುಪತಿಗೆ ಹೋದೆನೆಂದು

---

೧. ಬೇಲೂರ ಕೇಶವದಾಸರ ಕ. ಭ. ವಿ. ಭಾಗ ೨ ಪುಟ ೨೬೨

೨. ಬೇಲೂರ ಕೇಶವದಾಸರ ಕ. ಭ. ವಿ. ಭಾಗ ೨ ಪ್ರಸನ್ನ ವೆಂಕಟರ ಚರಿತ್ರೆಯಿಂದ.

ಹೇಳಿರಿ." ಎಂದು ಹೇಳಿ ಮನೆಯನ್ನು ಬಿಟ್ಟು ನಡೆದನು.[೧] ಮತ್ತು ತಿರುಪತಿಯ ಸಂದರ್ಶನವನ್ನು ಬಯಸಿ, ಸ್ಮರಣೆಯಲ್ಲಿ ನಿಂತಷ್ಟು ಶ್ರೀ ವೆಂಕಟೇಶ ಸ್ತೋತ್ರವನ್ನು ಪಠಿಸುತ್ತ, ಮುಂದಿನ ಪ್ರಯಾಣವನ್ನು ಬೆಳೆಸಿದನು. ಕೆಲವು ದಿನಗಳ ವರೆಗೆ ನಡೆದು, ವೆಂಕಟೇಶನು ತಿರುಪತಿಯನ್ನು ತಲುಪಿದನು. ಅಲ್ಲಿಗೆ ಹೋಗಿ ಜನಸಂದಣಿಯಲ್ಲಿ ನುಸುಳಿ, ಭಗವಂತನ ದರ್ಶನವನ್ನು ತೆಗೆದುಕೊಂಡನು. ಆ ಕಾಲಕ್ಕೆ ಅತಿಶಯ ಆನಂದವಾಗಿ "ಸ್ವಾಮಿಯೇ, ನೀನು ಪೂರ್ಣ ಅನುಗ್ರಹ ಮಾಡಿ ಪಾಲಿಸಿದ ಈ ದೇಹವನ್ನು ನಿನ್ನ ಚರಣಾರವಿಂದ್ಧದಲ್ಲಿ ಸಮರ್ಪಿಸಿದ್ದೇನೆ. ಎಲ್ಲವೂ ನಿನ್ನನ್ನೇ ಕೂಡಿದೆ." ಎಂಬ ಭಾವವನು ಅವನು ವ್ಯಕ್ತ ಮಾಡಿರಬಹುದು.

## ೪. ಹರಿದಾಸನಾಗುವ ಲವಲವಿಕೆ.

ದರ್ಶನ ತೆಗೆದುಕೊಂಡು ಹೊರಗೆ ಬಂದ ಬಳಿಕ ಪ್ರತಿವರ್ಷದಂತೆ ಅಲ್ಲಿಗೆ ಹರಿದಾಸರ ಸಮೂಹವು ಬಂದಿದ್ದುದು ಅವನ ಕಣ್ಣಿಗೆ ಬಿದ್ದಿತು. ಆ ದೇವಸ್ಥಾನದ ಪ್ರಾಕಾರಗಳಲ್ಲಿರುವ ಶ್ರೀ ವ್ಯಾಸರಾಯರ ಹಾಗೂ ಶ್ರೀಪುರಂದರ ದಾಸರ ಮಂಟಪಗಳಲ್ಲಿ ಕುಳಿತುಕೊಂಡು, ಅವರು ಶ್ರೀಹರಿಯ ಸಂಕೀರ್ತನೆಗಳನ್ನು ಪಾಡುವವದನ್ನೂ ಗೆಜ್ಜೆಗಳನ್ನು ಕಟ್ಟಿಕೊಂಡು, ತಂಬೂರಿಯನ್ನು ಮೀಟುತ್ತ, ಕೈಯಿಂದ ಚಿಟ್ಟಿಗೆಗಳನ್ನು ನುಡಿಸುತ್ತ, ನೃತ್ಯ ಮಾಡುವವದನ್ನೂ ನೋಡಿ, ಅವನ ಅಂತಃಕರಣವು ಉಕ್ಕೇರಿ ಬಂದಿತು. ತಾನೂ ಅವರಂತೆ ಹರಿದಾಸನಾಗಿ ಶ್ರೀಹರಿಯ ಗುಣಗಾನವನ್ನು ಮಾಡಬೇಕು, ಅವನ ಸಂಕೀರ್ತನೆ ರೂಪದ ಪದಪದ್ಯಗಳನ್ನು ಹಾಡಿ, ನೃತ್ಯಗೈಯ್ಯಬೇಕು. ಇದೇ ಬದುಕಿ ಬಾಳುವದಕ್ಕೆ ಸಾಧನವು ಮತ್ತು ಮೋಕ್ಷ ಮಾರ್ಗವು ಎಂದು ತಿಳಿದುಕೊಂಡು, ಶ್ರೀನಿವಾಸನ ಚರಣಾರವಿಂದಗಳಿಗೆ ಮೊರೆ ಹೋಗಬೇಕು ಎಂದು ದೃಢಸಂಕಲ್ಪ ಮಾಡಿದನು. ಅಲ್ಲಿಂದ ಶ್ರೀಸ್ವಾಮಿ ಪುಷ್ಕರಣಿ ತೀರ್ಥದಲ್ಲಿ ಮಿಂದು, ಪರಿಶುದ್ಧ ಮನಸ್ಕನಾಗಿ, ಪ್ರಾಯೋಪವೇಶನ ವ್ರತ ಧಾರಣಗೈದು, ಶ್ರೀನಿವಾಸನ ಸಮ್ಮುಖದಲ್ಲಿ "ಪ್ರಾಣಾಚಾರಿಯಾಗಿ" ಬಿದ್ದು ಬಿಟ್ಟನು.[೨]

---

೧. ಬೇಲೂರ ಕೇಶವದಾಸರು ಕ. ಭ. ವಿಜಯ ಭಾಗ ೨ ಪುಟ ೨೬೮

೨. ಶ್ರೀ ಕೌಜಲಗಿ ಬಂಡೇರಾಯರು : ಪ್ರ. ವೆಂ. ಭಾ. ಮುನ್ನುಡಿ ಪುಟ ೨

## ೫. ತಿರುಪತಿಯ ಶ್ರೀಶ್ರೀನಿವಾಸನು ಪ್ರಸನ್ನನಾದ ಬಗೆ.

ಮಧ್ಯಾಹ್ನ ಪೂರ್ವದಲ್ಲಿ ಪ್ರಾಣಾಚಾರಿಯಾಗಿ ಬಿದ್ದವನು ಮಧ್ಯ ರಾತ್ರಿಯ ವರೆಗೂ ವೆಂಕಪ್ಪಯ್ಯನು ಹಾಗೇ ಇದ್ದನು. ಆಗ್ಗೆ ಪರಮ ಭಕ್ತ ವತ್ಸಲನಾದ ಶ್ರೀ ಶ್ರೀನಿವಾಸನು ಈತನ ಭಕ್ತಿಗೆ ಮೆಚ್ಚಿ, ಮಹಾ ಪುಣ್ಯಜೀವಿ ಯಾದ ವೆಂಕಪ್ಪಯ್ಯನನ್ನು ಉದ್ಧರಿಸಬೇಕೆಂಬ ಸಂಕಲ್ಪ ಮಾಡಿ, ಆತನ ಪವಿತ್ರ ತರವಾದ ನಾಲಿಗೆಯನ್ನು ಹೊರಗೆಳೆದು ಆದರ ಮೇಲೆ ತನ್ನ ಕರಪದ್ಮದಿಂದ ತನ್ನ ನಾಮಾಮೃತದ ಬೀಜಾಕ್ಷರಗಳಾದ "ವೆಂಕಟೇಶ" ಎಂಬ ಅಕ್ಷರಗಳನ್ನು ಬರೆದನು. ಹೀಗೆ ಶ್ರೀಶ್ರೀನಿವಾಸನು ಪ್ರತ್ಯಕ್ಷನಾಗಿ ಅನುಗ್ರಹಿಸಿದ್ದರಿಂದ ವೆಂಕಟೇಶನು ಮಹಾಜ್ಞಾನಿಯಾದನು. ಹಿಂದೆ ಓದಿ ಮರೆತ ಸದ್ವಿಷಯವು ಜ್ಞಾಪಕಕ್ಕೆ ಬರುವಂತೆ ಆತನ ಜನ್ಮಾಂತರದ ಸುಜ್ಞಾನವು ಸುಳಿಯಹತ್ತಿತು. ಆ ಬಳಿಕ ಅಜ್ಞಾನವು ಸೂರ್ಯಪ್ರಕಾಶವನ್ನು ಕಂಡ ತಿಮಿರದಂತೆ ಮಾಯವಾಗ ತೊಡಗಿತು. ಆದ್ದರಿಂದ ವೆಂಕಟೇಶನು ತನ್ನಲ್ಲಿ ಪರಮಾತ್ಮನು ತೋರಿದ ಅಪರಿಮಿತ ಕೃಪೆಯ ಬಗ್ಗೆ ಕೃತಜ್ಞತೆಯಿಂದ ತನಗೆ ಆ ಕಾಲದಲ್ಲಿ ಸ್ಫೂರ್ತಿ ಯುಂಟಾದಂತೆ ಶ್ರೀಹರಿಯ ಮಹಿಮೆಯನ್ನೂ ಕರುಣೆಯನ್ನೂ ಕವನ ರೂಪ ದಿಂದ ಅಲ್ಲಿಯೇ ವರ್ಣಿಸಲು ಉದ್ಯುಕ್ತನಾದನು. ಈ ಕೆಳಗಿನ ಪದ್ಯವನ್ನು ನೋಡಿದರೆ, ಇದು ಮೊದಲನೆಯ ಪದ್ಯವೆಂದು ಕಾಣುತ್ತಿದೆ.೧

ತಪ್ಪು ನೋಡದೆ ಬಂದೆಯಾ ನನ್ನ ತಂದೆಯಾ ।
ಅಪ್ಪ ತಿರುವೆಂಗಳೇಶನೆ ನಿರ್ದೋಷನೆ ॥ಪಲ್ಲ॥

ಆಪಾದಮೌಳಿ ಎನ್ನೊಳು ಅಘ ಬಹಳ ।
ಶ್ರೀಪತಿ ಕ್ಷಮಿಸಿ ಕಾಯ್ವೆಯಾ ಉದಧಿ ಧ್ಯೇಯಾ ॥
ಜಗದಘಹರನೆಂಬುದು ನಿನ್ನಯ ಬಿರುದು ॥
ತ್ರಿಗುಣಾತೀತನೆ ರಾಮನೆ ಗುಣಧಾಮನೇ ॥

ಇನ್ನೆನ್ನ ಕಲುಷವಾರಿಸೋ ಭವತಾರಿಸೋ । ಪ್ರ
ಸನ್ವೆಂಕಟ ರಮಣಾ ಭಯಶಮನಾ ॥

---

೧. ಶ್ರೀ ಕೌಜಲಗಿ ಬಂಡೇರಾಯರು : ಪ್ರ. ವೆಂ. ಕೀ. ಭಾಗ ೧ ಪುಟ ೩೦

## ೬. "ಪ್ರಸನ್ನ ವೆಂಕಟ" ಎಂಬ ಅಂಕಿತ

ವೆಂಕಪ್ಪಯ್ಯನಿಗೆ ಸಾಕ್ಷಾತ್ ಶ್ರೀವೆಂಕಟೇಶನೇ ಪ್ರಸನ್ನನಾಗಿ ನಾಲಿಗೆಯ ಮೇಲೆ ತನ್ನ ನಾಮವನ್ನು ಬರೆದದ್ದರಿಂದ, ವೆಂಕಪ್ಪಯ್ಯನು "ಪ್ರಸನ್ನ ವೆಂಕಟ" ಎಂದು ಅಂಕಿತವನ್ನಿಟ್ಟುಕೊಂಡು ಪದಗಳನ್ನು ರಚಿಸಹತ್ತಿದನು.

## ೭. ವೆಂಕಟಗಿರಿಯ ವಾಸ

ಶ್ರೀಪ್ರಸನ್ನ ವೆಂಕಟದಾಸರು ಕೆಲವು ಕಾಲ ಗಿರಿಯಲ್ಲಿಯೇ ಇದ್ದು, ಪರಮಾತ್ಮನ ಸೇವೆಗೈಯುತ್ತ, ಪದಗಳನ್ನು ರಚಿಸುತ್ತ, ಕಾಲ ಕಳೆದಿರಲು ಸಾಕು. ಇವರು ಈ ಪ್ರಕಾರ ನಿರಾತಂಕವಾಗಿ ಸುಖದಲ್ಲಿದ್ದುದನ್ನು ಕಂಡು, ಕೆಲವು ಜನರು ಇವರಿಗೆ ಹಿತಶತ್ರುಗಳಾಗಿ ಕಷ್ಟ ಕೊಟ್ಟಿರಬೇಕೆಂದು ಅವರು ಬರೆದ ಪದ್ಯದಿಂದ ಊಹೆ ಮಾಡಬಹುದಾಗಿದೆ.

"ಹಿತಶತ್ರುಗಳ ಸಂಗತಿ ಸಾಕು, ಪ್ರಸನ್ವೆಂಕಟ ।
ಪತಿ ನಿನ್ನ ಭಕ್ತರ ಸಂಗ ಕೊಡೊ ಕಾಣೊ ॥" ೧

ಗಿರಿಯಲ್ಲಿ ವಾಸಮಾಡುತ್ತಿದ್ದಾಗ ಆ ಕಾಲದಲ್ಲಿ ಅಲ್ಲಿಯ ಪಂಡಿತರನ್ನು ಕಂಡು, ಅವರ ಜ್ಞಾನಭಾಂಡಾರವನ್ನು ನೋಡಿ, ತನಗೆ ಬಾಲ್ಯದಲ್ಲಿ ವಿದ್ಯಾಭ್ಯಾಸವು ದೊರೆಯಲಿಲ್ಲವೆಂದು ಪ್ರಸನ್ನ ವೆಂಕಟರು ವ್ಯಸನಪಟ್ಟಿರಬೇಕು.

"ಮಾಧವಾ ನಾನೇನು ಓದಿದವನಲ್ಲಾ ಶ್ರೀ ।
ಪಾದವೇ ಗತಿಯೆಂಬೆ ಬಾಧಿಸುತ್ತೈದಾರೆ ॥" ೨

ಇನ್ನು ಮುಂದೆ ವಿದ್ಯಾಭ್ಯಾಸ ಮಾಡಬೇಕೆಂದು ನಿಶ್ಚಯಿಸಿ, ತಿರುಗಿ ಅವರು ತಮ್ಮ ಪ್ರಾಂತಕ್ಕೆ ಬಂದರು. ಮತ್ತು ಗುರುಗಳನ್ನು ಹುಡುಕಲು ಪ್ರಯತ್ನಿಸಹತ್ತಿದರು.

## ೮. ಜನಾರ್ದನಾಚಾರ್ಯರು

ಪ್ರಸನ್ನ ವೆಂಕಟರ ಕಾಲದಲ್ಲಿ, ಆ ಪ್ರಾಂತದಲ್ಲಿ ಪ್ರಖ್ಯಾತ ಪಂಡಿತರಾದ ಮುದ್ಗಲ ಜನಾರ್ದನಾಚಾರ್ಯರೆಂಬುವವರಿದ್ದರು. ಅವರ ಕಡೆಗೆ

---

(೧) ಶ್ರೀ. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಭಾಗ ೧ ಪುಟ ೧೦.
(೨) ಶ್ರೀ. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಭಾಗ ೧. ಪುಟ ೧೦.

ಬಂದು, ಅವರ ಶಿಷ್ಯತ್ವವನ್ನು ವಹಿಸಿ, ಐದಾರು ವರುಷ ಅವರಲ್ಲಿದ್ದು, ದಾಸರು ಸಂಸ್ಕೃತವನ್ನು ಓದಿಕೊಂಡು ಭಾರತ, ಭಾಗವತಗಳನ್ನು ಮನನ ಮಾಡಿ, ದ್ವೈತಸಿದ್ಧಾಂತವನ್ನು ತಿಳಿದುಕೊಂಡು ಸದ್ವಿದ್ಯಾಭ್ಯಾಸವನ್ನು ಪೂರೈಸಿದರು. ಜನಾರ್ದನಾಚಾರ್ಯರಲ್ಲಿದ್ದ ಗುಣಗಳನ್ನು ನೋಡಿ, ಪ್ರಸನ್ನ ವೆಂಕಟರು ಅವರನ್ನು ಹೀಗೆ ವರ್ಣಿಸಿದ್ದಾರೆ: "ಭಜಿಸಿ ಬದುಕೆಲೊ ಮುದ್ಗಲಾಚಾರ್ಯರನು." ದಾಸರು ಬರೆದ ಕೃಷ್ಣಾಷ್ಟಕದಲ್ಲಿ ಕೆಳಗಿನಂತಿದೆ.

"ನಂದನಂದನಾಷ್ಟಕೇನ ನಂದನಂದನೋ ಮುನಾ ।
ಬೋಧನಂದಮಾತನೋತಿ ಶುದ್ಧಾನಂದಚಿದ್ಘನಂ ।
ಸ್ವೀಯಪಾದನೀರಜಾನುರಕ್ತಮುದ್ಗಲಸ್ಯ ಮೇ ।
ಶ್ರೀಗುರೋರುಮಾನಸಾಂಬುಜಾಲಯೋದಯೋದಧಿಃ ॥"(೧)

ಮೇಲೆ ಹೇಳಿದ ಪ್ರಕಾರ ಶಿಕ್ಷಣ ಹೊಂದಿದ್ದರಿಂದ ಶ್ರೀಷ್ಮತರ ವಜ್ರಕ್ಕೆ ಚೊಕ್ಕ ಕುಂದಣ ಕೂಡಿಸಿದಂತಾಗಿ, ಈ ದಾಸಶ್ರೇಷ್ಠರ ಸುಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ಮಹಾಭಾಗವತ ಧರ್ಮದ ಗುಣಗಳು, ಸಾಣೆ ಹಿಡಿಸಿದ ಶಸ್ತ್ರಗಳಂತೆ ಬಹು ಪ್ರಕಾಶಮಾನವಾದವು. ಈ ಪ್ರಕಾರ ಹೊಸ ರೂಪತಾಳಿದ ಪ್ರಸನ್ನ ವೆಂಕಟದಾಸರು ದ್ವೈತಮತದ ಮೇಲೆ ಪದ, ಸುಳಾದಿಗಳನ್ನೂ ಭಾರತ, ಭಾಗವತ, ರಾಮಾಯಣಾದಿ ಸದ್ಗ್ರಂಥಗತವಾದ, ಪುಣ್ಯತರವಾದ ಚರಿತ್ರಗಳನ್ನೂ ಅನುಭವ, ಭಕ್ತಿ, ವೈರಾಗ್ಯಾದಿ ವಿಷಯಕವಾದ ಪದಗಳನ್ನೂ ಅಚ್ಚಗನ್ನಡ ಭಾಷೆಯಲ್ಲಿ, ಅತಿ ಸ್ವಾರಸ್ಯವಾಗಿ ಮತ್ತು ಸಂಗೀತಶಾಸ್ತ್ರಾನುಸಾರವಾದ ಕವನಗೈಯುತ್ತ ಲೋಕಪ್ರಸಿದ್ಧರಾದರು.

ಈ ಪ್ರಕಾರ ಪ್ರಸನ್ನ ವೆಂಕಟದಾಸರು ತಿರುಪತಿಯ ಶ್ರೀವೆಂಕಟೇಶನನ್ನು ಪ್ರಸನ್ನೀಕರಿಸಿಕೊಂಡು, ಆತನ ಅನುಗ್ರಹವನ್ನು ಸಂಪಾದಿಸಿ, ಆ ಪರಮಾತ್ಮನ ಲೀಲೆಯನ್ನು ಕೊಂಡಾಡಿ, ನಾನಾ ಕ್ಷೇತ್ರಗಳಲ್ಲಿದ್ದ ಪರಮಾತ್ಮನ ಭಿನ್ನ ಭಿನ್ನ ರೂಪದರ್ಶನವನ್ನು ತೆಗೆದುಕೊಂಡು "ಬ್ರಹ್ಮಾಂಡದೊಳಗೆ ಯಾವಲ್ಲಿ ನೋಡಿ

---

(೧) ಈ ನುಡಿಗಳು ಶ್ರೀ. ನಾರಾಯಣರಾವ ಕಲಮದಾನಿ ಇವರಲ್ಲಿದ್ದ ಪದ್ಯಗಳ ಸಂಗ್ರಹದಿಂದ ಆಯ್ದುಕೊಂಡವು. ಇವುಗಳಿಂದ ಮುದ್ಗಲಾಚಾರ್ಯರು ಪ್ರಸನ್ನ ವೆಂಕಟರ ಗುರುಗಳೆಂದು ತಿಳಿಯಬಹುದಾಗಿದೆ.

ದರೂ ನಮ್ಮೂರಿ ವಾಸಿ " ಎಂಬ ಪುರಂದರದಾಸರ ಪುಣ್ಯೋಕ್ತಿಯಂತೆ ಕೊನೆಗೆ ಸ್ವಗ್ರಾಮವಾದ ಬಾಗಲಕೋಟೆಗೆ ಬಂದರು.[೧]

ಶ್ರೀಪ್ರಸನ್ನ ವೆಂಕಟದಾಸರ ಲಗ್ನವು ಯಾವಾಗ್ಗೆ ಆಯಿತು? ಅವರಿಗೆ ಯಾರು ಹೆಣ್ಣು ಕೊಟ್ಟರು? ಆ ಹೆಂಡತಿಯ ಹೆಸರೇನು? ಮುಂತಾದ ವಾವೂ ತಿಳಿಯಲು ಆಧಾರಗಳು ದೊರೆತಿಲ್ಲ. ಆದರೆ ಅವರ ಪೀಳಿಗೆಯ ಮೇಲಿಂದ ಅವರಿಗೆ ವೆಂಕಟಕೃಷ್ಣಾಚಾರ್ಯ ಎಂಬ ಒಬ್ಬ ಮಗನಿದ್ದನೆಂದು ತಿಳಿಯುವದು.[೨]

## ೬. ದಾಸರ ಉತ್ಪನ್ನ

ಶ್ರೀಪ್ರಸನ್ನ ವೆಂಕಟದಾಸರು ಕೆಲವು ಕಾಲ ಬಾಗಲಕೋಟೆಯಲ್ಲಿದ್ದು, ದೇವರ ಆರಾಧನೆ ನಾಮಸ್ಮರಣೆಯಲ್ಲಿ ಕಾಲ ಕಳೆಯಹತ್ತಿದರು. ಆ ಕಾಲಕ್ಕೆ ಅವರಿಗೆ ಅನೇಕ ಶಿಷ್ಯರಾದರು. ಅವರು ದಾಸರ ಯೋಗ್ಯತೆಯನ್ನೂ ಮಹಿಮೆ ಯನ್ನೂ ಬೀರಹತ್ತಿದರು. ಇವರ ಖ್ಯಾತಿಯು ಎಲ್ಲೆಡೆಗೆ ಹಬ್ಬಿತು. ಇದನ್ನು ಕೇಳಿ, ಆ ಕಾಲದಲ್ಲಿದ್ದ ಸರದಾರರು, ಸಾಮಂತರು, ಸುಭೇದಾರರು ಮತ್ತು ನಾಯಕರು ದಾಸರಿಗೆ ಹೊಲ, ಮನೆಗಳನ್ನೂ ವರ್ಷಾಶನವನ್ನೂ ಕೊಟ್ಟರು. ಈ ಸಂಗತಿಯು ದಾಸರಿಗೆ ದೊರೆತ ಕಾಗದ-ಪತ್ರಗಳ ಮೇಲಿಂದ ತಿಳಿಯುತ್ತದೆ.

### (ಅ) ಹೊಲಗಳು :—

೧. ಇಮ್ಮಡಿ ಹಣಿಮಿ ನಾಯಕನು ತುರ್ಚಿಗೇರಿಯಲ್ಲಿ ದಾಸರಿಗೆ ತಾರೀಖು ೧೫ ಮಾಹೆ ಎಪ್ರಿಲ್ ಸನ್ನ ೧೭೨೩ರಲ್ಲಿ ಎರಡು ಮಾರು ಹೊಲ ವನ್ನು ವಂಶಪರಂಪರೆಯಾಗಿ ಉಪಭೋಗಿಸಲು ಕೊಟ್ಟಿದ್ದಾನೆ.[೩]

೨. ನಾನಾ ಮೇಲಗಿರಿ ದೇಸಾಯಿ ಮತ್ತು ಸರದೇಸಾಯಿ ಬಾಗಲ ಕೋಟೆ. ಈತನು ಮುಚಖಡಿ (ಮುಚಗಂಡಿ) ಊರ ಮುಂದಿನ ಹಾಳ ಹೊಲ

---

(೧) ಶ್ರೀ. ಬೇಲೂರ ಕೇಶವದಾಸರು: ಕ. ಭ. ವಿ. ಭಾಗ ೨, ಪುಟ ೨೭೪, ೨೭೫.

(೨) ದಾಸರ ಮನೆತನದ ವಂಶಾವಳಿ ಪರಿಶಿಷ್ಟ ೧೪.

(೩) ಇಮ್ಮಡಿ ಹಣಿಮಿ ನಾಯಕನ ಸನದು ಪರಿಶಿಷ್ಟ ೧೧.

ಎಂಬುವ ನಾಲ್ಕು ಗಿದ್ನದ ಭೂಮಿಯನ್ನು ಕೊಟ್ಟಿದ್ದಾನೆ. ಮತ್ತು ಇದಕ್ಕೆ ಸರಕಾರಿ ಜೂಡಿ ಪಟ್ಟಿ ಮುಂತಾದ್ದನ್ನು ತೆಗೆದುಕೊಳ್ಳತಕ್ಕದ್ದಲ್ಲವೆಂದು ಆಜ್ಞೆ ಮಾಡಿದ್ದಾನೆ. ಇದನ್ನು ಕೊಟ್ಟ ತಾರೀಖು ೧೬ ಮಾಹೆ ಎಪ್ರಿಲ್ ಸನ್ ೧೭೨೩.(೧)

೩. ಎಂಡಿಗೇರಿಯಲ್ಲಿದ್ದ ಹೊಲ ಆರು ಕೂರಗಿ ಇದ್ದದ್ದು. ಇದರ ಬಗ್ಗೆ ಕಾಗದ ದೊರೆತಿಲ್ಲ. ಆದರೆ ಈ ಹೊಲವು ಇನ್ನೂ ದಾಸರ ಮನೆತನದವರ ಕಡೆಗಿದೆ.

ಇಲ್ಲಿಯ ವರೆಗೆ ಪ್ರಸನ್ನ ವೆಂಕಟರಿಗೆ ದೊರೆತ ಹೊಲಗಳ ಬಗ್ಗೆ ಹೇಳಿದ್ದಾಯಿತು. ಇನ್ನು ಪ್ರಸನ್ನ ವೆಂಕಟರ ಮರಿಮಕ್ಕಳಾದ ಬಾಳಾಚಾರ್ಯರಿಗೆ ಆಚನೂರ ಕೃಷ್ಣನೆಂಬ ಗೃಹಸ್ಥನು ರಾಮಕುಂಟಿ ಎಂಬ ಹೆಸರಿನ ಹೊಲವನ್ನು ಇ. ಸ. ೧೮೧೪ರಲ್ಲಿ ದಾನವಾಗಿ ಕೊಟ್ಟಿದ್ದಾನೆ.

## (ಬ) ಮನೆಗಳು :—

೧. ಶ್ರೀಪ್ರಸನ್ನ ವೆಂಕಟದಾಸರಿಗೆ ಬದಾಮಿಯಲ್ಲಿ ಎರಡು ಮನೆಗಳು ಇದ್ದವೆಂದು ಕಂಡುಬರುತ್ತದೆ. ಈ ಮನೆಗಳನ್ನು ಖಂಡೋಪಂತ ಭೋಪರ್ಡೆ ಈತನು ಕೊಟ್ಟಿರುವನು. ಇವನು ಬಾಳಾಜಿ ಬಾಜೀರಾಯನ ಕಾಲದಲ್ಲಿ ಬದಾಮಿಯ ಕಿಲ್ಲೇದಾರನಾಗಿದ್ದನು. ಆ ಬಾಜೀರಾಯನ ಕಾಲವು ಇ. ಸ. ೧೭೨೦ರಿಂದ ೧೭೪೦ರ ವರೆಗೆ. ಆಂದಬಳಿಕ ಪ್ರಸನ್ನ ವೆಂಕಟರಿಗೆ ಈ ಎರಡೂ ಮನೆಗಳು ಇ. ಸ. ೧೭೪೦ರೊಳಗಾಗಿ ದೊರೆತಿರಬೇಕು. ಒಂದು ಮನೆ ಊರ ಹೊರಗಿನ ಹೊಂಡದ ಹತ್ತರ ಪ್ರಸನ್ನ ವೆಂಕಟರ ಕಟ್ಟೆಯ ಪೂರ್ವಕ್ಕೆ ಇದೆ. ಇದರ ಉದ್ದಳತೆ ೭೦ ಫೂಟು ಇದ್ದು, ೨೨ ಫೂಟು ಅಗಲವಾಗಿದ್ದು, ಉತ್ತರಾಭಿಮುಖವಾಗಿದೆ. ಇದರ ಎದುರಿಗೆ ಖಂಡೋಪಂತ ಭೋಪರ್ಡೆಕರ ಇವರ ಮನೆ. ಆವರ ವಂಶಸ್ಥರು ಅಲ್ಲಿಯೇ ಇರುತ್ತಾರೆ. ಪ್ರಸನ್ನ ವೆಂಕಟರ ಈ ಮನೆಯನ್ನು ನಾರಾಯಣಭಟ್ಟ ಜೋಶಿ ಮತ್ತು ಗೋವಿಂದಭಟ್ಟ ರಾಜಪುರೋಹಿತ (ಇವರಿಗೆ ಮೊಗುಂಡಿ ಎಂದೂ ಅಡ್ಡ ಹೆಸರು.) ಇವರು ೫೦–೬೦ ವರುಷಗಳ ಹಿಂದೆ ಕೊಂಡುಕೊಂಡರೆಂದು ತಿಳಿಯುತ್ತದೆ.

---

(೧) ನಾನಾ ಮೇಲಗಿರಿ ದೇಸಾಯಿಯ ಸನದು, ಪರಿಶಿಷ್ಟ ೧೦.

೩. ಇನ್ನೊಂದು ಮನೆ ಬದಾಮಿಯಲ್ಲಿಯೇ ಪ್ರಸನ್ನ ವೆಂಕಟರ ಕಟ್ಟೆಯಿಂದ ೨೦೦ ಅಡಿ ದೂರದಲ್ಲಿದ್ದು, ಪೂರ್ವಾಭಿಮುಖವಾಗಿದೆ. ಇದು ಸಾಧಾರಣವಾಗಿ ಹತ್ತು ಅಂಕಣದಷ್ಟಿದೆ.

ಪ್ರಸನ್ನ ವೆಂಕಟರು ಬಾಗಿಲುಕೋಟೆಯಲ್ಲಿ ಇರುತ್ತಿದ್ದು, ಬದಾಮಿಯಲ್ಲಿ ಮನೆಮಾಡುವ ಕಾರಣವೇನು? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಆದಕ್ಕೆ ಉತ್ತರವೆಂದರೆ, ಪ್ರಸನ್ನ ವೆಂಕಟರು ವೇಲಿಂದ ವೇಲೆ ಬದಾಮಿಗೆ ಬರುತ್ತಿದ್ದರು. ಏಕೆಂದರೆ, ಬದಾಮಿಯು ದಕ್ಷಿಣ ಕಾಶಿಯೆನಿಸಿಕೊಂಡಿದೆ.

## ೧೦. ಪ್ರಸನ್ನ ವೆಂಕಟರಿಗೆ ದೊರೆತ ವರ್ಷಾಶನಗಳು

ಶ್ರೀಪ್ರಸನ್ನ ವೆಂಕಟದಾಸರಿಗೆ ಬೇರೆ ಬೇರೆ ಜನರಿಂದ ಮತ್ತು ಊರಿನಿಂದ ವರ್ಷಾಶನಗಳು ದೊರೆತಿವೆ. ಅವುಗಳನ್ನು ಕೆಳಗೆ ಕೊಟ್ಟಿದ.

೧. **ಹನ್ನೆರಡು ಹೊನ್ನು**:— ಇದನ್ನು ಸಿದ್ದೋಜಿ ಹಿಂದುರಾವ ಘೋರಪಡೆ, ಮಮಲ ಕತಮದಾರ ಈತನು ತಾ. ೩ ಮಾರ್ಚ ೧೭೪೦ನೆಯ ಇಸ್ವಿಯಲ್ಲಿ ಬಾಗಲಕೋಟೆ ಪ್ರಾಂತದ ಖಜಾನೆಯಿಂದ ಕೊಡಿಸಿದನು.[೧]

| | | |
|---|---|---|
| ೨. | ಕಸಬಾ ಬಾಗಲಕೋಟದಿಂದ | ೩೩ ರೂ. ೩ ಆಣೆ |
| ೩. | ಹುಬ್ಬಳ್ಳಿಯಿಂದ | ೩ ರೂ. ೧೨ ಆಣೆ |
| ೪. | ತಡಸದಿಂದ | ೩ ರೂ. ೧೨ ಆಣೆ |
| ೫. | ಮಿಶರಿಕೋಟೆಯಿಂದ | ೨ ರೂ. ೮ ಆಣೆ |
| ೬. | ಕಲಘಟಗಿಯಿಂದ | ೧೫ ಆಣೆ[೨] |

೭. ಮೂರು ರೂಪಾಯಿ— ಮೊದಲು ದಾಸರಿಗೆ ಮೂರು ರೂಪಾಯಿ

(೧) ಸಿದ್ದೋಜಿ ಹಿಂದೂರಾವ ಘೋರಪಡೆ ಇವನಿಂದ ದೊರೆತ ವರ್ಷಾಶನ ಪರಿಶಿಷ್ಟ ೭.

(೨) ೨ರಿಂದ ೬ರ ವರೆಗೆ ವಿವರಿಸಿದ ವರ್ಷಾಶನಗಳು ದಾಸರಿಗೆ ದೊರೆತಿದ್ದು ಅವರ ಮರಿಮಕ್ಕಳ ವರೆಗೆ ನಡೆದುವೆಂದು ತಿಳಿಯುತ್ತಿದೆ. ಆದರೆ ಯಾರಿಂದ ಎಂಬ ಸಂಗತಿಯು ತಿಳಿಯುವದಿಲ್ಲ. ಪರಿಶಿಷ್ಟ ೯.

ದೊರೆಯುತ್ತಿದ್ದು ಯಾವುದೊ ಕಾರಣದಿಂದ ಅದು ಎರಡು ರೂಪಾಯಿ ಆಯಿತು. ಆದರೆ ಮುಂದೆ ಗೋಸಲ ಸಿಂಗಪ್ಪ ವಡೇರು, ಎಲಗುರದಪ್ಪ ನಾಯಕರು ದಾಸರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯರಿಗೆ ಮೂರು ರೂಪಾಯಿಗಳಂತೆ ಕೊಡಹತ್ತಿದರು.[೧]

## ೧೧. ಗ್ರಾಮ ಸಾದಿಲವಾರ ಮತ್ತು ಕಿರುಕಳ

(ಅ) ಪರವತಿಯಿಂದ ೧೫ ಆಣೆ. (ಬ) ನೀರಲಕೇರಿಯಿಂದ ೬ ಆಣೆ. (ಕ) ಬ್ಯಣ್ಣೂರಿಂದ ೮ ಆಣೆ. (ಡ) ಶಿರೂರಿಂದ ೪ ಆಣೆ. (ಈ) ಹ್ಯರಳಕಲ್ಲಿನಿಂದ ೬ ಆಣೆ. (ಫ) ಮಾರನಬಸರಿಯಿಂದ ೨ ರೂ. ೧೧ ಆಣೆ.[೨]

ಈ ಗ್ರಾಮದ ಸಾದಿಲವಾರ ಯಾವ ಊರಿಂದ ದೊರೆತಿವೆ ಎಂಬ ಸಂಗತಿಯು ತಿಳಿದರೂ ಯಾವಾಗ್ಗೆ ದೊರೆತಿವೆ ? ಎಂಬುದು ತಿಳಿಯಲು ಮಾರ್ಗವಿಲ್ಲದಾಗಿದೆ.

**ಕಿರುಕಳ** :— ದಾಸರಿಗೆ ಒಟ್ಟು ಕಿರುಕಳ ಹಣ ದೊರೆತಿದ್ದು, ಒಂದು ರೂಪಾಯಿ ನಾಲ್ಕು ಆಣೆ ಎಂದು ಹೇಳಬಹುದು.[೩]

ಪ್ರಸನ್ನ ವೆಂಕಟರು ಈ ಪ್ರಕಾರ ಉತ್ಪನ್ನವನ್ನು ಗಳಿಸಿದರು. ಆಣೆ, ರೂಪಾಯಿ ಹಣ ಕಡಿಮೆಯಾಗಿ ಇಂದು ತೋರಿದರೂ ಅವರು ಎಷ್ಟು ಪ್ರಖ್ಯಾತರಾಗಿದ್ದರೆಂಬುದು ಇದರಿಂದ ತಿಳಿಯುವದು.

## ೧೨. ಪ್ರಸನ್ನ ವೆಂಕಟರು ಮಾಡಿದ ಪವಾಡಗಳು

ಎಲ್ಲ ಮಹಾಪುರುಷರು ಒಂದಿಲ್ಲೊಂದು ರೀತಿಯಿಂದ ಪವಾಡಗಳನ್ನು ಮಾಡಿ ತೋರಿಸಿದ್ದಾರೆ. ಆದರೆ ಅವರು ತಮ್ಮ ಮಹಾತ್ಮ್ಯವನ್ನು ಇಲ್ಲವೆ ಹಿರಿಮೆಯನ್ನು ತೋರಿಸಬೇಕೆಂದು ಹೊರಟವರಲ್ಲ. ಏನೋ ಒಂದು ಪ್ರಸಂಗದಲ್ಲಿ ತಾನಾಗಿಯೇ ಆದ ಸಂಗತಿಗಳವು. ಪ್ರಸನ್ನ ವೆಂಕಟರು ಕೂಡ, ಪವಾಡ ಮಾಡಿದ್ದಾರೆ. ಅವುಗಳಲ್ಲಿ ಒಂದನ್ನು ಕೊಟ್ಟರೆ, ಅವುಗಳ ಸ್ವರೂಪ ತಿಳಿಯ

---

(೧) ವರ್ಷಾಶನ ಪರಿಶಿಷ್ಟ ೮.

(೨) ಗ್ರಾಮ ಸಾದಿಲವಾರದ ಪರಿಶಿಷ್ಟ ೯.

(೩) ವರ್ಷಾಶನ, ಗ್ರಾಮ ಸಾದಿಲವಾರಗಳ ಕಾಗದ ಪರಿಶಿಷ್ಟ ೯.

ಬಹುದು. ಪ್ರಸನ್ನ ವೆಂಕಟರು ಬಾಗಲಕೋಟೆಯಲ್ಲಿ ತಮ್ಮ ನಿವಾಸದಲ್ಲಿ ದ್ದಾಗ ಒಬ್ಬರು ದಾಸರಿಗೆ ಊಟಕ್ಕೆ ಆಮಂತ್ರಣ ಕೊಟ್ಟರು. ಅದಕ್ಕೆ ದಾಸರು ಒಪ್ಪಿಕೊಂಡರು. ನಂತರ ಬೇರೊಬ್ಬರು ಬಂದು, "ಸ್ವಾಮಿ, ನಾಳಿನ ದಿವಸ ದೇವತಾರ್ಚನೆ, ನೈವೇದ್ಯ ಮತ್ತು ಪ್ರಸಾದ ನಮ್ಮಲ್ಲಿ ಆಗುವಂತೆ ದಯಪಾಲಿಸ ಬೇಕು" ಎಂದರು. ಅದಕ್ಕೆ ದಾಸರು ಒಪ್ಪಿಕೊಂಡರು. ಈ ಎರಡೂ ಮಾತು ಗಳನ್ನು ಕೊಟ್ಟಾಗ್ಗೆ ದಾಸರು ದೇವರ ಧ್ಯಾನದಲ್ಲಿ ಮಗ್ನರಾದ್ದರಿಂದ ಆವುದೂ ಗೊತ್ತಾಗಿರಲಿಲ್ಲ. ಎಚ್ಚರವಾದೊಡನೆಯೆ ಸ್ಮರಣೆಗೆ ಬಂದಿತು. "ಇರಲಿ, ನಾಳೆ ಬೆಳಗ್ಗೆ ಎದ್ದಾಗ್ಗೆ ವಿಚಾರ ಮಾಡುವಾ" ಎಂದು ದಾಸರು ಸುಮ್ಮನಾದರು. ಮಾರನೆಯ ದಿನ ಮುಂಜಾವಿನಲ್ಲಿ ಮೊದಲನೇ ದಿನ, ಎರಡನೆಯ ಸಲ ಬಂದ ವರು ದಾಸರ ಮನೆಗೆ ಬಂದರು. ಅವರನ್ನು ಕಂಡಕೂಡಲೇ ದಾಸರು "ನಿಮ್ಮ ಲ್ಲಿಯೇ ಸ್ನಾನವನ್ನು ತೀರಿಸಿ, ದೇವತಾರ್ಚನೆಗೆ ಕುಳಿತುಕೊಳ್ಳುವೆನು. ಆ ಪ್ರಕಾರ ವ್ಯವಸ್ಥೆಯಾಗಬೇಕು" ಎಂದರು. ಅದಕ್ಕೆ ಗೃಹಸ್ಥರು ಒಪ್ಪಿಕೊಂಡು ಮನೆಗೆ ಹೋದರು. ನಂತರ ದಾಸರು ಆ ಗೃಹಸ್ಥನ ಮನೆಗೆ ಹೋಗಿ, ಸ್ನಾನ ವನ್ನು ತೀರಿಸಿ, ದೇವತಾರ್ಚನೆಯನ್ನು ಮುಗಿಸಿ, ನೈವೇದ್ಯವಾದ ನಂತರ ಪ್ರಸಾದಕ್ಕೆ ಕುಳಿತರು.

ಇತ್ತ ಮೊದಲಿಗನು ದಾಸರ ಮನೆಗೆ ಬಂದು, "ದಾಸರೆ, ಪ್ರಸಾದಕ್ಕೆ ಬರಬೇಕು" ಎಂದನು. ಆಗ ಇನ್ನೊಂದು ರೂಪವನ್ನು ಧರಿಸಿದ ದಾಸರು "ಆಗಲಿ" ಎಂದು ಆ ಬ್ರಾಹ್ಮಣನ ಸಂಗಡ ಹೋಗಿ ಊಟವನ್ನು ತೀರಿಸಿ ಕೊಂಡು ಬಂದರು.

ಪ್ರತಿನಿತ್ಯದಂತೆ ಸಾಯಂಕಾಲದಲ್ಲಿ ಎಲ್ಲ ಬ್ರಾಹ್ಮಣರು ಊರ ಹೊರಗಿನ ಹನುಮನ ಕಟ್ಟೆಯ ಮೇಲೆ ಕುಳಿತು, ಗಪ್ಪಾಷ್ಟಕವನ್ನು ಬಿಚ್ಚಿದರು. "ನಿಮ್ಮ ಲ್ಲೇನು, ನಿಮ್ಮಲ್ಲೇನು" ಎಂದು ಒಬ್ಬರಿಗೊಬ್ಬರು ಪ್ರಶ್ನೆ ಮಾಡತೊಡಗಿದರು. "ನಮ್ಮಲ್ಲಿ ಇಂದು ದಾಸರು ಪ್ರಸಾದಕ್ಕೆ ಬಂದಿದ್ದರು." ಎಂದು ಒಬ್ಬನು ಉತ್ತರಿ ಸಿದ. ಇದನ್ನು ಕೇಳಿ ಇನ್ನೊಬ್ಬನು "ನಮ್ಮಲ್ಲಿಯೂ ದಾಸರು ಪ್ರಸಾದಕ್ಕೆ ಬಂದಿದ್ದರು" ಎಂದು ಹೇಳಿದನು. ಇಬ್ಬರ ಮನೆಗೂ ಒಬ್ಬ ದಾಸರು ಊಟಕ್ಕೆ ಹೇಗೆ ಹೋಗುವರು ? ಎಂಬ ದಿಗಿಲು ಎಲ್ಲರಿಗೂ ಬಿದ್ದಿತು. ಇದನ್ನು ನಿರ್ಣ ಯಿಸಲು ಎಲ್ಲರೂ ದಾಸರ ಮನೆಗೆ ಹೋದರು. ಮತ್ತು ಅವರಿಗೆ ನಿಜಸಂಗತಿ

ಯನ್ನು ತಿಳಿಸಲು ಕೇಳಿಕೊಂಡರು. ಆಗ ದಾಸರು "ನಾನು ಇಬ್ಬರ ಮನೆಗೂ ಹೋಗಿದ್ದೆ" ಎಂದರು. "ತಾವು ರುದ್ರಾಂಶರು. ತಮ್ಮ ಸ್ವರೂಪವು ಜನರಿಗೆ ಗೊತ್ತಾಯಿತು. ಇನ್ನು ಮುಂದೆ ಇಲ್ಲಿ ಇರುವದು ಒಳಿತಲ್ಲ" ಎಂದು ತಿಳಿದು ದಾಸರು ಬಾಗಲಕೋಟೆಯನ್ನು ಬಿಟ್ಟು ಬದಾಮಿಯಲ್ಲಿ ಇರಹತ್ತಿದರು. " ಪರೋಕ್ಷಪ್ರಿಯಾಃ ಹಿ ವೈ ದೇವಾಃ " ದೇವರಿಗೆ ಪ್ರಕಟವಾಗುವದು ಸರಿ ಹೋಗುವದಿಲ್ಲ.

## ೧೩ ಪ್ರಚಲಿತ ಮಾತು.

ಶ್ರೀಪ್ರಸನ್ನ ವೆಂಕಟದಾಸರು ಊರಿಂದೂರಿಗೆ ಹೋಗುವಾಗ್ಗೆ ಶಿಷ್ಯರನ್ನು ಮುಂದೆ ಕಳುಹಿಸಿ, ದೇವರ ಪೆಟ್ಟಿಗೆ, ಪೂಜಾ ಸಾಮಾನುಗಳನ್ನು ಸಾಗಿಸುವ ಕುದುರೆಯೊಂದನ್ನು ಮುಂದೆ ಬಿಟ್ಟುಕೊಂಡು ತಾವೊಂದು ಕುದುರೆಯನ್ನೇರಿ ಪ್ರಯಾಣ ಮಾಡುತ್ತಿದ್ದರು. ಅಡವಿಯಲ್ಲಿ ಪ್ರಯಾಣ ನಡೆದಾಗ್ಗೆ ಹುಲಿಯನ್ನು ಕಂಡರೆ, ಅದರ ಮೈ ಥಪ್ಪರಿಸಿ, ಮೇಲೆ ದೇವರ ಕಂಟಲಿಯನ್ನು ಹೇರಿ, ಅದರ ಎಡಬಲಗಳಲ್ಲಿ ತಮ್ಮ ಕುದುರೆಗಳನ್ನು ನಡೆಸುತ್ತಿದ್ದರಂತೆ. ಹುಲಿಯು ಸಾಧುವಾದ ಎತ್ತಿನಂತೆ ಅವರನ್ನು ಹಿಂಬಾಲಿಸುತ್ತಿತ್ತಂತೆ. ಗ್ರಾಮದ ಅಗಸಿಯು ಬಳಿಗೆ ಬಂದೊಡನೆ "ಹುಲಿರಾಯ, ನಿನ್ನನ್ನು ನೋಡಿ ಜನರು ಗಾಬರಿಯಾದಾರು. ಇನ್ನುಮೇಲೆ ಗೋಹತ್ಯ ಮಾಡಬೇಡ, ನಡೆ ಅಡವಿಗೆ" ಎಂದು ಮೈಮೇಲೆ ಕೈ ಆಡಿಸಿ, ಅದರ ಹಣೆಗೆ ಅಂಗಾರ ಹಚ್ಚಿ ಕಳುಹಿಸುತ್ತಿದ್ದರಂತೆ. ಆ ಹುಲಿಯು ಮುಂದೆ ಗೋಜಾತಿಯು ತಂಟೆಗೆ ಹೋಗುತ್ತಿರಲಿಲ್ಲವಂತೆ. ಇದನ್ನು ಅರಿತು ಹಳ್ಳಿಯ ಜನರು ದಾಸರನ್ನು ತಮ್ಮ ತಮ್ಮ ಗ್ರಾಮಗಳಿಗೆ ಕರಕೊಂಡು ಹೋಗಿ, ತಮ್ಮ ದನಗಳಿಗೆ ಹುಲಿಗಳ ಬಾಧೆಯಾಗದಂತೆ ಮಾಡಿಕೊಳ್ಳುತ್ತಿದ್ದರಂತೆ. "ರಾಯರು ಓಡ್ಯಾಡಿದ ಅಡವಿಯಿದು. ನಮ್ಮ ದನಗಳನ್ನು ಹುಲಿಯು ಇಲ್ಲಿ ಮುರಿಯಲಾರದು. ರಾಯರ ಆಣೆಯಾಗಿದೆ." ಎಂಬ ಮಾತು ಆ ಕಾಲದ ಹಳ್ಳಿಗರ ಮನೆ ಮಾತಾಗಿತ್ತಂತೆ. ದಾಸರು ಹುಲಿಗೆ ಅಂಗಾರ ಹಚ್ಚುತ್ತಿದ್ದ ಕಾರಣ ಅವರಿಗೆ "ಅಂಗಾರದ ಆಚಾರ್ಯರು" ಎಂದು ಜನರು ಹೆಸರಿಟ್ಟಿದ್ದರಂತೆ.[೧]

---

೧. ಬೇಲೂರ ಕೇಶವದಾಸರು: ಕ. ಭ. ವಿಜಯ ಭಾಗ ೨ ಪುಟ ೨೮೩—೮೩

## ೧೪. ನಿಜ ಸಂಗತಿ.

ಮೇಲಿನ ಎರಡು ಸಂಗತಿಗಳನ್ನು ಓದಿ, ಮನಸ್ಸು ಒಪ್ಪದಿದ್ದರೂ ಈ ಕೆಳಗಿನ ಸಂಗತಿಯನ್ನು ಓದಿ, ಯಾವನಾದರೂ ವಿಶ್ವಾಸವಿಡಬಹುದು.

ತುಳಸಿಕೇರಿ (ತುಳಸಿಗೇರಿ ಇಲ್ಲವೆ ತುರ್ಚಿಗೇರಿ) ಎಂಬ ಒಂದು ಹಳ್ಳಿಯಿದೆ. ಅಲ್ಲಿ ದಾಸರಿಗೆ ದೊರೆತ ಹೊಲವು ಈಗಲೂ ದಾಸರ ವಂಶಿಕರ ವಶದಲ್ಲಿದೆ. ಈ ಎರಡು ವಾರು ಹೊಲವನ್ನು ಇಮ್ಮಡಿ ಹಣಿವಿ ನಾಯಕನು ದಾಸರಿಗೆ ಕೊಟ್ಟಿದ್ದಾನೆ. ಆ ಹೊಲಕ್ಕೆ "ಕರಿಬಾಯಿ ಆಚಾರ್ಯರ ಹೊಲ" ಎಂಬ ಹೆಸರಿವೆ. ಇದಕ್ಕೆ ಕಾರಣವೇನೆಂದರೆ ಪ್ರಸನ್ನ ವೆಂಕಟರ ಕಾಲದಲ್ಲಿ ಆ ಹೊಲವನ್ನು ಸಾಗುಮಾಡುತ್ತಿದ್ದ ರೈತನು ಲಾವಣಿಯನ್ನು ಕೊಡದೆ "ಹೊಲ ಬೆಳೆಯಲೇ ಇಲ್ಲ, ರಾಯರೆ" ಎಂದು ಸುಳ್ಳು ಹೇಳಿದನು. ಇದಕ್ಕೆ ದಾಸರು— "ಲಾವಣಿ ಕೊಡಲಾರೆಯಾ ? ಹೊಲ ಬೆಳೆಯಲಿಲ್ಲವೇ ? ಹಾಗಿದ್ದರೆ ಹಾಗೇ ಆಗಲಿ ಹೋಗು " ಎಂದರಂತೆ. ಮುಂದೆ ಮೂರು ನಾಲ್ಕು ವರುಷಗಳ ವರೆಗೆ ಸುತ್ತುಮುತ್ತಲಿನ ಹೊಲಗಳು ಚನ್ನಾಗಿ ಬೆಳೆದರೂ ದಾಸರ ಹೊಲದಲ್ಲಿ ಏನೂ ಬೆಳೆಯಲಿಲ್ಲವಂತೆ. ಲಾವಣಿಯ ಮಾತಿರಲಿ, ರೈತನಿಗೆ ಜೋಳದ ಕಾಳಿಗೂ ಅಭಾವವಾಯಿತಂತೆ. ಬಳಿಕ ರೈತನು ಕಂಗೆಟ್ಟು ರಾಯರಿಗೆ ಶರಣಾಗತನಾಗಿ ಶುಭ ನುಡಿಯಿರೆಂದು ಪ್ರಾರ್ಥಿಸಿದನಂತೆ. ಆಗ್ಗೆ ದಾಸರು "ಹಾಗೇ ಆಗಲಿ" ಎಂದರಂತೆ. ರೈತನ ಕಷ್ಟ ಪರಿಹಾರವಾಗಿ ನಷ್ಟ ಮುಟ್ಟುವ ವರೆಗೆ ದಾಸರು ಆ ಹೊಲದ ಲಾವಣಿಯನ್ನು ಕೇಳಲಿಲ್ಲವಂತೆ. ಈ ಸಂಗತಿಯಿಂದ ಪ್ರಸನ್ನ ವೆಂಕಟರ "ನಡೆ ನುಡಿ" ಒಂದಾಗಿತ್ತೆಂದು ತಿಳಿಯುವದಲ್ಲದೆ, ಅವರಲ್ಲಿದ್ದಂಥ ಉದಾರತನವೂ ಹೊರಹೊಮ್ಮುತ್ತದೆ.೧

ಇನ್ನೊಂದು ನಿಜ ಸಂಗತಿಯೆಂದರೆ— ಒಂದಾನೊಂದು ಪ್ರಸಂಗದಲ್ಲಿ ಹಿರಿಯ ಬಾಜೀರಾಯನು ಬಾಗಲಕೋಟೆಗೆ ಬಂದಾಗ್ಗೆ, ಅವನು ಪ್ರಸನ್ನ ವೆಂಕಟದಾಸರನ್ನು ನೋಡಬಯಿಸಿ, ದಾಸರನ್ನು ಗೌರವಪೂರ್ವಕವಾಗಿ ಕರೆ ತರಲು ತನ್ನ ಕರಣಿಕನನ್ನು ಕಳುಹಿಸಿದನು. ಆತನು ದಾಸರ ಕಡೆಗೆ ಬಂದು ಬರಲು ಬಿನ್ನವಿಸಿದನು. ಆ ಕಾಲಕ್ಕೆ ಆ ಕರಣಿಕನು ತನ್ನ ಕಿವಿಯಲ್ಲಿ ಒಂದು

---

೧. ಬೇಲೂರ ಕೇಶವದಾಸರು: ಕ. ಭ. ವಿಜಯ ಭಾಗ ೨ ಪುಟ ೨೪೨—೪೩.

ಲೆಕ್ಕಣಿಕೆಯನ್ನು ಇಟ್ಟುಕೊಂಡಿದ್ದನ್ನು ನೋಡಿ, "ಇದೇನು? ಕರ್ಣಭೂಷಣ ವೇನು?" ಎಂದು ಪ್ರಸನ್ನ ವೆಂಕಟರು ಕೇಳಿದರು. ಅದಕ್ಕೆ ಆತನು "ಇದು ನನ್ನ ತೀವ್ರ ಬರಹದ ಕುರುಹು ಆಗಿದ್ದು, ಶ್ರೀಮಂತರಾದ ಪೇಶ್ವೆಯವರು ಇದನ್ನು ನನಗೆ ಬಹುಮಾನವಾಗಿ ಕೊಟ್ಟಿದ್ದಾರೆ" ಎಂದು ಹೇಳಿದನು. ಆಗ ದಾಸವರ್ಯರು ಅಂತರಂಗದಲ್ಲಿ ನಗುತ್ತ, ಬಹಿರಂಗದಲ್ಲಿ "ಓಹೋ! ಹಾಗಾದರೆ ಬರಹದಲ್ಲಿ ನಿಮ್ಮನ್ನು ಆಧುನಿಕ ಗಣಪತಿಯೆಂದು ಕರೆಯಬಹುದಲ್ಲವೆ?" ಎಂದು ಹಾಸ್ಯ ಮಾಡಿದರು. ಆ ಕರಣಿಕನು ಅಹುದೆಂದು ಸೂಚಿಸಲು ತನ್ನ ತಲೆಯನ್ನು ಅಲ್ಲಾಡಿಸಿದನು. ಆಗ ಪ್ರಸನ್ನ ವೆಂಕಟರು "ಒಳ್ಳೇದು. ಆ ಪ್ರಕಾರ ನಮ್ಮೆದುರಿಗೆ ಆ ಪ್ರಯೋಗವನ್ನು ಮಾಡಿ ತೋರಿಸಿರಿ. ನಾವು ಒಂದು ವಿಷಯವನ್ನು ಹೇಳುತ್ತಿದ್ದಂತೆಯೇ ನೀವು ಬರೆದು ಪೂರೈಸಿದಲ್ಲಿ ನಿಮ್ಮ ಕಿವಿಯಲ್ಲಿ ಲೆಕ್ಕಣಿಕೆ ಇಟ್ಟದ್ದಕ್ಕೂ ಶ್ರೀಮಂತರು ಅದನ್ನು ಅನುಗ್ರಹಿಸಿದ್ದಕ್ಕೂ ಸಾರ್ಥಕವಾಗುವದು." ಎಂದು ಕೆಳಗಿನ ಪದ್ಯವನ್ನು ಅನ್ನಲು ಪ್ರಾರಂಭ ಮಾಡಿದರು.

## ರಾಗ ಪೂರ್ವಿ— ತಾಳ ಆದಿ

ಎಂಥಾ ಶ್ರೀಮಂತಾನಂತಾನು । ಶ್ರೀಕಾಂತೆಯ ಕಾಂತಾ ॥ ಪಲ್ಲ ॥

ಬಮ್ಮನು ಹೆಮ್ಮಗ-ಮೊಮ್ಮ ವೃಷಮ್ಮರಿ। ಮೊಮ್ಮೆಶಚಿಮ್ಮಸ್ವರಮ್ಮಪರಮ್ಮ।
ಅಮ್ಮರ ಸಮ್ಮೋಹ ನಿಮ್ಮಣುಗಮ್ಮರು । ನಮ್ಮೋನಮ್ಮ ಪರಮ್ಮ
ಮಹಿಮ್ಮ ॥ ೧ ॥

ಅಂಗರುಹಂಗಳು ಜಂಗನಂತ ಗಡ। ಮಂಗಳ ಪಾಂಗ ವಿಶ್ವಂಗಳ ಮಂಗಳ।
ಶಿಂಗರದಂಗುಟ ಸಂಗದ ಗಂಗಜ । ಗಂಗಳಘಂಗಳ
ಹಿಂಗಿಪಳಾಂಗಾ ॥ ೨ ॥

ಪನ್ನಗ ಪನ್ನಶಯನ್ನ ಮಹೋನ್ನತ । ಪನ್ನಗವರವಾಹನ್ನರತುನ್ನ ।
ಭವಾನ್ನ ಸುಖೋನ್ನತದನ್ನಗರನ್ನಿಜ । ನಿನ್ನೆದುರಿನ್ಯಾರೆನ್ನೊಡೆಯನ್ನೆ ॥ ೩ ॥

ಬಲ್ಲ ಕೈವಲ್ಯಜ್ಞರೊಲ್ಲಭ ಸುಲ್ಲಭ । ಬಲ್ಲಿದ ಖುಲ್ಲರ ದಲ್ಲಣನಲ್ಲದೆ ।
ಹುಲ್ಲುದುನಲ್ಲೊಳವಲ್ಲ ನಿನ್ನಲ್ಲದೆ । ಸಲ್ಲದು ಸೊಲ್ಲ ನಿನ್ನಲ್ಲದಿನಿಲ್ಲ ॥ ೪ ॥

ಅಂಬರದುಂಬಿಗೆ ತುಂಬೆ ವಿಶ್ವಂಬ ಸು । ಹೃದಂಬಿಲಿನಿಂಬಿಟು
ಕೊಂಬ ಕೃಪಾಂಬುಧಿ ।
ಡಿಂಬಕದಂಬಕ ಬಿಂಬ ಪ್ರಸನ್ವೆಂಕಟ । ನಂಬಿದರ್ಗಂಬಿವನೆಂಬ
ಕುಟುಂಬಿ ॥ ೫ ॥

ಆದರೆ ಕರಣಿಕನ ದುರ್ದೈವದಿಂದ ಈ ಪದದ ಕಾಲುಭಾಗವನ್ನಾದರೂ ಆತನಿಗೆ ಬರೆಯುವದಾಗಲಿಲ್ಲ. ಆದ್ದರಿಂದ ಅವನು ಅವಮಾನಿತನಾಗಿ ಸುಮ್ಮನೆ ಕುಳಿತುಬಿಟ್ಟನು. ಅದನ್ನು ಕಂಡು "ಹಾಗೆ ಮನಸ್ಸಿನಲ್ಲಿ ಗರ್ವಭಾವನೆಯನ್ನು ಮಾಡಿಕೊಳ್ಳಬಾರದು" ಎಂದು ದಾಸರು ಆತನಿಗೆ ಬುದ್ಧಿಯ ಮಾತು ಹೇಳಿದರು.

## ೧೫. ಪ್ರಸನ್ನ ವೆಂಕಟರಿಗೆ ಪುರಂದರದಾಸರು ಆದರ್ಶರಾದರು

ಪ್ರಸನ್ನ ವೆಂಕಟದಾಸರಿಗೆ ಪುರಂದರದಾಸರೆಂದರೆ ಬಹಳ ಭಕ್ತಿ. ದಾಸರು ತಿರುಪತಿಗೆ ಹೋದಾಗ್ಗೆ, ಅಲ್ಲಿ ಹರಿದಾಸರಿಂದ ಪುರಂದರದಾಸರ "ಗೀತ ತಾಯಿ ಸುಳಾದಿ-ಉಗಾಭೋಗ ಪದ್ಯ"ಗಳನ್ನು ಕೇಳಿದರು. ತಾವೂ ಅವರಂತೆ ಆಗಬೇಕು ಎಂಬ ಹಂಬಲವು ಪ್ರಸನ್ನ ವೆಂಕಟರಿಗೆ ಇದ್ದ ಕಾರಣ ಅವರು ಪುರಂದರದಾಸರ,

ಇದು ಭಾಗ್ಯ ಇದು ಭಾಗ್ಯ ಇದು ಭಾಗವಯ್ಯಾ ।
ಪದುಮನಾಭನ ಪಾದಭಜನೆ ಸುಖವಯ್ಯಾ॥[೧]

ಈ ಪದ್ಯವನ್ನು ಕೇಳಿ, ತಾವೂ ಅವರಂತೆ ಪದುಮನಾಭನ ಭಜನೆಯನ್ನು ಮಾಡಬೇಕೆಂದು ಬಯಸಿದರು. ಮತ್ತು ಪುರಂದರದಾಸರ "ಬಂದು ನಿಂದಿಹ ನೋಡಿ" ಎಂಬ ನುಡಿಯನ್ನು ಕೇಳಿ, ಪುರಂದರದಾಸರಂತೆ, ಪರಮ ದಯಾಳುವಾದ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳಬೇಕೆಂದು ಉತ್ಕಟವಾಗಿ ಇಚ್ಛಿಸಿದರು. ಆದಕಾರಣ ಪುರಂದರದಾಸರನ್ನು ತಮ್ಮ ಮುಂದೆ ಆದರ್ಶ ದಾಸರನ್ನಾಗಿ ಪ್ರಸನ್ನ ವೆಂಕಟರು ಇಟ್ಟುಕೊಂಡರು. ಪುರಂದರದಾಸರ ಬಗ್ಗೆ

---

(೧) ಕ. ಹ. ಕೀ. ತ. ಸಂಪುಟ ೧ ಭಾಗ ೧೩೧.

ಪ್ರಸನ್ನ ವೆಂಕಟರು ಹೇಳಿದ ಮಾತುಗಳು, "ತಂದೆ ಪುರಂದರದಾಸರ ಸ್ಮರಿಸುವೆ ಎನ್ನ। ಮಂದಮತಿಗಳೆಸು ಹರಿಭಟನೆನಿಸುವೆ" ಈ ಪದ್ಯದಲ್ಲಿ ಸ್ಪಷ್ಟ ಕಾಣುತ್ತಿವೆ.[೧]

## ೧೫. ದಾಸರ ದೇಶಸಂಚಾರ

ಹರಿದಾಸರು ದೇಶಸಂಚಾರದಿಂದ ಎರಡು ಕಾರ್ಯಗಳನ್ನು ಸಾಧಿಸಿದರೆಂದು ಕಾಣುತ್ತದೆ. ಅದೇನೆಂದರೆ, ದೇವರು ನಾನಾ ರೂಪಗಳನ್ನು ಧರಿಸಿ ಕಾಶಿ, ರಾಮೇಶ್ವರ, ಗಯಾ, ವೃಂದಾವನ ಮುಂತಾದ ತೀರ್ಥಕ್ಷೇತ್ರಗಳಲ್ಲಿ ಇರುವನು. ಅಂಥ ಆ ಪರಮಾತ್ಮನ ರೂಹು ನೋಡುವ ಹಂಬಲದಿಂದ ಯಾತ್ರೆಗಳನ್ನು ಕೈಕೊಳ್ಳುವದು ಮತ್ತು ಅದರಿಂದ ಮೋಕ್ಷಸಾಧನ ಮಾಡಿಕೊಳ್ಳುವದು. ಪ್ರಯಾಣದಲ್ಲಿ ಹಳ್ಳಿಹಳ್ಳಿಗೆ ವಿಶ್ರಮಿಸಿ, ಅಲ್ಲಿಯ ಸಾಮಾನ್ಯ ಜನರನ್ನು ಸನ್ಮಾರ್ಗಕ್ಕೆ ಹಚ್ಚುವದು. ಅಂದರೆ ಆತ್ಮೋನ್ನತಿ ಮತ್ತು ಲೋಕೋದ್ಧಾರ ಇವು ದಾಸರ ಹಿರಿದಾದ ಗುರಿ.

ವ್ಯಾಸರಾಯರು, ಪುರಂದರದಾಸರು, ಕನಕದಾಸರು, ವಿಜಯದಾಸರು, ಜಗನ್ನಾಥದಾಸರು ಸಂಚಾರ ಮಾಡಿದಷ್ಟು, ಶ್ರೀಪ್ರಸನ್ನ ವೆಂಕಟದಾಸರು ಮಾಡಿಲ್ಲವೆಂದು ಕಾಣುತ್ತದೆ. ಅವರು ತಮ್ಮ ಸುತ್ತಲಿನ ನಾಡಿನಲ್ಲಿ ಎಂದರೆ ಬಂಕಾಪೂರ, ವಿಜಯಪುರ ಪ್ರಾಂತ, ಶಿರೂರ, ತಡಸ, ಮಿಶ್ರೀಕೋಟಿ, ಕಲಘಟಗಿ, ಹುಬ್ಬಳ್ಳಿ ಮುಂತಾದ ಹಳ್ಳಿ ಹಾಗೂ ಪಟ್ಟಣಗಳಿಗೆ ಹೋಗಿದ್ದರೆಂದು ಅವರಿಗೆ ದೊರೆತ ಕ್ಷೇತ್ರ, ವರ್ಷಾಶನ, ಸನದುಗಳಿಂದ ತಿಳಿದುಬರುವದು. ಅವರು ಪ್ರತಿವರುಷ ಗಿರಿಗೆ ಹೋಗುತ್ತಿದ್ದರು. ಆ ಕಾಲಕ್ಕೆ ತಂಬೂರಿಯನ್ನು ತೆಗೆದುಕೊಂಡು, ಕಂಕುಳದಲ್ಲಿ ಗೋಪಾಳದ ಬುಟ್ಟಿಯನ್ನು ಇಟ್ಟುಕೊಂಡು, ಒಂದು ಕೈಯಲ್ಲಿ ಬೆಳ್ಳಿಯ ಕಟ್ಟು ಹಾಕಿದ ಬಡಿಗೆಯನ್ನು ಧರಿಸಿ, ತಮ್ಮ ಆರಾಧ್ಯ ಮೂರುತಿಯಾದ ಬಾಲಕೃಷ್ಣನನ್ನು ತೆಗೆದುಕೊಂಡು ಹೋಗುತ್ತಿದ್ದರು.[೨]

---

(೧) ಕಾಜಲಗಿ ಬಂಡೆಪ್ಪನವರು : ಪ್ರ. ವೆ. ಕೀ. ಭಾಗ ೧ ಪುಟ ೩.

(೨) ಬಾಗಿಲಕೋಟೆಯಲ್ಲಿದ್ದ ದಾಸರ ಮನೆಯಲ್ಲಿ ಅವರ ತಂಬೂರಿ, ಗೋಪಾಳ ಬುಟ್ಟಿ, ಬಡಿಗೆ ಮತ್ತು ವೆಂಕಟೇಶದೇವರ ಮೂರ್ತಿ ಇವು ಅವೆ. ಅವರ ವಂಶಕರು ದಿನಾಲು ಈಗಲೂ ಪೂಜಿಸುತ್ತಾರೆ. ಪರಿಶಿಷ್ಟ ೪-೬.

ಉತ್ಸವ ಮೂರುತಿಯಾದ ಶ್ರೀದೇವಿ, ಭೂದೇವಿ ಸಮೇತವಾದ ಶ್ರೀವೆಂಕಟೇಶ ದೇವರ ಮೂರ್ತಿಯು ಅವರ ಕೂಡ ಇರುತ್ತಿತ್ತು.[೧]

ಪ್ರಸನ್ನ ವೆಂಕಟದಾಸರು ವೃಂದಾವನಕ್ಕೆ ಹೋಗಿರಬಹುದೆಂದು ತಿಳಿಯಲು ಕೆಳಗಿನ ಪದ್ಯವು ಆಧಾರವಾಗಲಿಕ್ಕೆ ಸಾಕು. ಏಕೆಂದರೆ ಅಲ್ಲಿ ನಡೆದ ಸಂಗತಿಯನ್ನು ಪ್ರತ್ಯಕ್ಷವಾಗಿ ಕಂಡಂತೆ ಅವರು ವರ್ಣಿಸಿದ್ದಾರೆ.

**ರಾಗ— ಸಹಡಿ ತಾಳ— ಅಟ್ಟ**

ವೃಂದಾವನದಿ ಮುಕುಂವನಾಲಯುದ । ಮುಂದೆ ದಿಗಿದಿಗಿತ ವಾದ್ಯ ।
ವಂದನೆ ತಂವೆ ಪ್ರಸನ್ವೆಂಕಟೇಂದ್ರ ಮುದ್ರಾಂಕ ।
ಹೊಂದುವ ಜನುಮವಾನಂದ ಮುನಿಮತವ ॥[೨]

ಪ್ರಸನ್ನ ವೆಂಕಟರು ಉಳಿದ ದಾಸರಿಗಿಂತಲೂ ಕಡಿಮೆ ಪ್ರಮಾಣದಲ್ಲಿ ದೇಶ ಸಂಚಾರವನ್ನು ಮಾಡಿದರೂ ಅವರ ಕೃತಿಗಳು ಉಳಿದ ದಾಸರ ಕೃತಿಗಳಿಗಿಂತ ಹೆಚ್ಚು ಕಾರ್ಯ ಮಾಡಿವೆ. ಇದು ಅವರ ನುಡಿಗಳಲ್ಲಿದ್ದ ವೈವಿಧ್ಯವನ್ನು ನೋಡಿದರೆ ಕಂಡುಬರುವದು. ಎಲ್ಲ ದಾಸರ, ಸುಜೀವರ ಮತ್ತು ಭಗವದ್ಭಕ್ತರ ಗುರಿಯೊಂದೇ. ಆದರೆ ದಾರಿ ಬೇರೆ.

## ೧೭. ದೇವರ ಪೂಜೆ

ಎಲ್ಲ ದಾಸರು ನಿತ್ಯ ನಿಯಮಗಳನ್ನು ಮಾಡುತ್ತಿದ್ದರು. ಅವುಗಳಲ್ಲಿ ದೇವರ ಪೂಜೆಯೂ ಒಂದು. ಅದರ ಸಲುವಾಗಿ ಪ್ರತ್ಯೇಕ ಸ್ಥಳವೊಂದನ್ನು ಕಲ್ಪಿಸಿ, ಅದನ್ನು ಸ್ವಚ್ಛವಾಗಿಟ್ಟುಕೊಂಡು, ಅಲ್ಲಿ ಒಮ್ಮನಸ್ಸಿನಿಂದ ಧ್ಯಾನವನ್ನು ಮಾಡಿ, ಪೂಜೆಯನ್ನು ನಡೆಸುತ್ತಿದ್ದರು. ಇದೇ ಪ್ರಕಾರವನ್ನು ಪ್ರಸನ್ನ ವೆಂಕಟ ದಾಸರಲ್ಲಿಯೂ ಕಾಣುತ್ತೇವೆ. ದಾಸರು ಪೂಜೆಯ ಸಲುವಾಗಿ ಒಂದು ಕೋಣೆಯನ್ನು ನಿರ್ಮಿಸಿ, ಅಲ್ಲಿ ನಿತ್ಯಕರ್ಮಗಳನ್ನೂ ಸಾಗಿಸುತ್ತಿದ್ದರೆಂದು ಬಾಗಿಲುಕೋಟೆಯಲ್ಲಿ ದಾಸರ ಮನೆಯಲ್ಲಿದ್ದ ದೇವರ ಕೋಣೆಯನ್ನು ನೋಡಿದರೆ ತಿಳಿಯುವದು.[೩]

---

(೧) ಶ್ರೀದೇವಿ, ಭೂದೇವಿ ವೆಂಕಟೇಶದೇವರ ಮೂರ್ತಿಯು ಪರಿಶಿಷ್ಟ ೪.

(೨) ಕೌಜಲಗಿ ಬಂಡೆಪ್ಪನವರು : ಪ್ರ. ವೆಂ. ಕೀ. ಭಾಗ ೧ ಪುಟ ೨೨.

(೩) ಹೆಚ್ಚಿನ ವಿವರಕ್ಕೆ ಪರಿಶಿಷ್ಟ ೪ ನೋಡಬಹುದು.

## ೧೮. ಪ್ರಸನ್ನ ವೆಂಕಟದಾಸರ ಗ್ರಂಥಗಳ ರಾಶಿ.

ಎಲ್ಲ ದಾಸರಂತೆ ಪ್ರಸನ್ನ ವೆಂಕಟರೂ ಹರಿನಾಮದ ಮಹಿಮೆಯನ್ನು ಬಣ್ಣಿಸಲು ಸಹಸ್ರಾರು ಬಿಡಿಪದಗಳನ್ನೂ ಅನೇಕ ಗ್ರಂಥಗಳನ್ನೂ ಬರೆದಿದ್ದಾರೆ. ಆದರೆ ಅವರ ಎಲ್ಲ ಗ್ರಂಥಗಳು ದೊರೆತಿಲ್ಲ. ಇವಕ್ಕೆ ಕಾರಣವೆಂದರೆ ಇವರ ವಂಶಕರ ಮನೆಯಲ್ಲಿ ವ್ಯಾಜ್ಯ ನಡೆದು, ಇವರಲ್ಲಿ ಇಬ್ಬಣವಾಗಿ ಪ್ರಕರಣವು ಕಚೇರಿಗೆ ಹೋಗಬೇಕಾಯಿತು. ಆದಕಾರಣ ಬಾಗಲಕೋಟೆಯಲ್ಲಿದ್ದ ಪ್ರಸನ್ನ ವೆಂಕಟರ ಮನೆಗೆ ೨೫-೨೬ ವರುಷಗಳ ವರೆಗೆ ಬೀಗ ಹಾಕಬೇಕಾಯಿತು. ಆ ಮನೆಯಲ್ಲಿಯ ಒಳ ಅಟ್ಟದ ಮೇಲೆ ಪ್ರಸನ್ನ ವೆಂಕಟರು ಬರೆದ ಗ್ರಂಥಗಳನ್ನು ಇಟ್ಟಿದ್ದರು. ಇ. ಸ. ೧೯೧೪ರಲ್ಲಿ ಹೆಚ್ಚಾಗಿ ಮಳೆ ಆದ ಸಂಗತಿಯು ಎಲ್ಲರಿಗೂ ಗೊತ್ತಿದೆ. ಆ ಕಾಲದಲ್ಲಿ ಅಟ್ಟದ ಮೇಲ್ಭಾಗವು ಕುಸಿದು ಬಿದ್ದು, ಅಲ್ಲಿ ಇಟ್ಟಂಥ ಗ್ರಂಥಗಳು ಮತ್ತು ಸಹಸ್ರಾರು ಪದಗಳು ಕೆಟ್ಟು ಹೋದವು. ಮುಂದೆ ಕೆಲವು ಕಾಲದ ಮೇಲೆ ಮನೆಯ ಬೀಗವನ್ನು ತೆಗೆದು ನೋಡಲಾಗಿ ಮೇಲಿನ ಸ್ಥಿತಿಯು ಕಂಡುಬಂದಿತು ಎಂದು ತಿಳಿಯುತ್ತದೆ.೧

ಈಗ ದೊರೆತವುಗಳ ಪಟ್ಟಿಯನ್ನು ಕೆಳಗೆ ಕೊಟ್ಟಿದೆ.

೧) ಪ್ರಸನ್ನ ವೆಂಕಟರ ಭಾಗವತ. ೨) ಸಮಸ್ತನಾಮ ಮಣಿಗಣ ಷಟ್ ಚರಣ ಪದ್ಯಮಾಲಾ. ೩) ನಾರದರು ಕೊರವಂಜಿಯ ವೇಷ ತಾಳ್ದ ಚರಿತ್ರೆ. ೪) ನವವಿಧ ಭಕ್ತಿಯ ಪದಗಳು. ೫) ಶ್ರೀಕೃಷ್ಣಪಾರಿಜಾತ. ೬) ಭ್ರಮರ ಗೀತಾ (ಇದು ಶ್ರೀಪಾದರಾಜಕೃತವೆಂದು ವಾಡಿಕೆಯ ಅಭಿಪ್ರಾಯ—ಪ್ರಕಾಶಕ). ೭) ನಾರಾಯಣಪಂಜರ. ೮) ಸುಮಾರು ಮುನ್ನೂರು ಪದಗಳು.

## ೧೯. ದೊರೆಯದೆ ಇದ್ದ ಪದಗಳು

ಶ್ರೀಪ್ರಸನ್ನ ವೆಂಕಟದಾಸರಿಗೆ ಮೂವರು ಮರಿಮಕ್ಕಳು.೨ ಅಣ್ಣಯ್ಯಾ

---

೧. ವೇದಶಾಸ್ತ್ರ ಸಂಪನ್ನ ಮಳಿಗಿ ವೆಂಕಣ್ಣಾಚಾರ್ಯರು 'ಕೆಟ್ಟುಹೋದ ಗ್ರಂಥರಾಶಿಯನ್ನು ನಾನು ಘಟಪ್ರಭೆಯಲ್ಲಿ ಒಗೆದೆನು' ಎಂದು ಈ ಲೇಖಕನ ಮುಂದೆ ಹೇಳಿದರು. ತಾರೀಖು ೨೯—೪—೪೭.

೨. ಪ್ರಸನ್ನ ವೆಂಕಟರ ವಂಶಾವಳಿ ಪರಿಶಿಷ್ಟ ೧೫

ಚಾರ್ಯ, ಬಾಳಾಚಾರ್ಯ ಮತ್ತು ರಾಮಾಚಾರ್ಯ. ಇವರು ತಮ್ಮ ತಮ್ಮ ಪಾಲು ಮಾಡಿಕೊಳ್ಳುವ ಕಾಲಕ್ಕೆ ಕೆಲವು ಗ್ರಂಥಗಳು ಬಾಳಾಚಾರ್ಯರ ಪಾಲಿಗೆ ಬಂದವು. ಈ ಗ್ರಂಥಗಳ ಪಟ್ಟಿ[೧] ದೊರೆತಿದ್ದು ಅವು ಕೆಳಗಿನಂತೆ ಇವೆ—

೧) ಪ್ರಥಮ ಸ್ಕಂದ ಭಾಗವತ ಟಿಪ್ಪಣಿ. ೨) ಭಾಗವತ ಚತುರ್ಥ ಸ್ಕಂದ. ೩) ಷಷ್ಟ ಸ್ಕಂದ. ೪) ಮಹಾಭಾರತ ಸಾರ ನಿರ್ಣಯ ಟೀಕಾ. ೫) ಬ್ರಹ್ಮಸೂತ್ರ ಭಾಷ್ಯ. ೬) ಅಥರ್ವಣ ಟೀಕಾ. ೭) ತರ್ಕ ಭಾಷಾ ತರ್ಕ ಸಂಗ್ರಹ ದೀಪಿಕಾ. ೮) ೨೦೦೦ ಗೀತಾಪ್ರತಿ.

ಪ್ರಸನ್ನ ವೆಂಕಟರು ದಶಮಸ್ಕಂದ ಭಾಗವತ ಪೂರ್ವಾರ್ಧ ರಚಿಸಿದ್ದು ದೊರೆತಿದೆ. ಮೇಲಿನ ಪಟ್ಟಿಯಲ್ಲಿ ಪ್ರಥಮ ಸ್ಕಂದ, ಚತುರ್ಥ ಸ್ಕಂದ, ಇವುಗಳ ಹೆಸರಿದೆ. ದಶಮಸ್ಕಂದ ಭಾಗವತವನ್ನು ಕನ್ನಡದಲ್ಲಿ ಬರೆದಂತೆ ಇವುಗಳನ್ನು ಕೂಡ ಕನ್ನಡದಲ್ಲಿ ಬರೆದಿರಬಹುದೆಂದು ಊಹೆ ಮಾಡಿದರೆ ತಪ್ಪಾಗಲಾರದು. ಇನ್ನು ೨೦೦೦ ಗೀತಾಪ್ರತಿಗಳನ್ನು ದಾಸರು ದಾನ ಕೊಡುವ ದಕ್ಕೋಸ್ಕರ ಬರೆದಿರಬಹುದೆಂದು ಕಾಣುತ್ತದೆ.

## ೨೦. ಪ್ರಸನ್ನ ವೆಂಕಟರ ಸ್ವಭಾವ.

ಇವರು ಸದ್ವಂಶದಲ್ಲಿ ಜನ್ಮ ತಾಳಿದರು. ಆನುವಂಶಿಕ ಗುಣವೇ ಇವರಲ್ಲಿ ಮೂಡಿತ್ತು. ದಾಸರು ಸಾತ್ವಿಕ ವೃತ್ತಿಯವರಿದ್ದು ಸದಾಚಾರ ಸಂಪನ್ನರೂ ಆಗಿದ್ದರು. ನಡೆ ನುಡಿ ಒಂದಾಗಿದ್ದು, ಶ್ರೀಮಂತರಿಂದ ಸಾಮಾನ್ಯರ ವರೆಗೆ ಎಲ್ಲರಿಗೂ ಬೇಕಾಗಿದ್ದರು. ಹರಿಯೇ ಗತಿಯೆಂದು ಆತನ ಧ್ಯಾನದಲ್ಲಿ ಮಗ್ನರಾದವರಾಗಿದ್ದರು. ಆನಂದವೃತ್ತಿಯೇ ಅವರ ಹೆಗ್ಗುರುತಾಗಿತ್ತು.

## ೨೧. ಪ್ರಸನ್ನವೆಂಕಟರ ಕೊನೆಯ ಕಾಲ

ದಾಸರು ಅವತರಿಸಿದ ಮಿತಿಯು ಸರಿಯಾಗಿ ತಿಳಿಯದಿದ್ದರೂ ಅವರಿಗೆ ದೊರೆತ ದಾನಪತ್ರ, ವರ್ಷಾಶನಗಳ ಮೇಲಿಂದ ಇವರು ಸುಮಾರು ೧೬೮೦ನೇ

---

೧. ಬಾಳಾಚಾರ್ಯರ ಪಾಲಿಗೆ ಬಂದ ಗ್ರಂಥಗಳ ಪಟ್ಟಿ ಪರಿಶಿಷ್ಟ ೧೪

ಇಸ್ವಿಯಲ್ಲಿ ಜನಿಸಿರಬಹುದೆಂದು ಊಹಿಸಲಾಗಿದೆ. ಅವರು ತಮ್ಮ ಆಯುಷ್ಯದ ಮೊದಲಿನಭಾಗವನ್ನು ಮನೆ ಮತ್ತು ಗಿರಿಯಲ್ಲಿ ಕಳೆದು ಉಳಿದ ಆಯುಷ್ಯವನ್ನು ಶ್ರೀಹರಿಯ ಆರಾಧನೆಯಲ್ಲಿ ಕಳೆದರು. ಅನೇಕ ಗ್ರಂಥಗಳನ್ನೂ ಸಹಸ್ರಾರು ಪದಗಳನ್ನೂ ಕನ್ನಡದಲ್ಲಿ ಬರೆದು, ಆದರ ಮುಖಾಂತರ ಶ್ರೀಹರಿ ವಾಯುಗಳ ಸೇವೆಯನ್ನು ಮಾಡಿ ತಮ್ಮ ವಯಸ್ಸಿನ ಎಪ್ಪತ್ತೆರಡನೆಯ ವರುಷದಲ್ಲಿ ಅಂದರೆ ಶಕೆ ೧೬೭೪ನೆಯ ಆಂಗಿರಸ ಸಂವತ್ಸರದ ಭಾದ್ರಪದ ಶುದ್ಧ ಏಕಾದಶಿ ಮಧ್ಯ ರಾತ್ರಿಯ ಸಮಯದಲ್ಲಿ ವೈಕುಂಠ ಯಾತ್ರೆಯನ್ನು ಕೈಕೊಂಡು ಸಾಮೀಪ್ಯ ಮುಕ್ತಿಯನ್ನು ಪಡೆದರು.[೧] ಮುಕ್ತಿಯ ಬಗ್ಗೆ ದಾಸರು ಆಡಿವ ಮಾತೆಂದರೆ, "ಶ್ರೀ ಮಧ್ವರಾಯರ ಶಿಕ್ಷಾನೇಮದಾ ಚರಣಾಧ್ಯಕ್ಷ । ಸಾಮೀಪ್ಯ ಮುಕ್ತಿಯ ನೀಯೋ ನನ್ನ ಪರಸನ್ನ ವೆಂಕಟಯ್ಯಾ ॥"[೨]

ಈ ಮಹಾತ್ಮರು ತಮಗೆ ಸಲ್ಲದ ಮುಕ್ತಿಯನ್ನು ಕೊಡು ಎಂದು ತಮ್ಮ ಸ್ವರೂಪ ಯೋಗ್ಯತೆಯನ್ನು ಅತಿಕ್ರಮಿಸಿ ಸರ್ವಥಾ ಬಯಸುವವರಲ್ಲ. ಏಕೆಂದರೆ ಅಯೋಗ್ಯ ಅಪೇಕ್ಷೆಯು ಅನರ್ಥಕ್ಕೆ ಕಾರಣವೆಂದು ದಾಸರು ಚನ್ನಾಗಿ ಬಲ್ಲವರು. ಅಂತೆಯೆ ಇವರು ಮೋಕ್ಷಯೋಗ್ಯ ಜೀವರಲ್ಲೂ ಹೆಚ್ಚಿನ ವರ್ಗದ ದೇವತಾ ಪುರುಷರೆಂಬುದು ಸ್ಪಷ್ಟವಾಗುವದು. ಈ ಮಹಾತ್ಮರ ಆರಾಧನೆಯನ್ನು ಪ್ರತಿವರ್ಷ ಭಾದ್ರಪದ ಶುದ್ಧ ದ್ವಾದಶಿಯ ಮಹಾದಿನದಲ್ಲಿ ಈಗಲೂ ಮಾಡುವರು.

ಒಂದು ಮಹದಾಶ್ಚರ್ಯದ ಸಂಗತಿಯೆಂದರೆ, ಈ ಮಹಾತ್ಮರ ಪ್ರಾಣೋತ್ಕ್ರಮಣದ ಕಿಂಚಿತ್ ಪೂರ್ವದಲ್ಲಿ ಇವರ ಬಿಂಬರೂಪಿಯಾದ ಶ್ರೀಹರಿಯು ಇವರ ಉಪಾಸ್ಯ ಮೂರ್ತಿಯಾದ ಬಾಲಕೃಷ್ಣನ ರೂಪದಿಂದ ಪ್ರತ್ಯಕ್ಷನಾಗಿ

---

೧. ಪ್ರಸನ್ನ ವೆಂಕಟರ ಭಾಗವತದ ಪ್ರಸ್ತಾವನೆ ಪುಟ ೩. ಇದರಲ್ಲಿ " ಶಕೆ ೧೬೭೪ ನೆಯ ಆಂಗಿರಸ ಸಂವತ್ಸರ ಭಾದ್ರಪದ ಶುದ್ಧ ೧೨ ನೇ ದಿವಸ ವೈಕುಂಠವಾಸಿಯಾದರೆಂದು " ಹೇಳಿದೆ. ಆದರೆ ದಾಸರ ಆನುವಂಶಿಕರಿಂದ ಮತ್ತು ಶ್ರೀ. ನಾರಾಯಣರಾವ ಕಲಮದಾನಿಯವರಲ್ಲಿದ್ದ ಆಧಾರಗಳ ಮೇಲಿಂದ ಏಕಾದಶಿ ತಿಥಿಯು ಸರಿಯೆಂದು ಕಾಣುತ್ತದೆ.

೨. ಶ್ರೀ ಕೌಜಲಗಿ ಬಂಡೇರಾಯರು: ಪ್ರ. ವೆಂ. ಕೀ. ಪುಟ ೪೨ ಪದ ೪೧ ನುಡಿ ೩.

ಮುಂದೆ ನಿಂತು ಕಾಣಿಸಿಕೊಂಡನೆಂದು ಅವರಿಂದೇ ರಚಿತವಾದ ಅವರ ಕೊನೆಯ ಕವನದಿಂದ ಸಿದ್ಧವಾಗುತ್ತದೆ. ಆ ಪದವನ್ನು ಕೆಳಗೆ ಕೊಟ್ಟಿದೆ—

ದಾರೋ ನೀ ಚಿನ್ನಾ ದಾರೊ । ಗಾರು ರಾತ್ರಿಯೊಳೆಮ್ಮ
ಗಾರಕ್ಕೆ ಬಂದಿ ॥ಪಲ್ಲ॥

ಇಕ್ಕಿದ ಕದಗಳಕ್ಯಾವೊ । ನಿಪ್ರೆ । ಉಕ್ಕೇರಿ ಕಣ್ಣು
ಮುಚ್ಚ್ಯಾವೊ । ನಮ್ಮ ।
ತಕ್ಕೈಸುವಂತೆ ನೀ ಕಳ್ಳ । ಚಿಕ್ಕಮಕ್ಕಳಾಟವಿದಲ್ಲೊ ಚಲುವಾ ॥೧॥

ಆಗ ಗೋಪಾಲನಂತಿದ್ದಿ । ನೀ । ಬ್ಯಾಗ ಚಟುಲ ರೂಪನಾದಿ ।
ಈಗೆಮ್ಮನಲ್ಲಾರಂತೈದಿ ಕೋಟಿ । ಪೂಗಣರ । ಹೋಲುತ್ತೈದೆ
ನೀ ಹೌದೆ ॥೨॥

ಸಪ್ಪಳಿಲ್ಲದೆ ಕೂಡು ಕಾಣೊ । ಕೇಳಿ । ಬಪ್ಪರಿನ್ನಾರಾರು ಕಾಣೋ ।
ಕಪ್ಪವನಿತ್ತೆನ್ನ ಪ್ರಾಣ ಕಾಯೋ। ಶ್ರೀಪ್ರಸನ್ವೆಂಕಟ ಪರಮಪ್ರವೀಣಾ ॥ ೩ ॥

ಈ ಮಹಾತ್ಮರಿಗೆ ಹೀಗೆ ಸಂಭವಿಸಿದ ಸಂಗತಿಯು ಸುಳ್ಳಿರದೆ ಕೇವಲ ಸತ್ಯವಾದುದು. ಇವರಿಗೆ ಅಂತ್ಯಕಾಲದಲ್ಲಿ ದರ್ಶನ ಕೊಟ್ಟಂತೆ ಶ್ರೀಹರಿಯು ಪುರಂದರದಾಸರಿಗೆ ವೈರಾಗ್ಯವನ್ನುಂಟು ಮಾಡಲು, ವೃದ್ಧ ಬ್ರಾಹ್ಮಣನ ವೇಷದಲ್ಲಿ ದರ್ಶನ ಕೊಟ್ಟ ಸಂಗತಿಯು ಎಲ್ಲರಿಗೂ ತಿಳಿದ ವಿಷಯ. ಶ್ರೀಹರಿಯು ತನ್ನ ಭಕ್ತರಿಗೆ ಕಾಲಕಾಲಕ್ಕೆ ದರ್ಶನ ಕೊಟ್ಟು, ಅವರನ್ನು ಈ ಸಂಸಾರದಿಂದ ಮುಕ್ತ ಮಾಡುವನು ಎಂಬ ಮಾತಿಗೆ ಮೇಲಿನ ಎರಡು ಉದಾಹರಣೆಗಳು ಸಾಕು.

ಶ್ರೀಪ್ರಸನ್ನ ವೆಂಕಟದಾಸರ ಅಂತ್ಯ ಕಾಲವು ಬಾಗಲಕೋಟೆಯಲ್ಲಿ ಆಗಿರದೆ ಅಲ್ಲಿಂದ ಕೇವಲ ಇಪ್ಪತ್ತೆಂಟು ಮೈಲು ದೂರದಲ್ಲಿದ್ದ ದಕ್ಷಿಣ ಕಾಶಿಯೆನಿಸಿಕೊಂಡಿರುವ, ಪೂರ್ವದಲ್ಲಿ ಅಂದರೆ ಏಳನೆಯ ಶತಮಾನದಲ್ಲಿ ಕನ್ನಡಿಗರಾದ ಚಾಲುಕ್ಯ ಅರಸರ ರಾಜಧಾನಿಯಾದ, ಪೇಶ್ವೆಯರ ಕಾಲದಲ್ಲಿ ದಕ್ಷಿಣದ ಕೋಟೆಯಾದ ಮತ್ತು ಬ್ರಿಟಿಶರ ಆಳಿಕೆಯಲ್ಲಿ ವಿಜಯಪುರ ಜಿಲ್ಹೆಯ ತಾಲೂಕ ಸ್ಥಾನವಾದ ಬದಾಮಿಯಲ್ಲಿ ಆಯಿತೆಂಬುದು ಪ್ರಸಿದ್ಧವಾದ ಸಂಗತಿಯುಂಟು.

ಬದಾಮಿ ಊರ ಪೂರ್ವಕ್ಕೆ ಗುಡ್ಡದ ಅಡಿಭಾಗದಲ್ಲಿ ಒಂದು ಹೊಂಡವಿದ್ದು, ಅದರ ಉತ್ತರ ದಡದ ಮೇಲೆ ಇರುವ ಕಟ್ಟೆಗೆ " ಶ್ರೀಪ್ರಸನ್ನ ವೆಂಕಟರ ಕಟ್ಟೆ " ಎಂದು ಹೇಳುತ್ತಾರೆ. ಈ ಕಟ್ಟೆಯನ್ನು ಮೊದಲು ದಾಸವರ್ಯರ ಮರಿ ಮಕ್ಕಳಾದ ಅಣ್ಣಯ್ಯಾಚಾರ್ಯರು ಕಟ್ಟಿಸಿದರೆಂದು ಐತಿಹ್ಯವಿದೆ.[೧] ಇಂಥ ಈ ಕಟ್ಟೆಯ ಕೆಳಗೆ ಶ್ರೀಪ್ರಸನ್ನ ವೆಂಕಟದಾಸರ ಪರಮ ಪವಿತ್ರವಾದ ದೇಹವು ಅಗ್ನ್ಯಂತರ್ಗತ ಶ್ರೀಪರಶುರಾಮ ದೇವರಿಗೆ ಅರ್ಪಿಸಲ್ಪಟ್ಟಿತು. ಮತ್ತು ತತ್ ಸೂಚಕವಾಗಿ ಈ ಕಟ್ಟೆಯು ನಿರ್ಮಾಣವಾಗಿರಬಹುದೆಂದು ಹೇಳುತ್ತಾರೆ.

---

(೧) ಈ ಕಟ್ಟೆಯ ಬಗ್ಗೆ ಕೆಳಗಿನಂತೆ ಈ ಲೇಖಕನಿಗೆ ತಿಳಿದುಬಂದಿದೆ. ಈ ಕಟ್ಟೆಯು ಪೂರ್ವ ಪಶ್ಚಿಮ ೧೯ ಫೂಟು ೯ ಇಂಚು ಇದ್ದು, ದಕ್ಷಿಣೋತ್ತರ ೧೭ ಫೂಟು ಮತ್ತು ಎತ್ತರ ೫ ಫೂಟು ಇದೆ. ಉತ್ತರಾಭಿಮುಖವಾದ ಕಟ್ಟೆಯ ಗೋಡೆಯ ಮೇಲೆ ॥ ಓಂ ॥ ಪ್ರಸನ್ನ ವೆಂಕಟದಾಸ ರಾಜೋ ವಿಜಯತೇ ॥ ಓಂ ॥ ಎಂದು ದೇವನಾಗರಿ ಲಿಪಿಯಲ್ಲಿ ಕಟೆದಿದ್ದಾರೆ. ಇದನ್ನು ಜೀರ್ಣೋದ್ಧಾರ ಕಾಲಕ್ಕೆ ಕೆತ್ತಿದೆ ಯೆಂದು ಶ್ರೀ. ಗೋವಿಂದಾಚಾರ್ಯ ಕಟ್ಟಿ ಇವರು ಹೇಳುತ್ತಾರೆ. ಗೋಡೆಯ ಬಲಭಾಗದ ಮೂಲೆಯಲ್ಲಿ ಮೇಲಿನಿಂದ ೧೧ ಇಂಚು ಕೆಳಗೆ ' ಕುಳಿತ ಗರುಡ 'ನ ಆಕೃತಿಯನ್ನು ಕೆತ್ತಿದ್ದಾರೆ. ಪೂರ್ವಾಭಿಮುಖವಾಗಿರುವ ಕಟ್ಟೆಯ ಮೇಲೆ ಎರಡು ಗಣಪತಿಯ ಮೂರ್ತಿಗಳು ಮತ್ತು ಒಂದು ಶೇಷನ ಮೂರ್ತಿ ಇವೆ. ಕಟ್ಟೆಯ ಮೇಲೆ ಮಧ್ಯದಲ್ಲಿ ಒಂದು ಅಶ್ವತ್ಥ ಮರವಿದ್ದು, ಅದರ ಸುತ್ತಲೂ ಮೂರು ಫೂಟು ಎತ್ತರದ ಗೋಡೆಯಿದೆ. ಮೊದಲಿನ ಅಶ್ವತ್ಥ ವೃಕ್ಷವು ಒಣಗಿ ದ್ದರಿಂದ ಮತ್ತು ಕಟ್ಟೆಯು ಜೀರ್ಣವಾದದ್ದರಿಂದ ೧೯೧೧ನೇ ಇಸ್ವಿಯಲ್ಲಿ ಶ್ರೀ. ಗೋವಿಂದಾಚಾರ್ಯ ಕಟ್ಟಿ ಮತ್ತು ಶ್ರೀ. ಮಧ್ವರಾವ ಮುರನಾಳ ( ಈಗ ಮುರನಾಳರು ತೀರಿಕೊಂಡಿದ್ದಾರೆ. ) ಇವರು ಕಟ್ಟೆಯ ಜೀರ್ಣೋದ್ಧಾರ ಮಾಡ್ಸಿ ಸಿದರು. ಮತ್ತೆ ಕಟ್ಟೆಯ ಸುತ್ತಲೂ ಗೋಡೆಯನ್ನು ಕಟ್ಟಿಸಿದರು. ಕಟೆ ಯನ್ನು ಕಟ್ಟಿಸಲು ೭೫ ರೂಪಾಯಿಗಳು ಹಾಗೂ ಗೋಡೆಯನ್ನು ಕಟ್ಟಿಸಲು ೭ ರೂಪಾಯಿಗಳು ವೆಚ್ಚವಾಗಿವೆಯೆಂದು ಶ್ರೀ. ಗೋವಿಂದಾಚಾರ್ಯ ಕಟ್ಟಿ ಇವರು ಹೇಳುತ್ತಾರೆ. ಈಗ ಸುತ್ತಲಿನ ಗೋಡೆಯಿಲ್ಲ. ಇಲ್ಲಿಯ ಅಶ್ವತ್ಥ ಮರ ವನ್ನು ಶ್ರೀ. ಕೃಷ್ಣಭಟ್ಟ ರಾಮಾಚಾರ್ಯರು ತಮ್ಮ ತುಳಸಿಯ ಕಟ್ಟೆಯಿಂದ ತಂದು ಹಚ್ಚಿದರು. ಈ ಅಶ್ವತ್ಥದ ಮೌಂಜೀ ಬಂಧನವನ್ನು ಇ. ಸ. ೧೯೨೪ ರಲ್ಲಿ ಮಾಡಿದೆವೆಂದು ಶ್ರೀ. ಗೌಡರ ಶೀನಪ್ಪನವರು ಹೇಳುತ್ತಾರೆ. ಇದರಲ್ಲಿಯ ಬೇವಿನ ಮರವು ಈಗ ಇಲ್ಲ. ಪರಿಶಿಷ್ಟ ".

*

## ಭಾಗ ೫.

# ದಾಸರ ಗ್ರಂಥವಿಮರ್ಶೆ

### (ಅ) ಸ್ವೀಕೃತ ಮತ್ತು ಸ್ವತಂತ್ರ ವಿಷಯಗಳು

ಕನ್ನಡ ಸಾಹಿತ್ಯವು ಬಹುಭಾಗದಲ್ಲಿ ಧರ್ಮಪ್ರಸಾರದ ಉತ್ತಮ ಸಾಧನವಾಗಿದೆ. ಬರಬರುತ್ತ ಅದು ಪ್ರೌಢ ಮಾರ್ಗದಿಂದ ಸುಲಭದೆಸೆಗೆ ತಿರುಗಿರುತ್ತದೆ. ಕಾವ್ಯ ಮತ್ತು ಧರ್ಮವನ್ನು ಮೇಳಗೂಡಿಸುವ ಪ್ರಯತ್ನವನ್ನು ಜೈನ, ವೀರಶೈವ, ಬ್ರಾಹ್ಮಣ ಗ್ರಂಥಕಾರರು ಮಾಡಿದ್ದಾರೆ. ವಚನಗಳು, ಕೀರ್ತನೆಗಳು, ಭಕ್ತಿಯ ವಾಙ್ಮಯ, ಇವುಗಳಲ್ಲಿ ಸೇಶೀ ಪದ್ಧತಿಯಲ್ಲಿ ಆ ಮೇಳ ಸಾಧಿಸಿದೆ. ಇನ್ನು ಶ್ರೀಪ್ರಸನ್ನ ವೆಂಕಟದಾಸರ ಕೃತಿಗಳಲ್ಲಿ ಎಷ್ಟರಮಟ್ಟಿಗೆ ಅದು ಸಾಧಿಸಿದೆ, ಅವುಗಳ ಸಾಹಿತ್ಯದ ಗುಣವೇನು ? ಎಂಬುದನ್ನು ಈಗ ಪರೀಕ್ಷಿಸಿ ತಿಳಿಯೋಣ.

ಕೀರ್ತನೆಗಳನ್ನು ಪ್ರಾಮುಖ್ಯವಾಗಿ ಮೊದಲು ಬೆಳಕಿಗೆ ತಂದವರೆಂದರೆ ಶ್ರೀವ್ಯಾಸರಾಯರು. ಇವರು ಪೂಜೆಯ ಕಾಲಕ್ಕೆ ಇವುಗಳನ್ನು ಪಠಿಸುವ ಹೊಸ ಸಂಪ್ರದಾಯವನ್ನು ಆರಂಭಿಸಿದರು. ಅಲ್ಲಿಯ ವರೆಗೆ ಕನ್ನಡದ ಕೀರ್ತನೆಗಳಿಗೆ ಸಂಪ್ರದಾಯನಿಷ್ಠರ ಪೂಜೆಯಲ್ಲಿ ಸ್ಥಾನವಿರಲಿಲ್ಲ. ಈ ರೀತಿ ಸ್ವತಃ ಸಂಸ್ಕೃತ ವಿದ್ವಾಂಸರೂ ಜ್ಞಾನಿಗಳೂ ಆದ ಶ್ರೀವ್ಯಾಸರಾಯರು ಕನ್ನಡ ಕೀರ್ತನೆಗಳಿಗೆ ಮನ್ನಣೆ ಕೊಡದೆ ಇದ್ದರೆ, ದಾಸಕೂಟ, ಹರಿದಾಸರು, ಕೀರ್ತನೆಗಳು ಎಂಬ ಪದಗಳು ಕೇಳಬರುವದೇ ದುಸ್ತರವಾಗುತ್ತಿತ್ತು.

ಶ್ರೀವ್ಯಾಸರಾಯರು ಮೊದಲು ಹರಿನಾಮಸ್ಮರಣೆಯ ಮೇಲೆ ಅತ್ಯುತ್ತಮ ಪದಗಳನ್ನು ಬರೆದರು. ಏಕೆಂದರೆ, ವೈಷ್ಣವಮತದ ಮೇರೆಗೆ ಶ್ರೀಹರಿಯೇ ಸರ್ವೋತ್ತಮನು. ಮುಂದೆ ತಾರತಮ್ಯಾನುಸಾರವಾಗಿ ಲಕ್ಷ್ಮೀ, ಬ್ರಹ್ಮ,

ವಾಯು ಮುಂತಾದ ದೇವತೆಗಳನ್ನು ಸ್ತುತಿಸಿದರು.[೧] ತರುವಾಯ ತಾರತಮ್ಯ ದಿಂದ ಶ್ರೀಹನುಮ, ಭೀಮ, ಮಧ್ವರ ವರ್ಣನೆಯು ಕಂಡುಬರುವದು. ಏಕೆಂದರೆ, ಇವರು ವಾಯುದೇವರ ಅವತಾರವೆಂದು ವೈಷ್ಣವರ ಬಲವಾದ ನಂಬಿಕೆ. ಆಮೇಲೆ ಉಳಿದ ಕೀರ್ತನೆಗಳಲ್ಲಿ ಮಧುರ, ವಾತ್ಸಲ್ಯ ಭಾವ ಗಳುಳ್ಳ ಕೃಷ್ಣಲೀಲೆಯ ವರ್ಣನೆಗಳೂ, ಭಕ್ತಿ ವೈರಾಗ್ಯದ ಪದಗಳೂ, ಸಮಾಜ ವಿಮರ್ಶೆಯ ಪದಗಳೂ ಮುಂತಾದವುಗಳನ್ನು ರಚಿಸಿದರು. ಈ ಪ್ರಕಾರ ಶ್ರೀವ್ಯಾಸರಾಯರು ಬರೆದ ಪದ್ಧತಿಗಳನ್ನೇ ಅವರ ಸಮಕಾಲೀನರೂ, ಅವರ ಶಿಷ್ಯರೂ, ಆದ ಪುರಂದರದಾಸರೂ, ಕನಕದಾಸರೂ ತಮ್ಮ ಕೃತಿಗಳಲ್ಲಿ ತಂದರು. ಇವರಿಂದ ಬೆಳೆದು ಬಂದ ಪರಂಪರೆಯನ್ನೇ ಇವರ ಮುಂದಿನವರಾದ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ತಮ್ಮ ಕೃತಿ ಗಳಲ್ಲಿ ಮುಂದುವರಿಸಿದರು. ಇದರಿಂದ ಒಂದು ವಿಶಿಷ್ಟವಾದ ಸಂಪ್ರದಾಯವು ದಾಸಕೂಟದಲ್ಲಿ ಬೆಳೆಯಿತು. ಈ ಸಂಪ್ರದಾಯದಿಂದ ಶ್ರೀಪ್ರಸನ್ನವೆಂಕಟ ದಾಸರು ಸ್ವೀಕರಿಸಿದ್ದೆಷ್ಟು? ಅವರ ಸ್ವತಂತ್ರ ವಿಷಯವೆಷ್ಟು? ಎಂಬುದನ್ನು ನೋಡುವಾ.

ಸಾಮಾನ್ಯವಾಗಿ ಹೇಳುವದಾದರೆ ವಿಷಯದ ಸಂಬಂಧದಲ್ಲಿ ಈ ದಾಸರು ಸ್ವೀಕಾರ ಮಾಡಿದ್ದೇ ಹೆಚ್ಚೆನ್ನಲು ಅಡ್ಡಿಯಿಲ್ಲ. ಸಂಪ್ರದಾಯದ ನಿಷ್ಠೆ ಯಿಂದಲೂ, ಹೆಮ್ಮೆಯಿಂದಲೂ ಅವರು ದಾಸಕೂಟದ ಹಿರಿಯರು ಹಾಕಿ ಕೊಟ್ಟ ದಾರಿಯಲ್ಲಿಯೇ ಹೆಜ್ಜೆ ಇಟ್ಟಿದ್ದಾರೆ. ಆದರೆ ಅದು ಅಂಧಾನುಕರಣದ ರೀತಿಯಲ್ಲಿಯಲ್ಲ. ನೈಜತೆಯಿಂದ ಕೂಡಿದ ಅನುಕರಣದ ಬಗೆಯಲ್ಲಿ ಎಂಬು ದನ್ನು ನೆನೆಯಬೇಕು.

---

(೧) ವೇ. ಶ್ರೀ. ಬಾದರಾಯಣಾಚಾರ್ಯ ಕಟ್ಟಿ: ತಾರತಮ್ಯ ಸಂಗ್ರಹ ಪುಟ ೪೫ ಇದ ರಲ್ಲಿ ತಾರತಮ್ಯವು ಕೆಳಗಿನಂತಿದೆ.

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ।
ಸಾವಿತ್ರೀಂ ಭಾರತೀಂ ಚ ತಾಮಪಿಗರುಡಮನಂತಂ ಭಜೇ ರುದ್ರದೇವಂ ।
ದೇವೀಂ ವಂದೇ ಸುಪರ್ಣೀಂ ಮಹಿಪತಿದಯಿತಾಂ ವಾರುಣೀಮುಖ್ಯಮಾಂ ತಾ- ।
ಮಿಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾಂ ಸದ್ಗುರೂನ್ ಮದ್ಗುರೂಂಶ್ಚ ॥

೧. **ನಾಮಸ್ಮರಣೆ**:—ಹರಿದಾಸರಿಗೆ ಹರಿನಾಮಸ್ಮರಣೆಯು ಮುಖ್ಯ. ಆತನ ನಾಮಸ್ಮರಣೆಯಿಂದಲೇ ಇಹದಲ್ಲಿ ಸೌಖ್ಯ, ಪರದಲ್ಲಿ ಮುಕ್ತಿ ದೊರೆಯುವದೆಂದು ಅವರ ಬಲವಾದ ನಂಬಿಗೆ. ಅಂತೆಯೆ ಎಲ್ಲ ದಾಸರ ಪದಗಳಲ್ಲಿ ಹರಿನಾಸ್ಮರಣೆಯು ಮಹತ್ವದ ಅಂಶವಾಗಿ ಕಂಡುಬರುವದು. ದಾಸರು ಹರಿನಾಮಸ್ಮರಣೆ ಮಾಡಬೇಕೆಂಬ ಭಾವದಲ್ಲಿ ಸಂಪ್ರದಾಯಶರಣರಾದರೂ ದೇವರ ಬೇರೆ ಬೇರೆ ನಾಮಗಳನ್ನು ಉಚ್ಚರಿಸುವದರಲ್ಲಿ ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಪುರಂದರದಾಸರು "ನಾರಾಯಣ ಎನ್ನಿರೋ, ಶ್ರೀನರಹರಿ ಪಾರಾಯಣ ಮಾಡಿರೋ"[೧] ಎಂದರೆ, ಕನಕದಾಸರು "ಅಚ್ಯುತನ ನಾಮವನು ನೆನೆದು ಸುಖಿಯಾಗು"[೨] ಎಂದಿದ್ದಾರೆ. ಪ್ರಸನ್ನ ವೆಂಕಟರು "ಮರೆಯದಿರು ಮನವೆ ಮಾಧವನಾ"[೩] ಮತ್ತು "ರಾಮನೆನ್ನಿ ರಾಮನೆನ್ನಿ । ವ್ಯೋಮಕೇಶಗೆ ದಿವ್ಯ ನಾಮಾಮೃತವಿತ್ತ ರಾಮನೆನ್ನಿ ರಾಮನೆನ್ನಿ ॥"[೪] ಎಂದಿದ್ದಾರೆ.

೨. **ಮಾಧ್ವಪರಂಪರೆ**:— ದಾಸರೆಲ್ಲ ಮಾಧ್ವರು. ಶ್ರೀಮಧ್ವಾಚಾರ್ಯರ ಅನುಯಾಯಿಗಳು. ಶ್ರೀಮಧ್ವಾಚಾರ್ಯರು ವಾಯುದೇವರ ಅವತಾರವೆಂದು ಅವರ ಮತ. ಆದಕಾರಣವೆ, ಶ್ರೀಹನುಮ, ಭೀಮ, ಮಧ್ವರನ್ನು ಅನುಕ್ರಮದಿಂದ ದಾಸರು ಸ್ತುತಿಸಿದ್ದು ಕಂಡುಬರುವದು. ಶ್ರೀ ವ್ಯಾಸರಾಯರಲ್ಲಿ ಈ ಮೂವರ ಸ್ತೋತ್ರವು ಕಾಣುವದು.

"ಜಯ ವಾಯು ಹನುಮಂತ ಜಯ ಭೀಮ ಬಲವಂತ
ಜಯ ಪೂರ್ಣ ಮತಿವಂತ ಜಯ ಸಲಹೊ ಸಂತ"[೫]

ಶ್ರೀಪುರಂದರದಾಸರು ಕೆಳಗಿನಂತೆ ಸ್ತೋತ್ರ ಮಾಡಿದ್ದಾರೆ—

"ಮಧ್ವರಾಯರ ನೆನೆದು ಪರಿಶುದ್ಧರಾಗಿರೊ
ಹೊದ್ದಿ ವೈಷ್ಣವ ಮತವ ಭವಾಬ್ಧಿ ದಾಟಿರೊ"[೬]

---

೧. ಕ. ಹ. ಕೀ. ತ. ಸಂಪುಟ ೧ ಸಂಚಿಕೆ ೪ ಪುಟ ೨೯
೨. ಕ. ಹ. ಕೀ. ತ. ಸಂಪುಟ ೨ ಪುಟ ೧೯.
೩. ಪ್ರಬಂಧ ಪದ ಸಂಖ್ಯೆ ೧೪೨.
೪. ಪ್ರಬಂಧ ಪದ ಸಂಖ್ಯೆ ೫೫.
೫. ಕ. ಹ. ಕೀ. ತ. ಸಂಪುಟ ೩ ವ್ಯಾಸರಾಯರು ಪುಟ ೧೭೭.
೬. ಕ. ಹ. ಕೀ. ತ. ಸಂಪುಟ ೧ ಸಂಚಿಕೆ ೭ ಪುಟ ೩.

ಇನ್ನು ಶ್ರೀಪ್ರಸನ್ನ ವೆಂಕಟದಾಸರಲ್ಲಿ ನೋಡುವ---

"ಹನುಮ ನಮ್ಮ ತಾಯಿ ತಂದೆ | ಭೀಮ ನಮ್ಮ ಬಂಧು ಬಳಗಾ |
ಆನಂದತೀರ್ಥರೆ ನಮ್ಮ ಗತಿ ಗೋತ್ರರು "೧

ಶ್ರೀಪ್ರಸನ್ನ ವೆಂಕಟರು ಮೇಲಿನವರಂತೆ ಕ್ರಮದಿಂದ ಶ್ರೀಹನುಮ, ಭೀಮ, ಮಧ್ವರನ್ನು ವರ್ಣಿಸಿದರೂ ವರ್ಣನೆಯಲ್ಲಿ ತಮ್ಮ ಸ್ವಾತಂತ್ರ್ಯವನ್ನು ತೋರಿಸಿದ್ದಾರೆ. ಶ್ರೀವ್ಯಾಸರಾಯರು ಪ್ರತಿಯೊಂದು ಅವತಾರ ಕಾರ್ಯವನ್ನು ವಿಸ್ತಾರವಾಗಿ ಹೇಳಿದ್ದರೆ, ಪ್ರಸನ್ನ ವೆಂಕಟರು ಅವನ್ನು ಸ್ವಲ್ಪದರಲ್ಲಿಯೇ ಸುಲಭವಾಗಿ ಹೇಳಿದ್ದಾರೆ. "ಮಧ್ವರಾಯರನ್ನು ನೆನೆದು ಸುಖಿಯಾಗು" ಎಂದು ಶ್ರೀಪುರಂದರದಾಸರು ಹೇಳಿದರೆ, ಶ್ರೀವ್ಯಾಸರಾಯರು, ಶ್ರೀಹನುಮ, ಭೀಮ, ಮಧ್ವರಿಗೆ ಜಯವನ್ನು ಕೋರಿದ್ದಾರೆ. ಆದರೆ ಶ್ರೀಪ್ರಸನ್ನ ವೆಂಕಟದಾಸರು, ಮನುಷ್ಯನು ಜಗತ್ತಿನಲ್ಲಿ ಜನ್ಮವೆತ್ತಿ, ಬದುಕಿ, ಬಾಳಿ, ಪರಮ ಗತಿಯನ್ನು ಪಡೆಯಬೇಕಾದರೆ ಶ್ರೀಹನುಮ, ಭೀಮ, ಮಧ್ವರು ಬೇಕು. ಇಲ್ಲವಾದರೆ ಸಾಧ್ಯವಿಲ್ಲ ಎಂದು ಈ ಮೇಲಿನ ಒಂದೇ ಒಂದು ಪಲ್ಲವಿಯಲ್ಲಿ ಹೇಳಿದ್ದಾರೆ. ಈ ಪಲ್ಲವಿಯಲ್ಲಿಯ ಉತ್ಕಟವಾದ ಭಾವನೆಯನ್ನು ಲಕ್ಷಿಸಬೇಕು. ಪ್ರಸನ್ನ ವೆಂಕಟರ ವರ್ಣನೆಯ ವೈವಾಡವನ್ನು ಇಲ್ಲಿ ಕಾಣಬಹುದಾಗಿದೆ.

೩. **ಪಂಚಭೇದ**:— ಈಶ, ಜೀವ ಮತ್ತು ಜಗತ್ತು ಇವುಗಳಲ್ಲಿಯ ಭೇದವನ್ನು ಶ್ರೀಪುರಂದರದಾಸರು ಹೀಗೆ ಹೇಳಿದ್ದಾರೆ—

"ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀಗೋವಿಂದನ |
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ||"
"ಜೀವ ಈಶಗೆ ಭೇದ ಸರ್ವತ್ರ | ಜೀವಜೀವಕೆ ಭೇದವು |
ಜೀವ ಜಡಕೆ ಜಡಜಡಕ್ಕೆ | ಜೀವ ಜಡ ಪರಮಾತ್ಮಗೆ ||"೨

ಆದರೆ ಶ್ರೀಪ್ರಸನ್ನ ವೆಂಕಟದಾಸರು—

"ಪಂಚ ಸಂಸ್ಕಾರ ಭೇದ ಪಂಚಯುಕ್ತರಾಗಿ | ಪ್ರ
ಪಂಚಸೂರಿ ಪ್ರಸನ್ವೆಂಕಟ | ಪಂಚಬಾಣನೈಯ್ಯನವರ ||"೩

---

೧. ಪ್ರಬಂಧಪದ ಸಂಖ್ಯೆ ೯ ಮತ್ತು ಪ್ರಬಂಧಪದ ಸಂಖ್ಯೆ ೬ರಲ್ಲಿ ನೋಡಬಹುದು.
೨. ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ: ಸಂಪುಟ ೧ ಸಂಚಿಕೆ ೭ ಪುಟ ೬೬
೩. ಪ್ರಬಂಧ ಪದ ಸಂಖ್ಯೆ ೯೪ ನುಡಿ ೩

ಎಂದು ಪ್ರಾಸಬದ್ಧವಾಗಿ ಹೇಳಿದ್ದಾರೆ.

೪. **ನಿರ್ಮಲ ಭಕ್ತಿ**:— ದಾಸರ ಕೀರ್ತನೆಗಳೆಂದರೆ ಭಕ್ತಿಯ ಭಾವ ಗೀತೆಗಳು. ಹಿಂದಿನ ದಾಸರಲ್ಲಿ ಹೇಗೋ ಹಾಗೆ ಪ್ರಸನ್ನ ವೆಂಕಟದಾಸರ ಕೃತಿಗಳಲ್ಲಿಯೂ ಭಕ್ತಿಯು ತುಂಬಿತುಳುಕುವದು.

"ಭಜಿಸಿ ಬದುಕೆಲೊ ಮಾನವ
ಅಜಭವೇಂದ್ರಾದಿಗಳು ಪೂಜಿಸುವ ಪಾದವನು ||"೧

ಈ ಪದ್ಯದಲ್ಲಿ ಯಾವ ಪ್ರಕಾರ ಕನಕದಾಸರ ಭಕ್ತಿಯು ಕಂಡುಬರುವುದೋ ಆದೇ ಪ್ರಕಾರ ಪ್ರಸನ್ನ ವೆಂಕಟರಲ್ಲಿ—

"ಕಲ್ಲು ಬೀಳಾಲಿ ಮೋಲ್ಮಗಿಲ್ಲು ಬೀಳಾಲಿ
ಫುಲ್ಲನಾಭ ನಿನ್ನ ಪಾದ ಪಲ್ಲವಾಭಯ ಬಿಡೆ ||"೨

ಹರಿಪಾದ ಸೇವೆಯ ಭಕ್ತಿಯು ಅಪಾರವಾಗಿದೆ. ಆದರೆ " ಕಲ್ಲು ಬೀಳಾಲಿ ಮೋಲ್ಮಗಿಲ್ಲು ಬೀಳಾಲಿ " ಎಂಬುದರಿಂದ ಪ್ರಸನ್ನ ವೆಂಕಟದಾಸರ ಈ ಕೀರ್ತನೆಯಲ್ಲಿ ಅವರ ಭಕ್ತಿಯ ದಾರ್ಢ್ಯವು ಅಧಿಕತರವಾಗಿ ವ್ಯಕ್ತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.

ಸಾಮಾಜಿಕ ಜೀವನವನ್ನು ಯಾವ ದಾಸರೂ ನೇರವಾಗಿ ವರ್ಣಿಸಿಲ್ಲ. ಅದು ಅವರ ಗುರಿಯಲ್ಲ. ಆ ಕಾಲವಲ್ಲಿದ್ದ ಪರಿಸ್ಥಿತಿಯು ಮೂಲಕ ಎಲ್ಲ ದಾಸರಲ್ಲಿಯೂ ಪರ್ಯಾಯವಾಗಿ ಅದು ವರ್ಣಿತವಾಗಿದೆ. ಇವರಲ್ಲಿ ಕನಕದಾಸರು ಮಾತ್ರ ಅದನ್ನು ಹೆಚ್ಚು ವಿಶದವಾಗಿ ವರ್ಣಿಸಿದ್ದಾರೆ. ಆದರಲ್ಲಿ ಹೆಚ್ಚಾಗಿ ರಾಜಕೀಯ ಪರಿಸ್ಥಿತಿಯ ವರ್ಣನೆಯಲ್ಲಿ ಪ್ರಸನ್ನ ವೆಂಕಟದಾಸರು ಮೊದಲಿಗರು. ಮತ್ತು ಅವರೇ ಕೊನೆಯುವರೆಂದೂ ಎದೆತಟ್ಟಿ ಹೇಳಬಹುದು.೩

ಪ್ರಸನ್ನ ವೆಂಕಟರು ಉಳಿದ ಎಷ್ಟೋ ವಿಷಯಗಳ ಮೇಲೆ ಬರೆದಿದ್ದಾರೆ.

---

೧. ಕ.ಪ.ಕೀ.ತ. ಸಂಪುಟ ೨ ಕನಕದಾಸರ ಕೀರ್ತನೆಗಳು ಪುಟ ೨೬

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೩೨

೩. ಇದೇ ಪ್ರಬಂಧವಲ್ಲಿ 'ರಾಜಕೀಯ ಪರಿಸ್ಥಿತಿ' ಭಾಗ ೭ ರಲ್ಲಿ ಇವನ್ನು ವಿಸ್ತಾರವಾಗಿ ಬರೆದಿವೆ.

ಅವುಗಳಲ್ಲಿ "ಭವಾಬ್ಧಿಯಿಂದ ದಾಟಿಸಲು ಹರಿಯ ಪ್ರಾರ್ಥನೆ"[೧] "ದುರ್ಜನರ ನಿಂದೆ"[೨] "ಸಜ್ಜನರ ಸಂಗ"[೩] "ಸುಜೀವರಿಗೆ ಹಿತೋಪದೇಶ"[೪] "ಭಕ್ತನ ಆತ್ಮಕರ್ಮ ಕಥನ"[೫] "ಮನುಷ್ಯ ಜನ್ಮದ ಇತಿಕರ್ತವ್ಯತೆ"[೬] "ದುರಿತರಾಶಿ ಗಳಿಗೆ ಎಚ್ಚರಿಕೆ"[೭] "ಮನಸ್ಸಿಗೆ ಬೋಧೆ"[೮] "ದೇವ ಜೀವರ ಸ್ವಭಾವದ ವಿಧಾನ"[೯] "ರಂಗನ ಕೊಳಲ ವರ್ಣನೆ"[೧೦] "ಮನಕೆ ಎಚ್ಚರಿಕೆ"[೧೧] "ಹರಿ ದಿನದ ಮಹಾತ್ಮ್ಯೆ"[೧೨] "ಶ್ರೀತುಳಸಿಯ ಮಹಾತ್ಮ್ಯೆ[೧೩]" "ಹರಿಯನ್ನು ನಂಬಿದವರಿಗೆ ಮುಕ್ತಿ ನಿಶ್ಚಯ"[೧೪] "ಹೊಲೆಯ ಹೊಲತಿ ಯಾರಿಗನ್ನ ಬೇಕು"[೧೫] ಮತ್ತು ಇಂಥ ಅನೇಕ ವಿಷಯಗಳನ್ನು ಎಲ್ಲ ದಾಸರಂತೆ ಶ್ರೀ ಪ್ರಸನ್ನ ವೆಂಕಟದಾಸರೂ ವಿವೇಚಿಸಿದ್ದಾರೆ. ಆವರೆ "ತುಳಸಿಯ ಮಹಾತ್ಮ್ಯೆ" ಮತ್ತು "ಹರಿದಿನದ ಮಹಾತ್ಮ್ಯೆ" ಇವುಗಳನ್ನು ಸ್ಪಷ್ಟವಾಗಿ ವರ್ಣಿಸಿ, ಇವು ಗಳನ್ನು ಆಚರಿಸಿದರೆ ಆಗುವ ಲಾಭ ಮತ್ತು ಆಚರಿಸದಿದ್ದರೆ ತಟ್ಟುವ ಹಾನಿಯನ್ನು ಪ್ರಸನ್ನ ವೆಂಕಟರು ಒಳ್ಳೇ ಮಾರ್ಮಿಕವಾಗಿ ವಿಶದಪಡಿಸಿ ದ್ದಾರೆ. "ರಂಗನ ಕೊಳಲ ವರ್ಣನೆ"[೧೬] ಯನ್ನಂತೂ ಪ್ರಸನ್ನ ವೆಂಕಟರೇ

---

೧. ಕೌಜಲಗಿ ಬಂಡೇರಾಯರು ಪ್ರ ವೆಂ. ಕೀ. ಪದ ೨೨ ಪುಟ ೨೬
೨. ಪ್ರಬಂಧ ಭಾರ್ಗ ಪದಸಂಖ್ಯೆ ೧೬೪
೩. ಪ್ರಬಂಧ ಭಾರ್ಗ ಪದಸಂಖ್ಯೆ ೯೪
೪. ಕೌಜಲಗಿ ಬಂಡೇರಾಯರು: ಪ್ರ ವೆಂ. ಕೀ. ಪದ ೪೨ ಪುಟ ೫೧,
೫. ಪ್ರಬಂಧ ಭಾಗ ೯ ಪದ ಸಂಖ್ಯೆ ೮೪
೬. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪದ ೫೪ ಪುಟ ೬೦
೭. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪದ ೨೧ ಪುಟ ೨೫
೮. ಕೌಜಲಗಿ ಬಂಡೇರಾಯರು ಪ್ರ ವೆಂ, ಕೀ. ಪದ ೪೭ ಪುಟ ೪೯
೯. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ, ಪದ ೪೬ ಪುಟ ೪೭
೧೦. ಪ್ರಬಂಧ ಪದ ಸಂಖ್ಯೆ ೧೯೨
೧೧. ಕೌಜಲಗಿ ಬಂಡೇರಾಯರು ಪ್ರ. ವೆ. ಕೀ. ಪದ ೬೨ ಪುಟ ೬೯
೧೨. ಪ್ರಬಂಧ ಪದ ಸಂಖ್ಯೆ ೭೯
೧೩. ಪ್ರಬಂಧ ಪದ ಸಂಖ್ಯೆ ೭೪
೧೪. ಕೌಜಲಗಿ ಬಂಡೆಪ್ಪನವರು ಪ್ರ. ವೆಂ. ಕೀ. ಪದ ೫೩ ಪುಟ ೫೯
೧೫. ಕೌಜಲಗಿ ಬಂಡೆಪ್ಪನವರು ಪ್ರ. ವೆಂ. ಕೀ. ಪದ ೭೩ ಪುಟ ೭೯
೧೬. ಪ್ರಬಂಧ ಪದ ಸಂಖ್ಯೆ ೧೯೨

ಮಾಡಬೇಕು.

ಈ ನುಡಿಯನ್ನು ನುಡಿಯಲು ಪ್ರಾರಂಭ ಮಾಡಿದರೆ ಸಾಕು. ಕೊಳಲು ನುಡಿಯುತ್ತಿದೆಯೆಂಬ ಭಾಸವಾಗಿ, ಜಗತ್ತೆಲ್ಲವೂ ತನ್ನ ಕರ್ತವ್ಯವನ್ನು ಮರೆತು ಕೊಳಲಿನ ಇನಿದನಿಯನ್ನು ಕೇಳುತ್ತ ನಿಂತಿದೆ ಎಂದು ಭಾಸವಾಗದೆ ಇರದು.

## (ಬ) ಪ್ರಸನ್ನ ವೆಂಕಟರ ವಿಶೇಷ ಕೃತಿಗಳು.

ಎಲ್ಲ ದಾಸವಾಙ್ಮಯದಲ್ಲಿ ಪದಪದ್ಯಗಳು ಹೆಚ್ಚಾಗಿ ಕಾಣುತ್ತವೆ. ಒಂದು ಪದದಲ್ಲಿ ೩, ೫, ೭ ಹೆಚ್ಚಾಗಿ ೧೧ ನುಡಿಗಳು ಕಂಡುಬರುವವು. ಆದರೆ ಒಂದು ವಿಷಯವನ್ನು ತೆಗೆದುಕೊಂಡು ದೀರ್ಘವಾಗಿ ಚರ್ಚಿಸಿ, ಪದಗಳನ್ನು ಬರೆವದ್ದು ಇತರ ದಾಸರಲ್ಲಿ ವಿಶೇಷವಾಗಿ ಕಂಡುಬರುವದಿಲ್ಲ. ಶ್ರೀ ಕನಕದಾಸರೊಬ್ಬರು "ಮೋಹನ ತರಂಗಿಣಿ" ಯನ್ನು ಬರೆದಿದ್ದಾರೆ. ಉಳಿದ ದಾಸರು ಹೀಗೆ ಬರೆದಿಲ್ಲ. ಆದರೆ ಶ್ರೀಪ್ರಸನ್ನ ವೆಂಕಟದಾಸರು ಮಾತ್ರ ಇಂಥ ಕೃತಿಗಳನ್ನು ನಿರ್ಮಿಸಿದ್ದಾರೆ. ಅವರ ವಿಷಯದಲ್ಲಿ ಇದೊಂದು ಹೆಚ್ಚಿನ ಸಂಗತಿಯೆಂದು ಹೇಳಬಹುದು. ಅವರು ಬರೆದ ಇಂಥ ಕೃತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

**೧. ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ**[೧]:— ಇದು ಭಾಮಿನಿ ಷಟ್‌ಪದಿಯಲ್ಲಿದೆ. ಇದರಲ್ಲಿ ೭೧ ನುಡಿಗಳಿದ್ದು, ೫೩ ನೇ ನುಡಿಯು ದೊರೆತಿಲ್ಲ. ಮೊದಲಿನ ೧೩ ನುಡಿಗಳು ದೇವರ ಸ್ತೋತ್ರದ ಬಗ್ಗೆ ಮೀಸಲಾಗಿವೆ. ಮುಂದೆ ವರ್ಣಮಾಲೆ ಆರಂಭವಾಗುವದು. ೧೪ನೇ ನುಡಿಯಲ್ಲಿ ಅಕಾರದಿಂದ ಔಕಾರದ ವರೆಗೆ ೧೬ ಸ್ವರಗಳಿದ್ದು, ಅನುಸ್ವಾರ, ವಿಸರ್ಗ ಸೇರಿ ೧೮ ಅಕ್ಷರಗಳಿವೆ. ೧೫ ಮತ್ತು ೧೬ ಈ ನುಡಿಗಳಲ್ಲಿ ವರ್ಗೀಯ ವ್ಯಂಜನಗಳು ಮತ್ತು ಉಳಿದ ಅವರ್ಗೀಯ ೧೦ ಅಕ್ಷರಗಳು ಬಂದಿವೆ. ಮುಂದೆ ೧೭ನೆಯ ನುಡಿಯಿಂದ ಆರಂಭ ಮಾಡಿ ೪೭ ನುಡಿಯ ವರೆಗೆ ಕ ಕಾ ಕಿ ಕೀ ಹೀಗೆ ಆರಂಭ ಮಾಡಿ, ಕ್ಷ ಕ್ಷಾ ಕ್ಷಿ ಕ್ಷೀ........ ಕ್ಷಂ ಕ್ಷಃ ದ ವರೆಗೆ ಅಕ್ಷರಗಳನ್ನು ಪ್ರಸನ್ನ ವೆಂಕಟರು ವಿಸ್ತರಿಸಿದ್ದಾರೆ. ಇವುಗಳಲ್ಲಿ ಆ ಆ ಬಳ್ಳಿಯಲ್ಲಿ ೪೭ ನೆಯ ನುಡಿಯಿಂದ ೫೭ನೆಯ ನುಡಿಯ ವರೆಗೆ ಏಕದ್ವಿಯಿಂದ ದಶದ ವರೆಗೆ ಅಂಕಿಗಳನ್ನು ಹೇಳಿದ್ದಾರೆ. ೫೭ನೇ ನುಡಿಯಲ್ಲಿ ಶತಂ ಅಂಕಿಯು ಬಂದಿದೆ.

---

೧. ಪ್ರಬಂಧ ಪದ ಸಂಖ್ಯೆ ೧೯೩

ಆಮೇಲೆ ೫ರಿಂದ ೬೩ನೆಯ ನುಡಿಗಳ ವರೆಗಿನ ಐದು ನುಡಿಗಳಲ್ಲಿ ಪಂಚ ಮಹಾಭೂತಗಳಾದ ಕ್ಷಿತಿ, ಅಂಬು, ಅಗ್ನಿ, ವಾತ ಮತ್ತು ಅಂಬರ ಇವು ಎಣಿ ಸಲ್ಪಟ್ಟಿವೆ. ೬೩ನೆಯ ನುಡಿಯಲ್ಲಿ ಶಬ್ದ ಶಬ್ದವು ಬಂದಿದೆ. ೬೪ನೆಯ ನುಡಿ ಯಲ್ಲಿ ಮೇಷ, ವೃಷಭ ಮುಂತಾದ ೧೨ ರಾಶಿಗಳ ಹೆಸರುಗಳು ಬಂದಿವೆ. ೬೫-೬೬ ಈ ನುಡಿಗಳಲ್ಲಿ ೨೭ ನಕ್ಷತ್ರಗಳನ್ನು ಪ್ರಸನ್ನ ವೆಂಕಟರು ಹೇಳಿದ್ದಾರೆ. ೬೭-೬೮ ಮತ್ತು ೬೯ ಈ ಮೂರು ನುಡಿಗಳಲ್ಲಿ ದಶಾವತಾರಗಳನ್ನು ವರ್ಣಿಸಿದ್ದಾರೆ. ೭೦ನೆಯ ನುಡಿಯಲ್ಲಿ ಶ್ರೀ ಮಧ್ವಾಚಾರ್ಯರಿಗೆ ಪ್ರಿಯನಾದ ದೇವರ ಸ್ತೋತ್ರ ವಿದೆ. ೭೧ನೆಯ ನುಡಿಯಲ್ಲಿ ಪ್ರಸನ್ನ ವೆಂಕಟದಾಸರಿಗೆ ಪ್ರಸನ್ನನಾದ ವೆಂಕ ಟೇಶನ ಸ್ತುತಿಯಿದೆ.

ಈ ಪ್ರಕಾರ ಷಟ್ಚರಣ ಪದ್ಯಮಾಲೆಯಲ್ಲಿ ಬೇರೆ ಬೇರೆ ವಿಷಯಗಳು ಕಂಡರೂ ಸಂಸ್ಕೃತದಲ್ಲಿದ್ದ "ವಿಷ್ಣು ಸಹಸ್ರ ನಾಮಾವಳಿ" ಯಂತೆ ಇದರಲ್ಲಿ ಮೊದಲಿನಿಂದ ಕೊನೆಯ ವರೆಗೆ ವಿಷ್ಣುವಿನ ಹೆಸರುಗಳಿವೆ. ನಾಮಾವಳಿಯಲ್ಲಿ "ಕೇಶವಾಯ ನಮಃ" "ನಾರಾಯಣಾಯ ನಮಃ" ಹೀಗೆ ಕೊನೆಗೆ 'ನಮಃ' ಎನ್ನುವಂತೆ ಇದರಲ್ಲಿಯೂ ಪ್ರತಿಯೊಂದು ಷಟ್ಪದಿಯ ಕೊನೆಗೆ 'ನಮೋ' ಎಂದಿದೆ.

ಈ ಮಾಲೆಯಲ್ಲಿಯ ೭೧ ನುಡಿಗಳನ್ನು ಓದಿದರೆ, ಪ್ರಸನ್ನ ವೆಂಕಟರಿಗೆ ಸಂಸ್ಕೃತ ಮತ್ತು ಕನ್ನಡದಲ್ಲಿ ಇದ್ದ ಜ್ಞಾನವು ಎಷ್ಟು ಎಂಬುದು ತಿಳಿದುಬರು ವದು. ಈ ಪದ್ಯಮಾಲೆಯಲ್ಲಿ ದಾಸರು ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ಹೊರ ಟಿಲ್ಲ. ಆದರೆ ದಾಸರ ಕೈವಾಡ ಹೇಗಿದೆಯೆಂಬುವದನ್ನು ತಿಳಿದುಕೊಳ್ಳಬಹು ದಾಗಿದೆ. ಯಾವ ದಾಸರೂ ಇಂಥ ನೈಪುಣ್ಯ ತೋರಿಸಿಲ್ಲ. ಇದೊಂದು ಪ್ರಸನ್ನ ವೆಂಕಟರ ವೈಶಿಷ್ಟ್ಯವೆಂದೆನ್ನಬಹುದು. ಇಂಥ ಕೃತಿಯಿಂದ ಪ್ರಸನ್ನ ವೆಂಕಟರು ನಿಜವಾಗಿ ವೆಂಕಟೇಶನನ್ನು ಪ್ರಸನ್ನೀಕರಿಸಿಕೊಂಡ ದಾಸರು ಎಂಬ ಭಾವವು ಮನದಲ್ಲಿ ಬಾರದೆ ಇರಲಾರದು.

**೨. ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ[೧]:**— ಈ ಚರಿತ್ರೆಯಲ್ಲಿ ನಾರದ ಮಹರ್ಷಿಗಳು ಕೊರವಂಜಿ ವೇಷವನ್ನು ಧರಿಸಿ, ರುಕ್ಮಿ

೧. ಪ್ರಬಂಧ ಪದ ಸಂಖ್ಯೆ ೧೮೪

ಣಿಯ ಕಡೆಗೆ ಹೋಗಿ ಶಕುನವನ್ನು ಹೇಳಿ, ಕೃಷ್ಣನನ್ನು ವರಿಸಲು ಅವಳಿಗೆ ಹೇಳುತ್ತಾರೆ.

ಇದರಲ್ಲಿ ರಾಗ, ತಾಳಗಳನ್ನು ಕೂಡಿಕೊಂಡಿದ್ದ ೩೪ ಪದಗಳಿವೆ. ಒಟ್ಟು ೯೯ ನುಡಿಗಳಿವೆ. ಆರಂಭದಲ್ಲಿ ವಿಷ್ಣುವಿನ ಸ್ತೋತ್ರವಿದೆ. ಆಮೇಲೆ ಭೂ-ದೇವಿಯು ನಾರದರ ಕಡೆಗೆ ಹೋದದ್ದು ಹೇಳಿದೆ. ನಾರದರು ಕೊರವಂಜಿಯ ವೇಷವನ್ನು ಧರಿಸುತ್ತಾರೆ. ದಾಸರು ಕೊರವಂಜಿಯ ವೇಷಭಾಷಣಗಳನ್ನು ವರ್ಣಿಸಿದ್ದಾರೆ. ಈ ವರ್ಣನೆಯು ದಾಸರ ಕಾಲದಲ್ಲಿದ್ದ ವೇಷಭೂಷಣಗಳ ಚಿತ್ರವನ್ನು ಕಣ್ಣುಮುಂದೆ ತಂದು ನಿಲ್ಲಿಸುತ್ತದೆ. ಕೊರವಂಜಿಯು ರುಕ್ಮಿಣಿಯ ಕಡೆಗೆ ಬಂದು ಅವಳ ಕೈ ನೋಡುವಳು. ರುಕ್ಮಿಣಿಯು ಪ್ರಶ್ನೆ ಕೇಳುವಳು. ಅದಕ್ಕೆ ನಾರದರು ಉತ್ತರ ಕೊಡುವರು. ಈ ಪ್ರಕಾರ ಸರಸ ಸಲ್ಲಾಪ ನಡೆಯುತ್ತದೆ. "ಛಪ್ಪನ್ನ ದೇಶ" ಗಳಲ್ಲಿ ತಿರುಗಿ ಬಂದ ಕೊರವಂಜಿಯು ದೇಶಗಳ ಹೆಸರನ್ನು ಹೇಳುತ್ತಾಳೆ. ರುಕ್ಮಿಣಿಗೆ ಇವಳ ಬಗ್ಗೆ ಕುತೂಹಲವುಂಟಾಗುತ್ತದೆ. ಅವಳು ಆದರ, ಸತ್ಕಾರಗಳನ್ನು ಮಾಡುತ್ತಾಳೆ. ಕೊರವಂಜಿಯು ಕೃಷ್ಣನ ವರ್ಣನೆ ಮತ್ತು ಸ್ತುತಿಯನ್ನು ಮಾಡುತ್ತಾಳೆ. ಇಂಥವನನ್ನು ವರಿಸಬೇಕೆಂಬ ಬಲವಾದ ಬಯಕೆಯು ರುಕ್ಮಿಣಿಗೆ ಉಂಟಾಗುತ್ತದೆ. ಅದೇ ಕಾಲಕ್ಕೆ ಕೊರವಂಜಿಯು ರುಕ್ಮಿಣಿಗೆ ಅಧ್ಯಾತ್ಮ ವಿಷಯದ ಬಗ್ಗೆ ನಾಲ್ಕು ಮಾತುಗಳನ್ನು ಹೇಳುತ್ತಾಳೆ.೧ ಮುಂದೆ ಕೊರವಂಜಿಯು ಹೊರಡಲುದ್ಯುಕ್ತಳಾಗುತ್ತಾಳೆ. ಆದರೆ ಕೃಷ್ಣನು ಬರುವ ವರೆಗೆ ನಿಲ್ಲಲು ರುಕ್ಮಿಣಿಯು ಅವಳನ್ನು ಪ್ರಾರ್ಥಿಸುತ್ತಾಳೆ. ಇದಕ್ಕೆ "ನೀನು ಕರೆದಾಗ್ಗೆ ಬರುವೆನು."೨ ಎಂದು ಹೇಳಿ, ಕೊರವಂಜಿಯ ವೇಷಧಾರಿಯಾದ ನಾರದರು ಹೋಗುತ್ತಾರೆ. ಕೊನೆಗೆ ಶ್ರೀ ಪ್ರಸನ್ನ ವೆಂಕಟೇಶನು ನಮಗೆ ಜಯ ಕೊಡುವನು ಎಂದು ಹೇಳಿ ದಾಸರು ಆತನನ್ನು ಸ್ತುತಿಸುತ್ತಾರೆ.

ಈ ಚರಿತ್ರೆಯಲ್ಲಿ ಕೊರವಂಜಿಯ ಪಾತ್ರವನ್ನು ದಾಸರು ಚನ್ನಾಗಿ ಚಿತ್ರಿಸಿದ್ದಾರೆ. ಹಿಂಡುಗಟ್ಟಿಕೊಂಡು ಬರುವ ಕೊರವಂಜಿಯು ಶಕುನ ಹೇಳುವ

---

೧. ಪ್ರಬಂಧ ಪದ ಸಂಖ್ಯೆ ೧೮೯ ೨೫ನೇ ಭಾಗ
೨. ,, ,, ೧೮೯

ದಕ್ಕೆ, ಮನೆಯಲ್ಲಿ ಬರುವ ರೀತಿಯನ್ನು ನೋಡಬೇಕು. ಟೊಂಕದ ಮೇಲೆ ಮಗುವನ್ನು ಕರೆದುಕೊಂಡು ಹಸಿವೆಯಿಂದ ಬಳಲಿದವಳಂತೆ ಕಾಣಿಸಿಕೊಂಡು ಊಟಕ್ಕೆ ಅನ್ನವನ್ನು ಬೇಡುವ ಕೊರವಂಜಿಯನ್ನು ನೋಡಿದರೆ, ನಾರದರು ಕೂಡ ತಾವು ನಾರದರು ಹೌದೇ ಎಂದು ತಮ್ಮನ್ನು ತಾವೇ ಮರೆಯಬಹುದು. ಅವಳು ಆಡುವ ದ್ರಾವಿಡ ಭಾಷೆಯು ಇವಳು ಕೊರವಂಜಿಯು ಎಂದು ವ್ಯಕ್ತ ಗೊಳಿಸದಿರದು.೧

ಈ ಚರಿತ್ರೆಯಲ್ಲಿ ೩೪ ಭಾಗಗಳು ಕಂಡರೂ ಎಲ್ಲ ಭಾಗಗಳು ಒಂದು ವಿಸ್ತಾರವಾದ ಚರಿತ್ರೆಯ ಚಿತ್ರವನ್ನು ಕೊಡುತ್ತವೆ. ಪ್ರತಿಯೊಂದು ಭಾಗವು ಒಂದೊಂದು ರಾಗದಲ್ಲಿ ಮತ್ತು ಒಂದೊಂದು ತಾಳದಲ್ಲಿ ವರ್ಣಿತವಾಗಿದೆ. ಇದ ರಿಂದ ಪ್ರಸನ್ನ ವೆಂಕಟದಾಸರ ರಾಗಜ್ಞಾನವು ಅಪಾರವಾದುದೆಂದು ಗೋಚರ ವಾಗುವದು.

**ನಾರಾಯಣ ಪಂಜರ**೨:— ಇದರಲ್ಲಿ ನಾರಾಯಣನ ಸ್ತೋತ್ರರೂಪ ವಾದ ೪೦ ಪದ್ಯಗಳಿವೆ. ಸಂಸ್ಕೃತದಲ್ಲಿ "ನಾರಾಯಣವರ್ಮ" ಇಲ್ಲವೆ "ನಾರಾಯಣ ಕವಚ" ವಿದ್ದಂತೆ ದಾಸರು ಕನ್ನಡದಲ್ಲಿ ನಾರಾಯಣನನ್ನು ಸ್ತುತಿಸಿದ್ದಾರೆ. "ನಾರಾಯಣಾ, ನಿನ್ನನ್ನು ಆರಾಧಿಸಿದವರಿಗೆ ನೀನು ಮೋಕ್ಷ ವನ್ನು ಕೊಟ್ಟೆ; ನಿನ್ನನ್ನು ದೇವರು, ಗಂಧರ್ವರು, ಕಿನ್ನರರು ಆರಾಧಿಸುವರು. ದಶಾವತಾರಿಯಾದ ನಾರಾಯಣನೇ, ನಿನ್ನನ್ನು ದೊರಕಿಸಲು ನಾನು ಕಷ್ಟ ಪಟ್ಟೆ." "ಭವ ಭಯದಿ ತೊಳತೊಳಲಿ, ಬಳಬಳಲಿ ಬಲು ದಣಿದೆ." "ಕಿವಿ ಯಲ್ಲಿ ವದನದಲ್ಲಿ ನಿನ್ನ ನಾಮದ ನೆನವು ಇರಲಿ" ಎಂದು ಪ್ರಸನ್ನ ವೆಂಕಟ ದಾಸರು ನಾರಾಯಣನಿಗೆ ಬೇಡಿಕೊಳ್ಳುತ್ತಾರೆ. ಪ್ರತಿಯೊಂದು ನುಡಿಯ ಕೊನೆಗೆ "ನಾರಾಯಣಾ" ಎಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆ. "ನಾರಾ ಯಣನು ನಾದಲೋಲ". ಆತನನ್ನು ವಶಪಡಿಸಿಕೊಳ್ಳುವದು ನಾದದಿಂದ ಎಂಬ ಮಾತನ್ನು ಮನದಲ್ಲಿಟ್ಟುಕೊಂಡು ಈ ೪೦ ನುಡಿಗಳನ್ನು ಬರೆದಂತೆ ಕಾಣು ತ್ತದೆ. ಒಂದು ನುಡಿಯನ್ನು ಆದು ಕೊನೆಯಲ್ಲಿ "ನಾರಾಯಣಾ" ಎಂದು

---

೧. ಪ್ರಬಂಧ ಪದ ಸಂಖ್ಯೆ ೧೪೯ ಭಾಗ ೧೭ ನುಡಿ ೧
ಬುಡುಕ್ಕಾನೆ ಪದಕಾನು ಚಿಂತಿಸಮಾಣಮ್ಮ, ಭಾಗ ೩೪ ನುಡಿ ೧ ಪದ ಸಂಖ್ಯೆ ೧೪೯ ಎಲ್ಲ ನುಡಿ. ೨. ಪ್ರಬಂಧ ಪದ ಸಂಖ್ಯೆ ೧೪೦

ಉಚ್ಚರಿಸಿ, ಮುಂದಿನ ನುಡಿಯನ್ನು ಅಂದು " ನಾರಾಯಣಾ " ಅನ್ನುವ ವರೆಗೆ ಮೊದಲು ಹೊರಟಿದ್ದ ನಾದವು, ಹಾಗೆಯೇ ಕಿವಿಯಲ್ಲಿ ನಾದವನ್ನು ಕೊಡುತ್ತಿರುತ್ತದೆ. ಕವಿ ಲಕ್ಷ್ಮೀಶನಂತೆ ಪ್ರಸನ್ನ ವೆಂಕಟದಾಸರು ಕೂಡ ತಮ್ಮ ಕಾವ್ಯದಲ್ಲಿ ನಾದವನ್ನು ತುಂಬಿದ್ದಾರೆ ಎಂದು ಅನ್ನಲು ಅಡ್ಡಿಯಿಲ್ಲ.

೪. **ಭ್ರಮರಗೀತೆ**[೧] :— ಭಾಗವತ ದಶಮಸ್ಕಂಧ ಪೂರ್ವಾರ್ಧದಲ್ಲಿ ಭ್ರಮರಗೀತೆಯ ವಿಷಯ ಕಂಡುಬರುವದು. ಅಧ್ಯಾಯ ೪೭ ಶ್ಲೋಕ ೧ರಿಂದ ೯ರ ವರೆಗೆ ಇದ್ದ ಸಂಗತಿಯೆಂದರೆ, ಉದ್ಧವನು ಯಮುನೆಯಲ್ಲಿ ಸ್ನಾನವನ್ನು ತೀರಿಸಿಕೊಂಡು ಗೋಕುಲಕ್ಕೆ ಬರುತ್ತಾನೆ. ಆತನನ್ನು ದೂರದಿಂದಲೇ ನೋಡಿದ ಗೋಪಿಯರಿಗೆ ಅವನು ಅಕ್ರೂರನೆಂದು ಭಾಸವಾಗುತ್ತದೆ. ಆತನು ಸಮೀಪಿಸಿದ ನಂತರ ಅಕ್ರೂರನಲ್ಲವೆಂದು ತಿಳಿಯುತ್ತಾರೆ. ಇಲ್ಲಿ ಉದ್ಧವನ ವರ್ಣನೆಯಿದೆ. ಗೋಪಿಯರು ಉದ್ಧವನಿಗೆ ಪ್ರಶ್ನೆ ಮಾಡಿದ್ದೇನೆಂದರೆ, ಮನುಷ್ಯ ಪ್ರೇಮವನ್ನು ಏಕೆ ಮಾಡುತ್ತಾನೆ ? ಪ್ರೇಮವು ಎಂಥದು ? ಮನುಷ್ಯನಲ್ಲಿ ಸ್ಥಿರವಾದ ಮತ್ತು ಶಾಶ್ವತವಾದ ಪ್ರೇಮವು ಕಂಡುಬರುವದಿಲ್ಲವೇಕೆ ?

ಭಾಗವತದಲ್ಲಿಯ ೧೦ನೆಯ ಶ್ಲೋಕದಿಂದ ಭ್ರಮರಗೀತೆಯು ಆರಂಭವಾಗುತ್ತದೆ. ಮತ್ತು ೨೧ನೇ ಶ್ಲೋಕಕ್ಕೆ ಭ್ರಮರಗೀತೆಯು ಮುಗಿಯುತ್ತದೆ. ಗೋಪಿಯರು ಉದ್ಧವನ ಕೂಡ ಮಾತನಾಡುತ್ತ ಕುಳಿತಾಗ್ಗೆ ಭ್ರಮರವೊಂದು ಗುಂಜಾರವ ಮಾಡುತ್ತ ಅಲ್ಲಿಗೆ ಬರುವದು. ಅದನ್ನು ಕಂಡು ಗೋಪಿಯರು ಅದು ತಮ್ಮ ಪ್ರಿಯಕರನಿಂದ ಅಟ್ಟಲ್ಪಟ್ಟ ದೂತನೆಂದು ಭಾವಿಸಿ, ಅದರೊಡನೆ ಮಾತನಾಡುತ್ತಾರೆ. ಇದು ಭಾಗವತದಲ್ಲಿಯ ೧೧ನೇ ಶ್ಲೋಕದ ಅರ್ಥವಾಯಿತು, ೧೦ನೇ ಶ್ಲೋಕದಲ್ಲಿ ಇದ್ದ ಅರ್ಧ ಶ್ಲೋಕದ ಅರ್ಥವು ಪ್ರಸನ್ನ ವೆಂಕಟರ ೯ನೆಯ ಶ್ಲೋಕದಲ್ಲಿ ಬಂದಿದೆ.

ಭಾಗವತದ ೧೨ನೆಯ ಶ್ಲೋಕದಲ್ಲಿಯ ಅರ್ಥವು ಪೂರ್ಣವಾಗಿ ಪ್ರಸನ್ನ ವೆಂಕಟರ ೧ನೆಯ ಶ್ಲೋಕದಲ್ಲಿ ಬಂದಿದೆ. ಮೂಲ ಭಾಗವತದಲ್ಲಿಯ ೧೨, ೧೩, ೧೪, ೧೫ನೆಯ ಶ್ಲೋಕಗಳು ಪ್ರಸನ್ನ ವೆಂಕಟರ ಭ್ರಮರಗೀತೆಯಲ್ಲಿ ವರ್ಣಿತವಾಗಿಲ್ಲ. ೧೬ನೆಯ ಶ್ಲೋಕದ ಉತ್ತರಾರ್ಧದಲ್ಲಿದ್ದ ಅರ್ಥವು ಪ್ರಸನ್ನ

---

೧. ಪ್ರಬಂಧಪದ ಸಂಖ್ಯೆ ೧೯೧.

ವೆಂಕಟರ ೪ನೆಯ ನುಡಿಯಲ್ಲಿಯ ಉತ್ತರಾರ್ಧದಲ್ಲಿ "ಹೆತ್ತತಾಯಿ....ಅಕ್ರೂರ ನೊಡನೈದಿದಾ" ಎಂದು ಪೂರ್ಣವಾಗಿದೆ.

ಮೂಲ ಭಾಗವತದ ೧೭ನೆಯ ಶ್ಲೋಕದಲ್ಲಿದ್ದ "ಕೃಷ್ಣನು ಹಿಂದೆ ಮಾಡಿದ ದುಷ್ಟ ಕರ್ಮಗಳನ್ನು" ಎಂಬ ಮಾತನ್ನು ಪ್ರಸನ್ನ ವೆಂಕಟರು ವರ್ಣಿಸಿಲ್ಲ. ಭಾಗವತದ ೧೮ರಿಂದ ೨೧ನೆಯ ಶ್ಲೋಕಗಳಿಗೆ ಪ್ರಸನ್ನ ವೆಂಕಟರ ಗೀತೆಯಲ್ಲಿ ಅರ್ಥವಿಲ್ಲ. ಮೂಲ ಭಾಗವತದಿಂದ ಪ್ರಸನ್ನ ವೆಂಕಟರು ಭ್ರಮರ ಗೀತೆಯಲ್ಲಿದ್ದ ೧೨ ಶ್ಲೋಕಗಳಲ್ಲಿ (ಶ್ಲೋಕ ೧೦ರಿಂದ ೨೧ ಪೂರ್ಣ) ೧೦, ೧೧ ಮತ್ತು ೧೬ನೇ ಶ್ಲೋಕದ ಅರ್ಧ ಭಾಗ ಹೀಗೆ ಎರಡೂವರೆ ಶ್ಲೋಕಗಳನ್ನು ಭಾಷಾಂತರಿಸಿ, ಉಳಿದ ಶ್ಲೋಕಗಳ ಭಾವಾರ್ಥವನ್ನು ಮಾತ್ರ ತೆಗೆದುಕೊಂಡಿದ್ದಾರೆ. ಇಂಥ ಶ್ಲೋಕದಿಂದ ಇಷ್ಟು ಅರ್ಥವನ್ನು ತೆಗೆದುಕೊಂಡಿದ್ದಾರೆಂದು ಹೇಳಲು ಸಾಧ್ಯವಿಲ್ಲ. ೧೮ನೆಯ ಶ್ಲೋಕದಲ್ಲಿದ್ದ "ಕೃಷ್ಣನ ದುಷ್ಕರ್ಮಗಳನ್ನು" ದಾಸರು ವರ್ಣಿಸಿಲ್ಲ; ಏಕೆಂದರೆ ಕೃಷ್ಣನ ಭಕ್ತಿಯಿಂದ ತುಂಬಿ ತುಳುಕುತ್ತಿದ್ದ ದಾಸರಿಗೆ ಆತನ ದೋಷಗಳನ್ನು ಹೇಳುವದು ಹೇಗೆ ಸಾಧ್ಯವಾದೀತು?

ಶ್ರೀಪ್ರಸನ್ನ ವೆಂಕಟದಾಸರು ಬರೆದ ಭ್ರಮರಗೀತೆಯಂತೆ ಶ್ರೀಪಾದರಾಯರೂ ಒಂದು ಭ್ರಮರಗೀತೆಯನ್ನು ಬರೆದಿದ್ದಾರೆಂದು ತಿಳಿದುಬರುವದು.[೧] ಇದರಿಂದ ಕನ್ನಡದಲ್ಲಿ ಭ್ರಮರಗೀತೆಯನ್ನು ಬರೆದವರು ಶ್ರೀಪಾದರಾಜರೋ ಪ್ರಸನ್ನ ವೆಂಕಟರೋ? ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುವದು. ಕನ್ನಡದಲ್ಲಿ ದಶಮಸ್ಕಂಧ ಭಾಗವತದ ಪೂರ್ವಾರ್ಧವನ್ನು ಬರೆದವರು ಶ್ರೀ ಪ್ರಸನ್ನ ವೆಂಕಟದಾಸರು; ಶ್ರೀಪಾದರಾಜರಲ್ಲ. ಭಾಗವತವನ್ನು ಬರೆಯುವ ಕಾಲಕ್ಕೆ, ಭ್ರಮರಗೀತೆಯನ್ನು ಪ್ರಸನ್ನ ವೆಂಕಟರು ಬರೆದಿರಬೇಕು, ಎಂದು ಊಹಿಸಿ ಇಲ್ಲಿ ಕೊಡಲಾಗಿದೆ. ಪ್ರಸನ್ನ ವೆಂಕಟರ ಭ್ರಮರಗೀತೆಯಲ್ಲಿ ೯ ನುಡಿಗಳಿವೆ. ಅದರಲ್ಲಿ ೯ನೆಯ ನುಡಿಯು ಪ್ರಸನ್ನ ವೆಂಕಟರ ಕೈಚಳಕವನ್ನು ತೋರಿಸುತ್ತದೆ. ಅದರಲ್ಲಿ ದಶಾವತಾರದ ಹೆಸರುಗಳಿವೆ. "ಹೆಂಗಾಳೆರೆಂಬೊ

೧. ಕ.ಹ.ಕೀ.ತ, ಸಂಪುಟ ೩, ಶ್ರೀಪಾದರಾಜಸ್ವಾಮಿಗಳ ಕೃತಿಗಳು ಪುಟ ೯೫ ಇಲ್ಲಿಯ "ಭ್ರಮರಗೀತೆ."

ಹುಲ್ಲೆ ಮೃಗಂಗಳು ಗುರಿಯ ಮಾಡಿ ಹಿಂಗಿಸುತ್ತೈದಾನೆ ” “ ನೇಹಾವೆಂಬೊ ನಾವೆಯನ್ನೇರಿಸಿ ಮೋಸಾದೆವೊ ’’ ಎಂಬ ಈ ಎರಡು ಸಾಲುಗಳು ಮೂಲ ದಲ್ಲಿಲ್ಲ. ಈ ಹೋಲಿಕೆಗಳು ಪ್ರಸಂಗಕ್ಕನುಸಾರವಾಗಿ ವಿವರಿಸಲ್ಪಟ್ಟಿವೆ. ಪಲ್ಲ ವಿಯ ಕೊನೆಯಲ್ಲಿ, ಮತ್ತು ಪ್ರತಿಯೊಂದು ನುಡಿಯ ಕೊನೆಯಲ್ಲಿ “ ಹಾಕಿ ತವಾ ” ಎಂಬ ಶಬ್ದಪ್ರಯೋಗವನ್ನು ಮಾಡಿದ್ದರಿಂದ ಶ್ರೀಕೃಷ್ಣನ ರೂಪಕ್ಕೆ ಮನಸೋತು, ಆತನ ಅಗಲುವಿಕೆಯಿಂದ ವಿರಹಾಗ್ನಿ ತಾಪವನ್ನು ಗೋಪಿ ಯರು ಸಹಿಸಲಾರದೆ ಆತನನ್ನು ದೂಷಿಸಿ “ ಕೃಷ್ಣ, ಕಪಟಿ ” ಎಂಬು ವದು ಅವರ ದೃಷ್ಟಿಯಿಂದ ಎಷ್ಟು ಸಮಂಜಸವಾದುದೆಂಬುದನ್ನು ತೋರಿಸಿ ಕೊಟ್ಟಿದ್ದಾರೆ.

ಇದರ ಮೇಲಿಂದ ಪ್ರಸನ್ನ ವೆಂಕಟರು ಭಾಗವತವನ್ನು ಇದ್ದಕ್ಕಿದ್ದಂತೆ ಭಾಷಾಂತರ ಮಾಡಲು ಹೊರಟವರಲ್ಲ ಎಂದು ಹೇಳಬಹುದು. ಭಾಗವತದ “ ಭ್ರಮರಗೀತೆ ”ಯ ತಲೆಬರೆಹದ ಕೆಳಗೆ ತಮ್ಮ ಭಾವಕ್ಕೆ ತಕ್ಕಂತೆ ವಿಷಯ ವನ್ನು ಆಯ್ದುಕೊಂಡು, ಅದನ್ನು ನಿರೂಪಿಸುವ ಕೈಚಳಕವನ್ನು ತೋರಿಸಿ ದ್ದಾರೆ. ಮೂರನೆಯ ನುಡಿಯಲ್ಲಿ “ ಮ ” ಅಕ್ಷರದ ಅನುಪ್ರಾಸವಿಟ್ಟು ದಾಸರು ತಮ್ಮ ಕಾವ್ಯಕ್ಕೆ ಕಳೆತಂದಿದ್ದಾರೆ. ( ಈ ಭ್ರಮರಗೀತೆಯು ಶ್ರೀಪಾದ ರಾಜರದಂತೆ?—ಪ್ರಕಾಶಕ ).

**೫. ಸತ್ಯಭಾಮಾವಿಲಾಸ ಇಲ್ಲವೆ ಶ್ರೀಕೃಷ್ಣಪಾರಿಜಾತಂ :—** ವಿಷಯ :— ನಾರದರು ಪಾರಿಜಾತ ಪುಷ್ಪವನ್ನು ರುಕ್ಮಿಣಿಗೆ ತಂದುಕೊಡು ತ್ತಾರೆ. ಈ ವೃತ್ತಾಂತವು ಸತ್ಯಭಾಮೆಗೆ ತಿಳಿದು, ಅವಳು ಕೃಷ್ಣನ ಮೇಲೆ ಸಿಟ್ಟಿಗೆದ್ದು, ಎಲ್ಲ ಆಭರಣಗಳನ್ನು ತ್ಯಜಿಸಿ, “ ಕೃಷ್ಣನು ತನ್ನನ್ನು ಪ್ರೀತಿಸುವ ದಿಲ್ಲ, ರುಕ್ಮಿಣಿಯನ್ನೇ ಪ್ರೀತಿಸುತ್ತಿರುವನು ” ಎಂದು ದುಃಖಿಸುವಳು. ಈ ವೃತ್ತಾಂತವು ಕೃಷ್ಣನಿಗೆ ತಿಳಿದು, ಸತ್ಯಭಾಮೆಯ ಕಡೆಗೆ ಅವನು ಧಾವಿಸು ವನು. ಅಲ್ಲಿಯ ಎಲ್ಲ ಸಂಗತಿಯನ್ನು ತಿಳಿದುಕೊಂಡು ಪಾರಿಜಾತ ವೃಕ್ಷ ವನ್ನು ತಂದು ಸತ್ಯಭಾಮೆಯ ಅಂಗಳದಲ್ಲಿ ಊರುವನು. ಅದರಿಂದ ಅವ ಳಿಗೆ ಆನಂದವಾಗಿ ಕೃಷ್ಣನ ಕೂಡ ಲೆತ್ತದಾಟವಾಡುವಳು. ಆ ಕಾಲಕ್ಕೆ

೧. ಅಬಾಜಿ ರಾಮಚಂದ್ರ ಸಾವಂತ : ದಾ. ಪ. ಸಂ. ಭಾಗ ೩ ಪುಟ ೯೭ ಪದ ೧೬.

ಕೃಷ್ಣನು ಎಲ್ಲರನ್ನೂ ಸೋಲಿಸುವನು. ಕೊನೆಗೆ ಪ್ರಸನ್ನ ವೆಂಕಟೇಶನ ಸ್ತೋತ್ರವಿದೆ.

ಇದರಲ್ಲಿ ೨೯ ನುಡಿಗಳಿದ್ದು, ಮೊದಲು ಒಂದು ಶ್ಲೋಕ, ಆಮೇಲೆ ಒಂದು ಪದ, ಹೀಗೆ ಹಾಡಿದ್ದಾರೆ. ಸತ್ಯಭಾಮೆಯು ಕೃಷ್ಣನನ್ನು ದೂಷಿಸುವದೆಂದರೆ, ಭಾಮೆಯ ಸವತಿಮತ್ಸರವು ಪೂರ್ಣವಾಗಿ ವ್ಯಕ್ತವಾಗಿದೆ. ಆದರೆ ಕೃಷ್ಣನು ಸತ್ಯಭಾಮೆಯು ಕಡೆಗೆ ಬಂದು ಸಂತೈಸುವ ರೀತಿಯನ್ನು ನೋಡಿದರೆ, ದೇವನು ಭಕ್ತರ ಸಲುವಾಗಿ ಎಷ್ಟು ಆತುರನಾಗಿ ಆತನ ದುಃಖವನ್ನು ನಿವಾರಿಸುವದಕ್ಕೋಸ್ಕರ ಯಾವಾಗಲೂ ಸಿದ್ಧ ಎಂಬುದು ವ್ಯಕ್ತವಾಗದೆ ಇರಲಾರದು.

೬. **ಪ್ರಸನ್ನ ವೆಂಕಟರ ಭಾಗವತ**[೧] :— ಮೂಲ ದಶಮಸ್ಕಂದ ಭಾಗವತದಲ್ಲಿ ೪೮ ಅಧ್ಯಾಯಗಳಿವೆ. ಈ ಅಧ್ಯಾಯಗಳು ಶ್ರೀವಿಜಯಧ್ವಜರ ಟೀಕೆಯಿದ್ದ ಭಾಗವತಕ್ಕೆ ಸರಿಹೋಗುತ್ತವೆ. ಪ್ರಸನ್ನ ವೆಂಕಟರು ಕೃಷ್ಣನ ಬಾಲಲೀಲೆಯ ವರ್ಣನೆ ಮಾಡುವದಕ್ಕಾಗಿ ಹೊರಟು, ಭಾಗವತದ ( ದಶಮಸ್ಕಂದ ) ಮೊದಲಿನ ೪೩ ಅಧ್ಯಾಯಗಳನ್ನು ಆಯ್ದುಕೊಂಡು ೪೭ನೆಯ ಅಧ್ಯಾಯದಲ್ಲಿದ್ದ ಭ್ರಮರಗೀತೆಯನ್ನು ವರ್ಣಿಸಿ ೪೮ನೆಯ ಅಧ್ಯಾಯದಲ್ಲಿದ್ದ ಅಕ್ರೂರನಿಗೆ ಹಸ್ತಿನಾಪುರಕ್ಕೆ ಕಳುಹಿಸಿದ್ದಾರೆ. ಭ್ರಮರಗೀತೆಯ ವರ್ಣನೆಯನ್ನು ಹಿಂದೆ ಕೊಟ್ಟಿದೆ. ದಶಮಸ್ಕಂದ ಭಾಗವತದ ಮತ್ತು ಪ್ರಸನ್ನ ವೆಂಕಟರ ಭಾಗವತದ ಚಿನ್ಹಗಳನ್ನು ಕೆಳಗಿನಂತೆ ಕಾಣಿಸಿದೆ.

ದಶಮಸ್ಕಂದ ಭಾಗವತದ ಪೂರ್ವಾರ್ಧದಲ್ಲಿಯ ಅಧ್ಯಾಯಗಳನ್ನು ಅ. ೧, ೨, ೩ ಈ ಪ್ರಕಾರವಾಗಿ, ಶ್ಲೋಕಗಳಿಗೆ, ಶ್ಲೋ. ೧, ೨, ೩ ಈ ಪ್ರಕಾರವಾಗಿ ಮತ್ತು ಪ್ರಸನ್ನ ವೆಂಕಟರ ಪುಟಗಳಿಗೆ, ಪುಟ ೧, ೨, ೩, ನುಡಿಗಳಿಗೆ, ನುಡಿ, ೧, ೨, ೩ ಮತ್ತು ಪದಗಳಿಗೆ, ಪದ, ೧, ೨, ೩ ಈ ಪ್ರಕಾರವಾಗಿ ತೋರಿಸಿದೆ. ಮೊದಲು ಮೂಲ ದಶಮಸ್ಕಂದ ಭಾಗವತ ಪೂರ್ವಾರ್ಧದ ಅಧ್ಯಾಯಗಳಿಗನುಸಾರವಾಗಿ ಪ್ರಸನ್ನ ವೆಂಕಟರ ಭಾಗತವನ್ನು ವಿಚಾರಿಸಿದೆ.

---

೧. ಪ್ರಸನ್ನವೆಂಕಟದಾಸರ ಭಾಗವತ ದಶಮಸ್ಕಂದ ಪೂರ್ವಾರ್ಧ.

**ಅಧ್ಯಾಯ ೧—**

ಶ್ಲೋಕ ೧ರಿಂದ ೧೬ರ ವರೆಗೆ ಪರೀಕ್ಷಿತ ರಾಜನು ಶುಕಮುನಿಯನ್ನು ಕುರಿತು, "ಮುನೀಂದ್ರಾ, ಸೂರ್ಯ ಚಂದ್ರರ ವಂಶವಿಸ್ತಾರವನ್ನು ಕೇಳಿದೆನು. ಆ ವಂಶದಲ್ಲಿ ಪರಮ ಧಾರ್ಮಿಕನಾದ ಯದುಮಹಾರಾಜನ ಚರಿತ್ರೆಯನ್ನು ಕೇಳಿದೆನು. ಆ ಯದುವಂಶದಲ್ಲಿ ಭಗವಂತನು ಶೇಷಾಂಶಭೂತನಾದ ಬಲ ರಾಮನೊಡನೆ ಅವತರಿಸಿ ಲೋಕಾದ್ಭುತ ಕಾರ್ಯಗಳನ್ನು ನಡೆಸಿದನೆಂದು ನೀನು ಸೂಚಿಸಿದೆ. ಆ ಶ್ರೀಕೃಷ್ಣನ ವೀರ ಚರಿತ್ರೆಯನ್ನೆಲ್ಲ ನನಗೆ ಸವಿಸ್ತಾರ ವಾಗಿ ತಿಳುಹಿಸಬೇಕು." ಹೀಗೆ ಪರೀಕ್ಷಿತನು ಎನಲು, ಶುಕಮುನಿಯು ಹೇಳಲು ಆರಂಭಮಾಡುವನು. ಈ ಭಾಗ ಶ್ರೀಪ್ರಸನ್ನವೆಂಕಟರ ಭಾಗವತದಲ್ಲಿ ಬಂದಿಲ್ಲ. ಪ್ರಸನ್ನ ವೆಂಕಟರ ಭಾಗವತ ಪುಟ ೧, ನುಡಿ ೧, ೨ರಲ್ಲಿ ದೇವರಿಗೆ ಜಯವನ್ನು ಕೋರಿದೆ. ೩ನೇ ನುಡಿಯ ಮೊದಲಿನ ಎರಡು ಪಾದದಲ್ಲಿ ದೇವರಿಗೆ ಜಯ ವನ್ನು ಕೋರಿದೆ. "ಗೋಸಮುಹದ್ವಿಜ ದೇವ ದ್ವೇಷಿಕುಲಹರಣ" ಎಂಬ ನಿಡಿದಾದ ಸಂಸ್ಕೃತ ಸಮಾಸದ ಮೋಲಿನ ಮೋಹ ಪ್ರಸನ್ನ ವೆಂಕಟರಿಗೆ ಇನ್ನೂ ಬಿಟ್ಟಿರಲಿಲ್ಲವೆಂದು ಕಾಣುತ್ತದೆ. ೩ನೇ ಪಾದದಲ್ಲಿ ದಾಸಕೂಟದ ಸಂಪ್ರದಾಯದ ಪ್ರಕಾರ ಶ್ರೀಹನುಮ, ಭೀಮ, ಮಧ್ವರಿಗೆ ಜಯವನ್ನು ಕೋರಿದೆ. ಕೊನೆಯ ಪಾದದಲ್ಲಿ ದಾಸರು ತಮ್ಮ ಅಂಕಿತವನ್ನು ಇಟ್ಟಿದ್ದಾರೆ. ಈ ಭಾಗವು ಮೂಲ ಭಾಗವತದಲ್ಲಿಲ್ಲ.

ಪುಟ ೨, ಪದ ೨, ನುಡಿ ೧, ೨ರಲ್ಲಿ ಭಾಗವತವನ್ನು ಏಕೆ ಕೇಳಬೇಕು ಮತ್ತು ಆದರಿಂದ ಆಗುವ ಲಾಭವನ್ನು ಹೇಳಿದೆ. ನುಡಿ ೩ರಲ್ಲಿ "ಗುರು ಗಳಿಗೆರಗುವೆ" ಎಂದು ಹೇಳಿ, "ಎಣಿಸವಲೆನ್ನಯ ನುಡಿ ತಪ್ಪುಗಳನು ಮನು ಜೋತ್ತಮ ಮುಖರು" ಎಂಬ ಮಾತನ್ನು ಕೇಳಿದ ಕೂಡಲೇ ರಾಘವಾಂಕನ "ನಡೆವರೆಡಹದೆ ಕುಳಿತರೆಡಹುವರೆ" ಎಂಬ ನುಡಿಯು ಮುಂದೆ ನಿಲ್ಲುತ್ತದೆ. ಇಲ್ಲಿ ದಾಸರ ಹಿರಿಮೆಯನ್ನು ಕಾಣಬಹುದು. ಕೊನೆಯ ಪಾದದಲ್ಲಿ "ಕನ ಡುಕ್ತಿಗಳಿವು ಎನ್ನದೆ ಕೇಳಿರಿ ಘನರು ದಯಾಪರರು" ಎಂದ ಮಾತನ್ನು ಕೇಳಿ ದರೆ, ಪ್ರಸನ್ನ ವೆಂಕಟರ ಕಾಲದಲ್ಲಿ ಇನ್ನೂ ಕನ್ನಡಕ್ಕೆ ಸರಿಯಾದ ಮನ್ನಣೆ ದೊರೆತಿದ್ದಿಲ್ಲವೆಂದು ಹೇಳಿದರೆ ತಪ್ಪಾಗದು.

ಅಧ್ಯಾಯ ೧, ಶ್ಲೋಕ ೧೭, ೧೮, ೧೯, ೨೦ರಲ್ಲಿ ಭೂದೇವಿಯು ಗೋ

ರೂಪವನ್ನು ಧರಿಸಿ, ಬ್ರಹ್ಮನಿಗೆ ಶರಣು ಹೋಗುವಳು. ಬ್ರಹ್ಮನು ಶಂಕರಾದಿ ದೇವತೆಗಳನ್ನು ಕೂಡಿಕೊಂಡು ವಿಷ್ಣುವಿಗೆ ಪುರುಷಸೂಕ್ತದಿಂದ ಪ್ರಾರ್ಥನೆ ಮಾಡುವನು. ಇದು ಪ್ರಸನ್ನ ವೆಂಕಟರ ಭಾಗವತದಲ್ಲಿಲ್ಲ. ಪುಟ ೪, ಪದ ೩, ನುಡಿ ೧, ೨ ಇಲ್ಲಿದ್ದ ಪ್ರಾರ್ಥನೆಯು ದಶಮಸ್ಕಂದ ಭಾಗವತದಲ್ಲಿಲ್ಲ.

ಅಧ್ಯಾಯ ೧ ಶ್ಲೋಕ ೨೧ ರಲ್ಲಿ ಅಶರೀರ ವಾಣಿಯು ಬ್ರಹ್ಮನಿಗೆ ಕೇಳಿಸಿತು. ಅದನ್ನು ಬ್ರಹ್ಮನು ದೇವತೆಗಳಿಗೆ ಹೇಳಿದನು, ಎಂದು ಹೇಳಿದೆ ಆದರೆ ಪ್ರಸನ್ನ ವೆಂಕಟರ ಭಾಗವತದಲ್ಲಿ "ವಿಷ್ಣು ನುಡಿದನೆಲೆ" ಎಂದು ಹೇಳಿದೆ. ಪುಟ ೭ ನುಡಿ ೩ ಪದ ೪.

ಅಧ್ಯಾಯ ೧ ಶ್ಲೋಕ ೨೨—೨೩ರಲ್ಲಿ ಬ್ರಹ್ಮನು ದೇವತೆಗಳಿಗೆ ಹೇಳಿದ್ದೇನಂದರೆ "ನೀವು ಶ್ರೀಕೃಷ್ಣನ ಸೇವೆಗಾಗಿ ಯದುವಂಶದಲ್ಲಿ ಜನ್ಮ ತಾಳಿರಿ." ಈ ಭಾಗವು ದಾಸರ ಭಾಗವತದಲ್ಲಿ ಇಲ್ಲ.

ಅಧ್ಯಾಯ ೧ ಶ್ಲೋಕ ೨೫ರಲ್ಲಿ ಮಾಯೆಯು ಶಿಶುರೂಪ ತಾಳಿ ಹುಟ್ಟುವ ವಿಚಾರ:— ಇದು ದಾಸರ ಕೃತಿಯಲ್ಲಿಲ್ಲ. ಅಧ್ಯಾಯ ೧ ಶ್ಲೋಕ ೨೬—೩೩ ವರೆಗೆ ವಸುದೇವ ದೇವಕಿಯರ ಲಗ್ನಸಮಾರಂಭದ ಕಾಲಕ್ಕೆ ಉಪಯೋಗಿಸಿದ ದಲ ಮತ್ತು ಆನೆ, ಕುದುರೆಗಳ ಅಲಂಕಾರದ ವರ್ಣನೆ ಅತಿ ಸುಂದರವಾಗಿದೆ. ಇದನ್ನು ದಾಸರು ಬಿಟ್ಟಿದ್ದಾರೆ.

ಅಧ್ಯಾಯ ೧ ಶ್ಲೋಕ ೩೪ ಮತ್ತು ೩೫-ಆಕಾಶವಾಣಿಯಾದ ಕೂಡಲೆ ದೇವಕಿಯನ್ನು ಘಾತಿಸಲು ಕಂಸನು "ಕಚೇ ಗ್ರಹೀತ್" ಎಂದು ಹೇಳಿದೆ. ಆದರೆ ಪುಟ ೭ ಪದ ೪ ನುಡಿ ೪ರಲ್ಲಿ "ದೇವಕಿಯ ಘಾತಿಸಲು" ಎಂದು ಇದೆ.

ಅಧ್ಯಾಯ ೧ ಶ್ಲೋಕ ೩೬ ರಿಂದ ೫೪— ಇದರಲ್ಲಿ ವಸುದೇವನು ಕಂಸನಿಗೆ ತಂಗಿಯನ್ನು ಕೊಲ್ಲಬೇಡವೆಂದು ಪ್ರಾರ್ಥಿಸುತ್ತಾನೆ, ಮತ್ತು ಉಪದೇಶ ಮಾಡುತ್ತಾನೆ. ಸ್ತ್ರೀಹತ್ಯೆಯಿಂದ ಕಂಸನನ್ನು ಉಳಿಸುವದಕ್ಕಾಗಿ ಮಾಡಿದ ಉಪಾಯ ವಿವರಿಸಿದೆ— ಇದು ದಾಸರ ಭಾಗವತದಲ್ಲಿಲ್ಲ.

**ಅಧ್ಯಾಯ ೨—**

ಶ್ಲೋಕ ೧—೧೬. ಶುಕಾಚಾರ್ಯರು ಪರೀಕ್ಷಿತರಾಜನಿಗೆ ಅಂದದ್ದು:— ವಸುದೇವನ ಮಾತುಗಳನ್ನು ಕೇಳಿ ಕಂಸನು ತಂಗಿಯನ್ನು ಕೊಲ್ಲುವದನ್ನು ಬಿಟ್ಟನು. ಮುಂದೆ ದೇವಕಿಯು ಗರ್ಭದಲ್ಲಿ ಕೀರ್ತಿಮಾನ್ ಎಂಬುವ ಮೊದಲ

ನೆಯ ಮಗನು ಹುಟ್ಟಿದನು. ಆ ಮಗುವನ್ನು ವಸುದೇವನು ದುಃಖದಿಂದ ಕಂಸನ ವಶಕ್ಕೆ ಕೊಟ್ಟನು. ವಸುದೇವನ ಈ ಸಾಧುತ್ವವನ್ನು ನೋಡಿ ಸಂತುಷ್ಟನಾಗಿ "ಈ ಮಗನಿಂದ ನನಗೆ ಸಂಕಟವಿಲ್ಲ. ಕಾರಣ ಈ ಮಗುವನ್ನು ತೆಗೆದುಕೊಂಡು ಹೋಗು" ಎಂದು ಹೇಳಿದನು. ಈ ಮಾತಿನ ಮೇಲೆ ವಸು ದೇವನ ವಿಶ್ವಾಸವಿರಲಿಲ್ಲ. ಆ ಕಾಲಕ್ಕೆ ನಾರದ ಮುನಿಯು ಬಂದು ಕಂಸ ನಿಗೆ ಹೇಳಿದ್ದೇನಂದರೆ-- "ಕಂಸನೆ, ಗೋಕುಲದಲ್ಲಿ ದೇವತೆಗಳು, ಋಷಿಗಳು, ಬಂದು ನಂದ ಯಶೋದೆ ಮತ್ತು ಗೋಪಾಲಕರಾಗಿಯೂ ಯಾದವರಾಗಿಯೂ ಇದ್ದು, ದೈತ್ಯರ ಸಂಹಾರಕ್ಕಾಗಿ ಹೊಂಚು ಹಾಕುತ್ತಲಿದ್ದಾರೆ." ಈ ಪ್ರಕಾರ ನಾರದರು ಹೇಳಿ ಹೋದ ಬಳಿಕ, ದೇವಕಿಯು ಉದರದಲ್ಲಿ ಜನಿಸುವವನು ಸಾಕ್ಷಾತ್ ವಿಷ್ಣುವೆಂದು ತಿಳಿದು ಕಂಸನು ವಸುದೇವ, ದೇವಕಿ ಇವರಿಬ್ಬರನ್ನು ಕಾರಾಗೃಹದಲ್ಲಿ ಇರಿಸಿ, ಕೀರ್ತಿಮಾನನನ್ನು ಕೊಂದನು. ಶರೀರ ಸುಖವನ್ನು ಭೋಗಿಸುವವರು ತಮ್ಮ ಆಪ್ತ ಬಾಂಧವರನ್ನು ಈ ಪ್ರಕಾರ ಕೊಲ್ಲುವದು ಕಂಡುಬರುತ್ತದೆ. ಪರಮಾತ್ಮನು ಮೊದಲು ಕಾಲನೇಮಿಯನ್ನು ಸಂಹರಿಸಿ ದನು. ಅದೇ ಕಾಲನೇಮಿಯು ತಾನು ಎಂದು ತಿಳಿದ ಕಂಸನು ಯಾದವ ರನ್ನು ದ್ವೇಷಿಸಹತ್ತಿದನು. ಅದೇಪ್ರಕಾರ ಯದು, ಭೋಜ, ಅಂಧಕ ರಾಜ್ಯ ದಲ್ಲಿಯ ಅಧಿಪತಿಯಾದ ಮತ್ತು ತಂದೆಯಾದ ಉಗ್ರಸೇನನನ್ನು ಕಾರಾಗೃಹ ದಲ್ಲಿರಿಸಿ, ತಾನು ಶೂರಸೇನ ದೇಶದ ಅಧಿಪತಿಯಾದನು. ಈ ಮೇಲಿನ ವಿವ ರವು ದಾಸರ ಭಾಗವತದಲ್ಲಿಲ್ಲ. ಏಕೆಂದರೆ ಇಲ್ಲಿ ಕೃಷ್ಣಲೀಲೆಯಿಲ್ಲ.

**ಅಧ್ಯಾಯ ೩—**

ಶ್ಲೋಕ ೧--೨. ಕಂಸನು ಪ್ರಲಂಬ, ಚಾಣೂರ ಮುಂತಾದವರಿಂದ ಕೂಡಿಕೊಂಡು ಯಾದವರನ್ನು ಪೀಡಿಸಹತ್ತುವನು. ಕಾರಣ ಯಾದವರು ಕುರು, ಪಾಂಚಾಲ ದೇಶಗಳಿಗೆ ಹೋಗುವರು. ಇದು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಶ್ಲೋಕ ೩ರಿಂದ ೧೫ ಕಂಸನಿಂದ ಯಾದವರು ಪೀಡಿತರಾದ ದ್ದನ್ನು ಕಂಡು ಭಗವಂತನು ಯೋಗಮಾಯೆಗೆ "ನೀನು ದೇವಕಿಯಲ್ಲಿ ಬೆಳೆ ಯುತ್ತಿರುವ ಶಿಶುವನ್ನು ರೋಹಿಣಿಯಲ್ಲಿ ತಂದು ಇರಿಸು. ಆ ಶಿಶುವಿಗೆ ಬಲ ರಾಮನೆಂದು ಹೆಸರು ಇರಲಿ. ಇದರಿಂದ ನಿನಗೆ ಕುಮುದಾ, ಚಂಡಿಕಾ

ದುರ್ಗಾ, ವೈಷ್ಣವಿ ಮುಂತಾದ ಹೆಸರುಗಳು ಪ್ರಾಪ್ತವಾಗುವವು. ನೀನು ಯಶೋದೆಯ ಗರ್ಭದಲ್ಲಿ ಜನಿಸು, ನಾನು ದೇವಕಿಯ ಗರ್ಭದಲ್ಲಿ ಜನಿಸುತ್ತೇನೆ." ಎಂದು ಹೇಳುವನು. ಇತ್ತ ಮಥುರೆಯಲ್ಲಿ 'ಗರ್ಭಸ್ರಾವ' ಎಂದು ಜನರು ಆಕ್ರೋಶಿಸುವರು. ಈ ಸಂಗತಿಗಳು ಶ್ರೀಪ್ರಸನ್ನ ವೆಂಕಟರ ಭಾಗವತದಲ್ಲಿ ಇಲ್ಲ.

ಶ್ಲೋಕ ೧೬ ರಿಂದ ೨೩— ದೇವಕಿಯ ಗರ್ಭದಲ್ಲಿ ಭಗವಂತನ ಪ್ರವೇಶವಾದ ಕೂಡಲೇ ದೇವಕಿಗೆ ಕಳೆಯೇರಿತು. ಅದನ್ನು ಕಂಡು ಕಂಸನು ಗುಹೆಯಲ್ಲಿ ಮಲಗಿದ ಸಿಂಹದಂತೆ ತನ್ನ ವೈರಿಯು ದೇವಕಿಯ ಉದರದಲ್ಲಿ ಅಡಗಿದ್ದಾನೆ. "ಮೇ ಪ್ರಾಣಹರೋ ಹರಿರ್ಗುಹಾಂ ಧ್ರುವಂ ಶ್ರಿತಃ" ಎಂದುಕೊಂಡನು. "ಸ್ತ್ರೀಹತ್ಯೆ ಮಾಡದೆ ಕೃಷ್ಣನು ಉದಯಿಸಿದ ಕೂಡಲೆ ಅವನನ್ನು ಕೊಲ್ಲಬೇಕೆಂದು ವಿಚಾರ ಮಾಡಿದನು. ಆದರೆ ಕಂಸನಿಗೆ ಕುಳಿತಲ್ಲಿ, ನಿಂತಲ್ಲಿ, ಅಲೆದಾಡುವಲ್ಲಿ, ಎಲ್ಲೆಲ್ಲಿಯೂ ಕೃಷ್ಣನ ವಿಚಾರಗಳು ಬರಹತ್ತಿದವು. ಈ ಭಾಗವು ಪ್ರಸನ್ನ ವೆಂಕಟರ ಕೃತಿಯಲ್ಲಿ ಇಲ್ಲ.

ಶ್ಲೋಕ ೨೪ ರಿಂದ ೪೦— ಬ್ರಹ್ಮ, ಶಂಕರ, ನಾರದ ಮತ್ತು ಉಳಿದ ದೇವತೆಗಳು ದೇವಕಿಯ ಮುಂದೆ ನಿಂತು, ಪರಮಾತ್ಮನ ಸ್ತುತಿ ಮಾಡುವರು. ಸ್ತುತಿಯು ವಿಸ್ತಾರವಾಗಿದೆ. ಶ್ಲೋಕ ೪೧ ರಲ್ಲಿ ಅವರು ದೇವಕಿಗೆ ಹೇಳಿದ್ದೇನಂದರೆ, "ದೇವೀ, ನಿನ್ನ ಉದರದಲ್ಲಿ ಪರಮಾತ್ಮನು ಜನಿಸುವನು. ನೀನು ಭಯಪಡಬೇಡ." ಶ್ಲೋಕ ೪೨—೪೩. ಬಳಿಕ ದೇವತೆಗಳು ತಮ್ಮ ತಮ್ಮ ಲೋಕಕ್ಕೆ ಹೋಗುವರು. ದಾಸರ ಭಾಗವತದಲ್ಲಿ ಈ ಭಾಗವು ಇಷ್ಟು ವಿಸ್ತಾರವಾಗಿರದೆ, ಪುಟ ೮ ನುಡಿ ೬ರಲ್ಲಿ "ಹರಿಯಾಜ್ಞೆಯಿಂದ ದುರ್ಗಿಯು ಯಶೋದೆಯ ಉದರದಲ್ಲಿ ಸೇರಿದಳು. ಮತ್ತು ಹರಿಯು ದೇವಕಿಯ ಗರ್ಭದಲ್ಲಿ ಪ್ರವೇಶಗೈದನು." ಎಂದು ಹೇಳಿದೆ. ಪುಟ ೮ ನುಡಿ ೭ರಲ್ಲಿ ಕೃಷ್ಣನು ಶ್ರಾವಣ ಬಹುಳ ಅಷ್ಟಮಿ ತಿಥಿಯಲ್ಲಿ ಹುಟ್ಟಿದನೆಂದು ಪ್ರಚಲಿತವಿದ್ದ ಮಾತನ್ನು ದಾಸರು ಹೇಳಿದ್ದಾರೆ. ಈ ಸಂಗತಿಯು ಮೂಲ ಭಾಗವತದಲ್ಲಿದೆ. ಪುಟ ೯ ನುಡಿ ೯ರಲ್ಲಿ ಮಗುವನ್ನು ಕಂಡು ವಸುದೇವನು "ಸಹಸ್ರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನೆ"ಂದು ಹೇಳುವರು. ಮೂಲ ಭಾಗವತದಲ್ಲಿ ೧೦೦೦೦(ಅಯುತ) ಗೋವುಗಳನ್ನು ಕೊಡಲು ಸಂಕಲ್ಪಮಾಡಿದನೆಂದು ಹೇಳಿದೆ.

**ಅಧ್ಯಾಯ ೪—**

ಶ್ಲೋಕ ೧—೧೨ ರಲ್ಲಿ ಕೃಷ್ಣನ ಜನ್ಮವಾದ ಕೂಡಲೆ ಎಲ್ಲರಿಗೂ ಸಂತೋಷವಾಗುವದು. ಶುಭಯೋಗಗಳು ಕಂಡುಬರುವವು. ದೇವತೆಗಳು ಹೂವಿನ ಮಳೆಗರೆಯುವರು. ಪುಟ ೧೦, ಪದ ೫, ನುಡಿ ೧೨ರಲ್ಲಿ ಇದು ಬಂದಿದೆ. ಆದರೆ ಪದ ೫ರ ಪಲ್ಲವಿಯಲ್ಲಿ "ಶ್ರೀವಲ್ಲಭನುದಿಸಿದಾಕ್ಷಣದಿ ದುರ್ಗಾದೇವಿ ಹುಟ್ಟಿದಳು ಗೋಕುಲದಿ" ಎಂದು ಕಂಡುಬರುವದು. 'ಪದಗರ್ಭಂತು ಪಲ್ಲವಿ' ಎಂಬ ಸೂತ್ರವಿದ್ದು ನುಡಿ ೧ ರಿಂದ ೯ರ ವರೆಗೆ ಪಲ್ಲವಿಯಲ್ಲಿದ್ದ ಅರ್ಥವು ಒಂದೂ ನುಡಿಯಲ್ಲಿ ಕಂಡುಬರುವದಿಲ್ಲ, ಇಲ್ಲಿ ಪಲ್ಲವಿಯು ಇರಬೇಕಾದ ರೀತಿಯಲ್ಲಿ ಇಲ್ಲವೆಂಬುದನ್ನು ಗಮನಿಸಬೇಕು. ಶ್ಲೋಕ ೧೩—೨೨ರಲ್ಲಿ ವಸುದೇವನು ಕೃಷ್ಣನ ಸ್ತುತಿ ಮಾಡುತ್ತಾನೆ. ಇದು ವಿಸ್ತಾರವಾಗಿ ಇದೆ. ಇದು ದಾಸರ ಭಾಗವತದಲ್ಲಿ ಇಲ್ಲ.

ಶ್ಲೋಕ ೨೩ರಿಂದ ೩೧ — ಇದರಲ್ಲಿ ದೇವಕಿಯು ಕೃಷ್ಣನ ಸ್ತುತಿಮಾಡುವಳು. ಈ ಭಾಗವು ದಾಸರ ಕೃತಿಯಲ್ಲಿಲ್ಲ. ಇದಕ್ಕೆ ಕಾರಣವೇನಂದರೆ, ಕೃಷ್ಣನ ಬಾಲಲೀಲೆಯ ವರ್ಣನ ಮಾಡಬೇಕೆಂದು ಹೊರಟ ದಾಸರಿಗೆ ಇಂಥ ವಿಷಯದಲ್ಲಿ ತೊಡಗುವದು ಬೇಕಾಗಿಲ್ಲವೆಂದು ಕಾಣುತ್ತದೆ.

ಶ್ಲೋಕ ೩೨ರಿಂದ ೪೬ರಲ್ಲಿ ಕೃಷ್ಣನು ಹೇಳಿದ ಮಾತು— ವಸುದೇವ ದೇವಕಿಯರ ಪೂರ್ವವೃತ್ತಾಂತವನ್ನು ಹೇಳಿ, ತಮಗೆ ಭಯವಾಗುತ್ತಿದ್ದರೆ, ತನ್ನನ್ನು ಗೋಕುಲದಲ್ಲಿ ಇರಿಸಬೇಕು. ಈ ಭಾಗವು ದಾಸರ ಕೃತಿಯಲ್ಲಿ ಕಾಣುವದಿಲ್ಲ.

ಶ್ಲೋಕ ೪೭—೫೪ ಮತ್ತು ಪುಟ ೧೦, ೧೧ ಪದ ೫ ನುಡಿ ೩ ರಿಂದ ೬ ರಲ್ಲಿಯ ೩ ಪಾದಗಳವರೆಗೆ ಗೋಕುಲಕ್ಕೆ ಕೃಷ್ಣನ ಪ್ರಯಾಣ ವಿಷಯ ಬಂದಿದೆ. ಎರಡರಲ್ಲಿಯೂ ವರ್ಣನೆಯು ಸಮನಾಗಿದೆ. ಕೃಷ್ಣನನ್ನು ವಸುದೇವನು ಕರೆದುಕೊಂಡು ಹೋಗುವಾಗ್ಗೆ ಕಾರಾಗೃಹದ ದ್ವಾರಗಳು ತಾವಾಗಿಯೇ ತೆರೆಯುವವು. ಕಾವಲಿದ್ದವರಿಗೆ ಕಾವಳ ಕವಿಯಿತು. ಯಮುನೆಯು ದಾರಿ ಕೊಡುವಳು. ವಸುದೇವನು ಕೃಷ್ಣನನ್ನು ಯಶೋದೆಯಲ್ಲಿಟ್ಟು ದುರ್ಗೆಯನ್ನು ದೇವಕಿಗೆ ತಂದುಕೊಡುವನು. ಇಲ್ಲಿ ಇದನ್ನು ವಿವರಿಸಿದ ಕಾರಣವಿಷ್ಟೆ, ಕೃಷ್ಣನು ತನ್ನ ಬಾಲಲೀಲೆಯನ್ನು ಗೋಕುಲದಲ್ಲಿ ತೋರಿಸಿದನು. ಅಂತೆಯೇ

ಕೃಷ್ಣನನ್ನು ಗೋಕುಲದಲ್ಲಿ ಇರಿಸಿದ ಸಂಗತಿಯು ಪ್ರಸನ್ನ ವೆಂಕಟರ ಕೃತಿಯಲ್ಲಿ ಬಂದಿದೆ.

**ಅಧ್ಯಾಯ ೫.—**

ಶ್ಲೋಕ ೧—೩. ದೇವಕಿಯು ಹೆತ್ತಳೆಂದು ಕೇಳಿ, ಕಾರಾಗೃಹಕ್ಕೆ ಬಂದು ಕುಮಾರಿಯನ್ನು ಕಂಸನು ಎಳೆಯುವನು. ಈ ಸಂಗತಿಯು ಪ್ರಸನ್ನ ವೆಂಕಟರ ಭಾಗವತ ಪುಟ ೧೧ ನುಡಿ ೭ ಕೊನೆಯ ಪಾದ ಮತ್ತು ೭ ಇವರಲ್ಲಿ ಸರಿಯಾಗಿ ಬಂದಿದೆ. ಶ್ಲೋಕ ೩ ರಲ್ಲಿ "ಪ್ರಸ್ಖಲನ್ ಮುಕ್ತಮೂರ್ಧಜಃ" ಎಂದು ಇದ್ದು ಇವರ ಅನುವಾದವು "ಬಿಟ್ಟ ಮಂಡೆಯುಲೆದ್ದು ಬಲು ಲವಲವಿಕೆಯಿಂ" ಹೀಗೆ ಕಂಡುಬರುವದು. ಇದು ಎಷ್ಟು ಸುಂದರವಾಗಿ ಮತ್ತು ಸಹಜವಾಗಿ ಬಂದಿದೆಯೆಂಬುದನ್ನು ನೋಡಬಹುದು. ಶ್ಲೋಕ ೪—೧೦, ಪುಟ ೧೧ ಪದ ೮, ೯ ರಲ್ಲಿ ದೇವಕಿಯು ಮಗುವನ್ನು ಕೊಲ್ಲಬೇಡವೆಂದು ಕಂಸನನ್ನು ಪ್ರಾರ್ಥಿಸುವುದು ಕಂಡುಬರುತ್ತದೆ. ಕಂಸನು ಶಿಶುವನ್ನು ಶಿಲೆಯ ಮೇಲೆ ಅಪ್ಪಳಿಸುವನು. ಅದು ಮೇಲೆ ಹಾರಿ ಹೋಗುವದು. ಈ ವಿಷಯ ಎರಡರಲ್ಲಿಯೂ ಸಮನಾಗಿದೆ.

ಶ್ಲೋಕ ೧೧, ೧೨ ಪುಟ ೧೨ ಪದ ೬ ನುಡಿ ೧, ೨ನೆಯದರಲ್ಲಿಯ ಮೊದಲಿನ ಎರಡು ಪಾದ ಇವುಗಳಲ್ಲಿಪ್ಪ ವಿಷಯವೇನಂದರೆ—"ನಿನ್ನ ಧ್ವಂಸಕ್ಕೆ ಕಾರಣನಾದ ನಿನ್ನ ವೈರಿಯು ಗೋಕುಲದಲ್ಲಿ ಬೆಳೆಯುತ್ತಿರುವನು" ಎಂಬ ದುರ್ಗೆಯ ನುಡಿಯು ಎರಡರಲ್ಲಿಯೂ ಸರಿಯಾಗಿದೆ.

ಶ್ಲೋಕ ೧೩. ದುರ್ಗೆಯು "ಬಹುನಾಮನಿಕೇತೇಷು ಬಹುನಾಮಾ ಬಭೂವ ಹ" ಆದ ಸಂಗತಿಯು ದಾಸರ ಭಾಗವತದಲ್ಲಿಲ್ಲ. ಶ್ಲೋಕ ೧೪-೨೪ ಪುಟ ೧೨ ಪದ ೬ ನುಡಿ ೨ರ ಮುಂದಿನ ೨ ಪಾದ ಮತ್ತು ೩ನೇ ಪಾದದಲ್ಲಿ ಹೇಳಿದಂತೆ ವಸುದೇವ ದೇವಕಿಯರ ಬಂಧವಿಮೋಚನೆ, ಆತನಿಗಾದ ಪಶ್ಚಾತ್ತಾಪವನ್ನು ವಿವರಿಸಿದೆ. ಆದರೆ ಕಂಸನ ಪಶ್ಚಾತ್ತಾಪದ ವಿಷಯವು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಶ್ಲೋಕ ೨೩ರಲ್ಲಿ ಹೇಳಿದ "ಅಶ್ರುಮುಖಃ ಪಾದೌ ಶಾಲಃ ಸ್ವಸೋ ರಥೋ ಗ್ರಹೀತ್" ಈ ಮಾತನ್ನು ದಾಸರು ಎತ್ತಿಲ್ಲ. ಪುಟ ೧೨ ಪದ ೬ ನುಡಿ ೪ರಲ್ಲಿ ಹೇಳಿದ "ಪ್ರೇರಕ ನೇಮಕ ಹರಿ ತಾನು । ಸೃಷ್ಟ್ಯಾರ ಪಾತಾರ ಹಂತಾರನು ॥" ಈ ಭಾಗದಲ್ಲಿಲ್ಲ. ದೇವರ ಕರ್ತೃತ್ವಶಕ್ತಿ ಎಷ್ಟೆಂಬ

ದನ್ನು ಸ್ವಲ್ಪದರಲ್ಲಿ ಮತ್ತು ಮನಸಕ್ಕೆ ಅರಿಕೆಯಾಗುವಂತೆ ದಾಸರು ಹೇಳಿದ್ದಾರೆ. ಶ್ಲೋಕ ೨೪—೪೨ ಇವುಗಳಲ್ಲಿ ಹೇಳಿವ ಮಾತೆಂದರೆ, ಕಂಸನು ತನ್ನ ಮಂತ್ರಿಗಳನ್ನು ಕರೆಯಿಸುವನು. ಆಕಾಶವಾಣಿಯನ್ನು ವಿವರಿಸುವನು. ಅವರವರಲ್ಲಿ ದೀರ್ಘವಾದ ಆಪ್ತಾಲೋಚನೆ ನಡೆಯುವದು. ಈ ೧೮ ಶ್ಲೋಕಗಳಲ್ಲಿದ್ದ ವಿಷಯುವನ್ನು ಪ್ರಸನ್ನ ವೆಂಕಟರು ಪುಟ ೧೨—೧೩ ನುಡಿ ೫ರ ಕೊನೆಯ ೨ ಪಾದಗಳಲ್ಲಿ ಮತ್ತು ೬ನೆಯ ನುಡಿಯಲ್ಲಿ ಹೇಳಿದ್ದಾರೆ. ಇದರಿಂದ ದುಷ್ಟರ ದುರುಳತನವು ಎಷ್ಟಿರುವದೆಂಬುದು ತಿಳಿಯುದೆ ಹೋಗಿ, ಪಾತ್ರಗಳ ವ್ಯಕ್ತಿತ್ವವು ಎದ್ದು ಕಾಣದಂತಾಗಿದೆ. ಕಂಸನ ಮತ್ತು ಮಂತ್ರಿಗಳ ಪಾತ್ರಪೋಷಣೆಗೆ ಇಲ್ಲಿ ಸಾಕಷ್ಟು ಲಕ್ಷ್ಯವನ್ನು ಪೂರೈಸಿಲ್ಲವೆಂದು ಹೇಳಬೇಕಾಗುತ್ತದೆ. ಇದರಿಂದ ಸಮಗ್ರ ಗ್ರಂಥದ ಗುಣಕ್ಕೆ ಬಾಧೆ ಏನೂ ಇಲ್ಲ.

ಶ್ಲೋಕ ೪೩—೪೬ ರಲ್ಲಿ ಕಂಸನ ಆಜ್ಞೆಯಂತೆ ರಾಕ್ಷಸರು ಗೋ, ಬ್ರಾಹ್ಮಣ ಮತ್ತು ಸಾಧು ಸಜ್ಜನರನ್ನು ನಾಶಗೊಳಿಸಲು ಉದ್ಯುಕ್ತರಾಗುವರು. ಇದು ದಾಸರ ಭಾಗವತದಲ್ಲಿಲ್ಲ.

**ಅಧ್ಯಾಯ ೬.—**

ಶ್ಲೋಕ ೧, ೨, ಪುಟ ೧೩ ಪದ ೬. ನುಡಿ ೮ ರಿಂದ ೧೧ ಇಲ್ಲಿ "ನಂದನ ರಾಣಿಗೆ ಶಿಶು ಆದಕೂಡಲೇ ದೇವತೆಗಳು ಹೂವಿನ ಮಳೆಗರೆಯುವರು. ನಂದನು ಬ್ರಾಹ್ಮಣರಿಗೆ ಗೋ, ಹಿರಣ್ಯ, ರತ್ನ ಮುಂತಾದವುಗಳನ್ನು ದಾನ ಮಾಡುವನು. ಇದು ಇಬ್ಬರಲ್ಲಿಯೂ ಸಮನಾಗಿದೆ. ಆದರೆ ನಂದನು ದಾನ ಮಾಡಿದ "ಸಪ್ತ ತಿಲಾದ್ರೀನ್" ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಶ್ಲೋಕ ೩-೧೭, ಪುಟ ೧೪ ನುಡಿ ೧೨-೧೪ ರಲ್ಲಿ ಗೋಪಗೋಪಿಯರ ವರ್ಣನೆಯಿದೆ. ಅವರು ಧರಿಸಿದ ವಸ್ತ್ರಾಭರಣಗಳ ವರ್ಣನೆ ಸಮನಾಗಿದೆ. ಆದರೆ ಮೂಲಭಾಗವತದಲ್ಲಿದ್ದ ವಂದಿ ಮಾಗಧರ ವರ್ಣನೆ ದಾಸರ ಭಾಗವತದಲ್ಲಿಲ್ಲ. ದಾಸರು ಅನಾವಶ್ಯಕ ವಿಷಯಗಳನ್ನು ತೆಗೆದುಹಾಕಿದ್ದಾರೆ. ಮತ್ತು ಅಂತಹದರಲ್ಲಿ ಕಾಲ ಕಳೆಯುವದು ಅವರಿಗೆ ಬೇಡ.

ಶ್ಲೋಕ ೧೮—೨೭ರಲ್ಲಿ ನಂದನು ಕಂಸನಿಗೆ ಕಪ್ಪವನ್ನು ತಂದು ಒಪ್ಪಿಸುವನು. ವಸುದೇವನು ನಂದನನ್ನು ಕಾಣುವನು. ಇವರಿಬ್ಬರಲ್ಲಿ ಗೃಹಕೃತ್ಯಗಳ ಬಗ್ಗೆ ಮಾತುಗಳಾಗುವವು. ಧರ್ಮ, ಅರ್ಥ, ಕಾಮ, ಮೋಕ್ಷಗಳ ಬಗ್ಗೆ

ಇಬ್ಬರಲ್ಲಿ ವಿಚಾರ ನಡೆಯುವದು. ಪುಟ ೧೪ ನುಡಿ ೧೫ ರಲ್ಲಿ ದಾಸರು ಧರ್ಮಾರ್ಥಕ್ಕೆ ಕೈ ಹಾಕದೆ ಕೇವಲ ಕಂಸನಿಗೆ ನಂದನು ಕಪ್ಪವನ್ನು ತಂದನು. ಮತ್ತು ವಸುದೇವನನ್ನು ಕಂಡನು ಎಂದು ಹೇಳಿದ್ದಾರೆ.

ಶ್ಲೋಕ ೨೮-೨೯ ರಲ್ಲಿ ನಂದನು ದುಃಖವಾದದ್ದನ್ನು ಮರೆಯಲು ವಸುದೇವನಿಗೆ ಹೇಳಿದ ಸಂಗತಿಯು ದಾಸರ ಕೃತಿಯಲ್ಲಿಲ್ಲ. ಶ್ಲೋಕ ೩೦—೩೧. ವಸುದೇವನು ಉತ್ಪಾತದ ಸಂಗತಿಯನ್ನು ನಂದನಿಗೆ ಹೇಳಿದ ವಿಷಯು, ಪುಟ ೧೪ ನುಡಿ ೧೬ರಲ್ಲಿ ಇದೆ. ಆದರೆ "ಯಮುನ ತಂಗಿಯ ತೀರಕೆ ಬಂದ" ಎಂಬ ಮಾತು ಮೂಲದಲ್ಲಿರದೆ ಗೋಕುಲದ ಕಡೆಗೆ ನಂದನು ಹೊರಟನೆಂದ ಹೇಳಿದೆ.

**ಅಧ್ಯಾಯ ೬.—**

ಈ ಅಧ್ಯಾಯದಿಂದ ಕೃಷ್ಣನ ಬಾಲಲೀಲೆಗೆ ಪ್ರಾರಂಭವಾಗುವದು. ಶ್ಲೋಕ ೧—೧೮ ಪೂತನೆಯು ಸುಂದರ ರೂಪವನ್ನು ಧರಿಸಿ, ಕೃಷ್ಣನಿಗೆ ಸ್ತನ ಪಾನ ಮಾಡಿಸುವಳು. ಕೃಷ್ಣನು ಸ್ತನವನ್ನು ಹೀರುವ ಕಾಲಕ್ಕೆ ಅವಳ ಪ್ರಾಣವನ್ನು ಹರಣಮಾಡುವನು. ಎಂಬ ವಿಷಯವು ಮೂಲದಲ್ಲಿ ವಿಸ್ತಾರವಾಗಿದ್ದು ಪುಟ ೧೪-೧೫ ನುಡಿ ೧೭-೧೯ ರ ವರೆಗಿನ ೩ ನುಡಿಗಳಲ್ಲಿ ದಾಸರು ಈ ಸಂಗತಿಯನ್ನು ವಿವರಿಸಿದ್ದಾರೆ. ದಾಸರು ಕೃಷ್ಣಲೀಲೆಯ ವರ್ಣನೆ ಮಾಡುವದಕ್ಕೆ ಹೊರಟಾಗ ಇದನ್ನು ಏಕೆ ವಿಸ್ತಾರವಾಗಿ ಕೊಡಲಿಲ್ಲ, ಎಂಬ ಮಾತು ಒಡೆಯುದ ಒಗಟವಾಗಿದೆ. ಶ್ಲೋಕ ೧೯-೩೧ ಶ್ರೀಕೃಷ್ಣನಿಗೆ ರಕ್ಷಾಬಂಧನವು ಇಲ್ಲಿದೆ. ಆದರೆ ಪ್ರಸನ್ನ ವೆಂಕಟರು ಪುಟ ೧೬ ಪದ ೬ ನುಡಿ ೩ರಲ್ಲಿ "ಪುತ್ರಂಗೆ ಗವ್ಯಾವೃತದಲಿ ಸೇಚಿ | ಸುತ್ತ ಗೋಖುರ ಪಾಂಸು ಇಟ್ಟ ಫಣಿಯಲ್ಲಿ |" ಎಂದು ಹೇಳಿದ್ದಾರೆ. ಶ್ಲೋಕ ೩೨-೪೩ ರಲ್ಲಿ ಪೂತನೆಯ ದಹನ ಮತ್ತು ಅವಳಿಗೆ ಸದ್ಗತಿ ದೊರೆಯುವ ಕಾರಣವನ್ನು ಹೇಳಿವೆ. ಆದರೆ ದಾಸರು ಪುಟ ೧೬ ಪದ ೬ ನುಡಿ ೫ ರಲ್ಲಿ "ರಕ್ಕಸಿಗಗ್ನಿಯ ಕೊಡಲು ಆಕೆ | ಯಕ್ಕಾಯ ಧೂಮಾಮೋದವಾಗಿರಲು ||" ಎಂದು ಹೇಳಿ ನಿಂತಿದ್ದಾರೆ. ಉಳಿದ ವರ್ಣನೆ ಮಾಡಿಲ್ಲ. ಪ್ರಾಸದ ಸಲುವಾಗಿ "ಕ್ಕಾಯ" ಎಂದು ಸಂಯುಕ್ತಾಕ್ಷರವನ್ನು ಇಟ್ಟಿದ್ದಾರೆ. ದಾಸರೂ ಪ್ರಾಸಕ್ಕೆ ಮನಸೋತಿದ್ದಾರೆ. ಶ್ಲೋಕ ೪೪—೪೫ ಪೂತನೆಯಿಂದ

ಕೃಷ್ಣನು ಉಟಿದ ಬಗ್ಗೆ ನಂದನಿಗೆ ಅತ್ಯಾನಂದವಾಗುವದು. ಮಗುವಿಗೆ ಚುಂಬನ ಕೊಟ್ಟು ತಲೆಯನ್ನು ಆಘ್ರಾಣಿಸುವನು. ಆದರೆ ಪ್ರಸನ್ನ ವೆಂಕಟರು ತಂದೆಯಲ್ಲಿದ್ದ ಮೋಹವನ್ನೇ ಮರೆತುಬಿಟ್ಟಿದ್ದಾರೆ.

## ಅಧ್ಯಾಯ ೮—

ಶ್ಲೋಕ ೧–೪ ಪರೀಕ್ಷಿತರಾಜನು ಶುಕಮುನಿಗಳಿಗೆ ಕೃಷ್ಣನ ಬಾಲಲೀಲೆಯನ್ನು ವರ್ಣಿಸಲು ಪ್ರಾರ್ಥಿಸುವನು. ಇದು ದಾಸರ ಕೃತಿಯಲ್ಲಿಲ್ಲ. ಪುಟ ೧೭ ೧೯ರಲ್ಲಿದ್ದ ಜೋಗುಳ ಪದವು ಮೂಲ ಭಾಗವತದಲ್ಲಿಲ್ಲ. ಪುಟ ೧೭ರಲ್ಲಿ ಹೇಳಿದ "ಪುತ್ರಂಗೆ ಎರಡಾನೆಯ ದಿನ, ಗೋಪಿ । ಮುತ್ತೈದೆಯರ ಕರೆದ ಳಾದಿನ ॥" ಈ ಮಾತನ್ನು ನೋಡಿದರೆ ಪ್ರಸನ್ನ ವೆಂಕಟದಾಸರ ಕಾಲದಲ್ಲಿ ೧೨ನೆಯ ದಿನ ಮುತ್ತೈದೆಯರನ್ನು ಕರೆಯುವ ನಡತೆಯು ಪ್ರಚಾರದಲ್ಲಿತ್ತೆಂದು ಕಾಣುತ್ತದೆ. ಶ್ಲೋಕ ೫–೧೯ ಶಕಟಾಸುರನ ವಧೆ. ಇದನ್ನು ದಾಸರು ಹೇಳಿದ್ದಾರೆ. ಶ್ಲೋಕ ೨೦–೩೯, ಪುಟ ೨೩–೨೪, ನುಡಿ ೫–೯ರ ವರೆಗೆ ತೃಣಾವರ್ತನ ವಧೆಯ ಬಗ್ಗೆ ಹೇಳಿದ್ದಾರೆ. ಇಲ್ಲಿಯೂ ಕೃಷ್ಣನ ಅಗಾಧ ಶಕ್ತಿಯನ್ನು ದಾಸರು ವರ್ಣಿಸಿದ್ದಾರೆ. ಶ್ಲೋಕ ೨೬ರಲ್ಲಿ ಯಶೋದೆಯು "ಮೃತವತ್ಸಕಾ ಯಥಾ ಗೌಃ ।" ಎಂಬಂತೆ ನೆಲಕ್ಕೆ ಬಿದ್ದಳು ಎಂದು ಹೇಳಿದರೆ, ದಾಸರು ಪುಟ ೨೪, ನುಡಿ ೭ರಲ್ಲಿ "ವನವಿಲ್ಲದ ಮೀನದಂತಾವು ವತ್ಸ । ವನು ಕಾಣದಂತೆ ಮರುಗಿದಳತ್ಯಂತ ॥" ಎಂಬ ಸುಂದರವಾದ ಮತ್ತು ಸಮಯಕ್ಕೆ ಸರಿಯಾದ ಹೋಲಿಕೆಯನ್ನು ಕೊಟ್ಟಿದ್ದಾರೆ. ಇದರಿಂದ ದಾಸರು ಕೇವಲ ಅನುವಾದಕರಾಗಿರದೆ, ಪ್ರತಿಭಾವಂತರೂ ಎಂದು ಹೇಳಬಹುದು.

## ಅಧ್ಯಾಯ ೯—

ಶ್ಲೋಕ ೧-೨೦ ಯಾದವರ ಪುರೋಹಿತರಾದ ಗರ್ಗರು ನಂದನ ಕಡೆಗೆ ಬರುತ್ತಾರೆ. ಬಾಲಕರ ನಾಮಕರಣ ಮಾಡಬೇಕೆಂದು ಗರ್ಗಾಚಾರ್ಯರು ನಂದನಿಂದ ಬಿನ್ನವಿಸಿಕೊಳ್ಳುತ್ತಾರೆ. ಅದಕ್ಕೆ ಆಚಾರ್ಯರು ಒಪ್ಪುವದಿಲ್ಲ. ಏಕೆಂದರೆ ತಾವು ಯಾದವರ ಗುರುಗಳು. ನಾಮಕರಣದ ಸಂಗತಿಯು ಕಂಸನಿಗೆ ತಿಳಿದರೆ ಅನರ್ಥವಾಗುವದು. ನಂದನು ಮತ್ತೆ ಪ್ರಾರ್ಥಿಸುತ್ತಾನೆ. ಬಳಿಕ ಆಚಾರ್ಯರು ನಾಮಕರಣ ಮಾಡಬೇಕೆಂದು ಹೇಳಿ ನಂದನಿಗೆ ತಿಳುಹಿ

ಸಿದ್ದೇಸಂದರೆ, "ವಾಸುದೇವನು ನಿನ್ನ ಮಗನಲ್ಲ, ಈತನು ನಾರಾಯಣ ಸಮಾನನು. ಈತನನ್ನು ಪಾಲಿಸು." ಆಮೇಲೆ ಆಚಾರ್ಯರು ಹೊರಟು ಹೋಗುತ್ತಾರೆ. ಆದರೆ ಪುಟ ೨೫-೨೬, ಪದ ೧೨, ನುಡಿ ೪ರಿಂದ ೭ ಇವು ಗಳಲ್ಲಿ ಗರ್ಗರು ಬರುತ್ತಾರೆ, ಮತ್ತು "ನಿನ್ನ ಮಗನು ಸಾಕ್ಷಾತ್ ವಿಷ್ಣು. ಈತನಿಂದ ಸರ್ವಭೂತಕ್ಕೆ ಸೃಷ್ಟಿ" ಎಂದು ಹೇಳಿ ಹೋಗುತ್ತಾರೆ. ಪುಟ ೧೭ರಲ್ಲಿವ್ವ ಜೋಗುಳ ಪದದಲ್ಲಿ ನಾಮಕರಣವಾಗಿದೆ. ಪುಟ ೨೬, ನುಡಿ ೭ರ ಕೊನೆಯ ೨ನೇ ಪಾದದಲ್ಲಿಯ "ಈತೆರನುಪದೇಶಿಸಿ ನಡೆದಾ । ಆತುರದಲಿ ತನ್ನ ಸ್ಥಾನಕೆ ಹೋದ ॥" ಈ ನುಡಿಯನ್ನು ಆಲಿಸಿದರೆ, ಅನ್ಯರಿಂದ ಪ್ರೇರಿತ ನಾಗಿ ಬಂದು, ಕಾರ್ಯವನ್ನು ಕೊನೆಗಾಣಿಸಿ, ಬಂದ ದಾರಿಯಿಂದ ತಿರುಗಿ ಹೋದನೆಂಬ ಭಾವವು ವ್ಯಕ್ತವಾಗುವದು.

ಶ್ಲೋಕ ೨೧-೩೧, ಪುಟ ೨೬-೨೯ರ ವರೆಗೆ ಪದ ೧೩, ನುಡಿ ೧-೧೫, ಇಲ್ಲಿ ಬಾಲಲೀಲೆಯ ವರ್ಣನೆಯು ಸಮನಾಗಿದೆ. ಈ ಮೇಲಿನ ಪದದಲ್ಲಿ ದಾಸರು ತಮ್ಮ ಕೌಶಲ್ಯವನ್ನು ತೋರಿಸಿದ್ದಾರೆ. ಪುಟ ೨೭, ನುಡಿ ೮ರಲ್ಲಿ "ತನುಮನ ಸೂರಿಯು ಕ್ಷಣಕ್ಷಣಕಿತ್ತರು । ವನಜನಾಭನ ಪದರತರು ॥" ಎಂದು ಹೇಳಿದೆ. ಪದರತರು ತಮ್ಮ ತನುಮನವನ್ನು ಕೃಷ್ಣನಲ್ಲಿ ಇಡಲು ಎಷ್ಟು ಉತ್ಸುಕರಾಗಿದ್ದಾರೆಂಬುದನ್ನು ಶಬ್ದದಿಂದ ದಾಸರು ಸರಿಯಾಗಿ ವರ್ಣಿಸಿ ದ್ದಾರೆ. ಪುಟ ೨೮, ನುಡಿ ೧೦ "ಪಟ್ಟಸಾಲಿಯಲಿ ದಟ್ಟಸಾಲಿಕ್ಕಿಸಿ । ದಟ್ಟಡಿ ನೋಡಿ ಹಿಗ್ಗುವಳು ॥" ಇಲ್ಲಿ ಪ್ರಾಸವು ಹೇಗೆ ಸಮನಾಗಿ ಬಂದಿ ದೆಂಬುದನ್ನು ನೋಡಬಹುದು. ಶ್ಲೋಕ ೩೨-೪೭ರ ವರೆಗೆ ಕೃಷ್ಣನ ಅಚಿಂತ್ಯ ಮಹಿಮೆ ಮತ್ತು ಯಶೋದೆಯ ಚಿಂತೆ, ಇವು ದಾಸರ ಕೃತಿಯಲ್ಲಿಯ ಪುಟ ೩೯-೪೦, ಪದ ೧೮, ನುಡಿ ೧-೯ರಲ್ಲಿ ವರ್ಣಿತವಾಗಿವೆ. ವರ್ಣನೆಯು ಚನ್ನಾ ಗಿದೆ. ಶ್ಲೋಕ ೪೮-೫೨ ಇಲ್ಲಿ ನಂದ ಮತ್ತು ಯಶೋದೆಯ ಪೂರ್ವ ವೃತ್ತಾಂತವಿದ್ದು, ದಾಸರ ಕೃತಿಯಲ್ಲಿ ಇದು ಬಂದಿಲ್ಲ. ಪುಟ ೨೯, ಪದ ೧೪, ನುಡಿ ೧-೩ ಇದೊಂದು ಜೋಗುಳದ ಪದವು. ಇದು ಭಾಗವತದಲ್ಲಿಲ್ಲ. ಪುಟ ೩೩-೩೮, ಪದ ೧೭, ನುಡಿ ೧ರಿಂದ ೨೭ ಇಲ್ಲಿ ಕೃಷ್ಣನ ಉಪಟಳದ ಬಗ್ಗೆ ಹೇಳಿದೆ. ಕೃಷ್ಣನ ಕಾಟಕ್ಕೆ ಬೇಸತ್ತು ಗೋಪಿಯರು ನುಡಿದ ನುಡಿಗಳಿವು. ನುಡಿ ೭-೧೦ರಲ್ಲಿ ಅಂತ್ಯಪ್ರಾಸವನ್ನು ನೋಡಬಹುದು.

**ಅಧ್ಯಾಯ ೧೦—**

ಶ್ಲೋಕ ೧-೨೩ ಯಶೋದೆಯು ಮೊಸರು ಕಡೆಯುತ್ತಾಳೆ. ಅವಳ ದೇಹದ ಮತ್ತು ಆಭರಣಗಳ ವರ್ಣನೆಯು ಕಂಡುಬರುವದು. ಕೃಷ್ಣನು ಸ್ತನ ಪಾನ ಬೇಡಲು, ಯಶೋದೆಯು ಕೊಡುವಳು. ಅದೇ ಕಾಲಕ್ಕೆ ಹಾಲು ಉಕ್ಕುವುದು. ಅದಕ್ಕೆ ನೀರು ಹಾಕಲು ಕೃಷ್ಣನನ್ನು ಕೆಳಗಿಳಿಸಿ ಹೋಗುವಳು ಕೃಷ್ಣನು ಸಿಟ್ಟಿಗೆದ್ದು, ಮೊಸರ ಗಡಿಗೆಯನ್ನು ಒಡೆಯುವನು. ತಾಯಿಯು ಕೋಲು ತೆಗೆದುಕೊಂಡು ಆತನನ್ನು ಹೊಡೆಯಲು ಹೋಗುವಳು. ಮೊದಲು ಕೃಷ್ಣನು ಸಿಗುವದಿಲ್ಲ. ಆಮೇಲೆ ಸಿಗುವನು. ಆಗ ಯಶೋದೆಯು ಆತ ನನ್ನು ಒರಳುಕಲ್ಲಿಗೆ ಹಗ್ಗದಿಂದ ಕಟ್ಟುವಳು. ನಾರದರ ಶಾಪದಿಂದ ನಲಕೂಬರ ಮತ್ತು ಮಣಿಗ್ರೀವರು ಮತ್ತಿಯ ವೃಕ್ಷದ ರೂಪದಿಂದ ಇರುವರು. ಕೃಷ್ಣನು ಅಲ್ಲಿಗೆ ಹೋಗಿ, ಒರಳಿನಿಂದ ವೃಕ್ಷವನ್ನು ನೆಲಕ್ಕುರುಳಿಸುವನು. ನಲಕೂಬರ ಮತ್ತು ಮಣಿಗ್ರೀವರು ಎದ್ದು ಬರುವರು. ಅವರಿಗೆ ಮುಕ್ತಿಯಾಗುವದು. ಈ ಭಾಗವು ಪ್ರಸನ್ನ ವೆಂಕಟರ ಕೃತಿಯಲ್ಲಿ ಪುಟ ೪೧-೪೫, ಪದ ೧೯, ೨೦ ಮತ್ತು ೨೧ರಲ್ಲಿ ವರ್ಣಿತವಾಗಿದೆ. ಮೂಲ ಭಾಗವತದಲ್ಲಿ " ತನ್ನ ಮನೆಯ ಹಗ್ಗವು ಸಾಲದೆ ಇದ್ದದ್ದರಿಂದ ನೆರೆಮನೆಯ ಹಗ್ಗವನ್ನು ಯಶೋದೆಯು ತರು ವಳು " ಎಂದು ಹೇಳಿದೆ. ಆದರೆ ದಾಸರು ಪುಟ ೪೪, ಪದ ೨೧, ನುಡಿ ೨ರಲ್ಲಿ " ಯಥೇಷ್ಟ ಕಣ್ಣಿಗಳಿಂದ " ಎಂದು ಪ್ರಯೋಗ ಮಾಡಿದ್ದಾರೆ.

**ಅಧ್ಯಾಯ ೧೧—**

ಶ್ಲೋಕ ೧ ಕುಬೇರಪುತ್ರರಿಗೆ ನಾರದರು ಶಾಪ ಕೊಡಲು ಕಾರಣ ಗಳೇನು? ಅವರ ಉದ್ಧಾರ ಹೇಗಾಯಿತು? ಮತ್ತು ಕುಬೇರಪುತ್ರರು ಕೃಷ್ಣನನ್ನು ಸ್ತುತಿಸಿದ ಸಂಗತಿಯು, ಆಮೇಲೆ ಕೃಷ್ಣನು ಅವರ ಕೂಡ ಆಡಿದ ಮಾತುಗಳು ಇದ್ದು, ಇವನ್ನು ದಾಸರು ಎತ್ತಿಲ್ಲ. ಒಂದು ವಿಷಯದ ಉತ್ಪತ್ತಿ ಕಾರಣ ಮುಂತಾದ ಪೌರಾಣಿಕ ಸಂಗತಿಗಳು ಬೇಡವೆಂದೋ ಏನೋ ಪ್ರಸನ್ನ ವೆಂಕಟದಾಸರು ಇದನ್ನು ವರ್ಣಿಸಿಲ್ಲವೆಂದು ಕಾಣುತ್ತದೆ.

**ಅಧ್ಯಾಯ ೧೨—**

ಶ್ಲೋಕ ೧-೬ ಅರ್ಜುನ ಗಿಡಗಳು ಬಿದ್ದುದನ್ನು ಕಂಡು ಗೋಪಾಲ ಕರು ನೋಡಲು ಬರುವರು. ಅವರಲ್ಲಿ ಕೆಲವರು, " ಇದು ಕೃಷ್ಣನ ಕೃತಿ "

ಯೆನ್ನುವರು. ಕೆಲವರು, "ಇದು ಕೃಷ್ಣನಿಗೆ ಸಾಧ್ಯವಿಲ್ಲ"ಯೆನ್ನುವರು. ನಂದನು ಬಂದು, ಕೃಷ್ಣನ ಕಣ್ಣಿಯನ್ನು ಬಿಚ್ಚುವನು. ಪ್ರಸನ್ನ ವೆಂಕಟರಿಗೆ ಇದು ಬೇಕಿಲ್ಲ. ಕಾರಣ ಇಲ್ಲಿ ಕೃಷ್ಣನ ಲೀಲೆಯಿಲ್ಲ. ಅರ್ಜುನ ಗಿಡ ಗಳ ರೂಪಿಯಾದ ನಲಕೂಬರ ಮತ್ತು ಮಣಿಗ್ರೀವರು ಮುಕ್ತಿಯನ್ನು ಹೊಂದುವರು.

ಶ್ಲೋಕ ೭-೯ ಕೃಷ್ಣನು ಕುಣಿದಾಡಿ, ತನ್ನ ಬಾಲಲೀಲೆಯಿಂದ ಜ್ಞಾನಿ ಗಳಿಗೆ, ತಾನು ಭಕ್ತಾಧೀನನೆಂದು ಪ್ರಕಟಗೊಳಿಸಿ, ಗೋಪಾಲಕರಿಗೆ ಆನಂದ ಪಡಿಸುವನು. ಸಾಮಾನ್ಯರು ಅದರಲ್ಲಿ ಆನಂದಪಡುವರು. ಇದು ಕೂಡ ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಶ್ಲೋಕ ೧೦-೧೯ ಗೋಪವೃದ್ಧರಿಗೆ ಪೀಡೆ ಯಾಗುವದು. ಗೋಪನಂದನು ಕೃಷ್ಣನಿಗೆ ಆದ ಬಾಧೆಯನ್ನು ವಿವರಿಸಿದನು. ಮತ್ತು ತಾನಿದ್ದ ಸ್ಥಳದಲ್ಲಿ ಉತ್ಪಾತಂಗಳು ಸಂಭವಿಸಹತ್ತಿವೆ. ಈ ಸ್ಥಳವನ್ನು ಬಿಟ್ಟು ಗೋಕುಲಕ್ಕೆ ಹೋಗುವದು ಒಳಿತು. ಎಂದು ಗೋಪನಂದನು ಉಪ ದೇಶ ಮಾಡುವನು. ಇದಕ್ಕೆ ಎಲ್ಲರೂ ಒಪ್ಪುವರು.

ಶ್ಲೋಕ ೨೦-೨೮ ರಾಮಕೃಷ್ಣರು ಯಮುನೆಗೆ ಹೋಗುತ್ತಾರೆ. ಅವರ ಹುಟ್ಟಿದ ದಿವಸವೆಂದು ರೋಹಿಣಿಯು ಅವರನ್ನು ಕರೆಯಲು ಹೋಗುತ್ತಾಳೆ. ಅವರು ಬರುದದಿಲ್ಲ. ಇದು ದಾಸರ ಕೃತಿಯಲ್ಲಿಲ್ಲ. ಯಶೋದೆಯು ಯಮುನೆಗೆ ಹೋಗಿ ಅವರನ್ನು ಸಂತಯಿಸಿ, ಕರೆದುಕೊಂಡು ಬರುತ್ತಾಳೆ. "ಇಂದು ನಿಮ್ಮ ಹುಟ್ಟು ಹಬ್ಬ. ಸ್ನಾನ ಮಾಡಿರಿ, ಆಕಳುಗಳನ್ನು ದಾನ ಮಾಡಿರಿ, ಬ್ರಾಹ್ಮಣ, ಹಿರಿಯರ ಕೂಡ ಊಟ ಮಾಡಿರಿ" ಎಂದು ಅಂದ ಯಶೋದೆಯು ನುಡಿಯು ದಾಸರ ಕೃತಿಯಲ್ಲಿ ಪುಟ ೪೫, ಪದ ೨೨, ನುಡಿ ೧-೫ರಲ್ಲಿ ಬಂದಿದೆ. ಆದರೆ ೨೨ನೆಯ ಪದದ ಪಲ್ಲವಿಯಲ್ಲಿದ್ದ "ತೊರೆದ ಮೊಲೆಯಿಂದ ಕರೆದಳು ಕಂದನ:......ಗೋಪೆಮ್ಮ" ಮತ್ತು ಅನುಪಲ್ಲವಿಯಲ್ಲಿದ್ದ "ಪರಮ ಲೋಭಿಗೆ ಧನ ದೊರಕಿದಂತೆ ತಾನೊಂ। ದರಗಳಿಗೆಯು ಬಿಟ್ಟಿರಲಾರಳಮ್ಮ ॥" ಎನ್ನುವ ಮಾತು ದಾಸರ ಕೃತಿಯಲ್ಲಿ ಇದ್ದಂತೆ, ಮೂಲ ಭಾಗವತದಲ್ಲಿಲ್ಲ. ಅನುಪಲ್ಲವಿ ಯಲ್ಲಿಯ ಹೋಲಿಕೆಯು ಎಷ್ಟು ಸಹಜವಾಗಿ ದಾಸರ ಕೃತಿಯಲ್ಲಿ ಬಂದಿದೆ ಯೆಂಬುದನ್ನು ನೋಡಬಹುದು.

ಶ್ಲೋಕ ೨೯-೪೦ ನಂದನು "ಎಲ್ಲರೂ ಬೇಗನೆ ವೃಂದಾವನಕ್ಕೆ ಹೋಗು

ವದು ” ಎಂದು ಹೇಳುವನು. ಈ ಮಾತಿಗೆ ಎಲ್ಲರೂ ಒಪ್ಪಿ, ಎಲ್ಲ ಶಕಟಗಳನ್ನು ಶೃಂಗರಿಸಿ, ಆಕಳುಗಳನ್ನು ತೆಗೆದುಕೊಂಡು ಹೊರಡುವರು. ಗೋಪಿಯರು ಶೃಂಗಾರದಿಂದ ಹೊರಡುವರು. ಯಶೋದೆ, ರೋಹಿಣಿಯರು ರಥದಲ್ಲಿ ಕುಳಿತು ಹೋಗುವರು. ವೃಂದಾವನಕ್ಕೆ ಹೋಗಿ ಎಲ್ಲ ಬಂಡಿಗಳನ್ನು ಚಂದ್ರಾಕೃತಿಯಾಗಿ ನಿಲ್ಲಿಸುವರು. ಆಮೇಲೆ ಕೆಲವರು ಕೊಳಲನ್ನೂದುವರು. ಕೆಲವರು ದನಗಾಯುವರು. ಈ ಸಂಗತಿಯನ್ನು ಪುಟ ೪೬—೪೯ ಪದ ೨೩ ನುಡಿ ೧—೯ರಲ್ಲಿ ದಾಸರು ವಿವರಿಸಿದ್ದಾರೆ. ಆದರೆ ಉಪನಂದನ ಹೆಸರನ್ನು ದಾಸರು ಎತ್ತಿಲ್ಲ. ಶ್ಲೋಕ ೪೧—೪೪೩, ವತ್ಸಾಸುರನು ಬಾಲಕೃಷ್ಣರನ್ನು ಹೊಡೆಯಲು ಬರುವನು. ಕೃಷ್ಣನು ಅವನನ್ನು ಸಂಹರಿಸುವನು. ದೇವತೆಗಳು ಹೂಮಳೆಗರೆಯುವರು. ಈ ಭಾಗವು ಪುಟ ೪೮, ಪದ ೨೪ ನುಡಿ ೧ ಮತ್ತು ೨ನೆಯ ಮೊದಲಿನ ಚರಣದಲ್ಲಿ ಬಂದಿದೆ. ಶ್ಲೋಕ ೪೪೩—೪೫೨, ಲೋಕಪಾಲಕನಾದ ಶ್ರೀಕೃಷ್ಣನು ವತ್ಸಪಾಲನೆ ಮಾಡುವನು. ಈ ಅರ್ಥವು ಪೂರ್ಣವಾಗಿ ದಾಸರ ಕೃತಿಯಲ್ಲಿಲ್ಲ. ಪುಟ ೪೮ ಪದ ೨೩ ನುಡಿ ೯ ರಲ್ಲಿ “ಆಕಳ ಕಾಯ್ವರಗೂಡಿಹ” ಎಂದು ಬಂದಿದೆ.

ಶ್ಲೋಕ ೪೫೨—೫೯ ಎಲ್ಲ ಗೋಪಾಲಕರು ಆಕಳುಗಳಿಗೆ ನೀರು ಕುಡಿಸಲು ಯಮುನೆಗೆ ಹೋದಾಗ್ಗೆ ಬಕಾಸುರನು ಬಂದು ಕೃಷ್ಣನನ್ನು ಚಂಚುವಿನಲ್ಲಿ ಹಿಡಿಯುವನು. ಇವನ್ನು ದಾಸರು ವರ್ಣಿಸಿದ್ದಾರೆ. ಆದರೆ ಇದನ್ನು ಕಂಡು ಗೋಪರು ನಿಶ್ಚೇಷ್ಟರಾದರು ಎಂಬ ಸಂಗತಿಯು ದಾಸರ ಕೃತಿಯಲ್ಲಿಲ್ಲ. ಬಕಾಸುರನನ್ನು ಕೃಷ್ಣನು ಸೀಳುವನು. ಎಲ್ಲರಿಗೂ ಆನಂದವಾಗುವದು ನಂದನು ಕೃಷ್ಣನನ್ನು ಅಪ್ಪಿಕೊಳ್ಳುವನು. ಮತ್ತು ಗರ್ಗಾಚಾರ್ಯರು ಹೇಳಿದ ಮಾತು ನಿಜವಿದೆಯೆಂದು ಒಪ್ಪುವನು. ಈ ಭಾಗವು ಪುಟ ೪೯ ಪದ ೨೪ ನುಡಿ ೨ರಿಂದ ೭ರಲ್ಲಿ ಬಂದಿದೆ.

**ಅಧ್ಯಾಯ ೧೩.—**

ಶ್ಲೋಕ ೧—೧೯. ವೃಂದಾವನದ ಶೋಭೆಯ ವರ್ಣನೆಯು ಕಂಡು ಬರುವದು. ಚಕೋರ, ಕುಕರಿ, ತಿತ್ತಿರಿ ಪಕ್ಷಿಗಳ ಮಧುರ ಗಾನವು ಕೇಳಬರುವದು. ಅಲ್ಲಿ ಕೃಷ್ಣನು ಮರಗಳ ಕೆಳಗೆ ಪಾದ ಒತ್ತಿಸಿಕೊಳ್ಳುವನು. ಶ್ಲೋಕ ೧೮ರಲ್ಲಿ “ರಮಾಲಾಲಿತ ಪಾದಪಲ್ಲವಃ” ಎಂದು ಕೃಷ್ಣನ ಪಾದದ

ವರ್ಣನೆಯಿದೆ. ಪುಟ ೫೪—೫೬ ಪದ ೨೬ ನುಡಿ ೧—೧೫ ರಲ್ಲಿ ಈ ವರ್ಣನೆಯು ಬಂದಿದೆ.

ಕೃಷ್ಣನ ಪಾದದ ಬಗ್ಗೆ ಪ್ರಸನ್ನ ವೆಂಕಟದಾಸರು ಬಹು ಮನೋಹರವಾಗಿ ಹೇಳಿದ್ದಾರೆ. ಪುಟ ೫೫ ನುಡಿ ೯ ರಲ್ಲಿ ನೋಡಬಹುದು. "ಲಕುಮಿ ಭಜಿಪ ಪಾದಾ ಚತುರ್ಮುಖನರ್ಚಿಪ ಪಾದಾ । ಲೋಕಗಳಳೆದ ಪಾದ । ಗಂಗೆಯ ಪ್ರಕಟಿಸಿದ ಪಾದಾ ॥ ಮುಕುತ ವ್ಯಕುತ ಪಾದ ಕಾಳಿಂಗ ಭಕುತೋದ್ಧರ ಪಾದಾ । ಶಕಟವನೊದ್ದ ಪಾದಾ ಗೋವಳ ಸಖರೊತ್ತುವ ಪಾದಾ ॥" ಇದರಿಂದ ದಾಸರ ಆಳವಾದ ಅಭ್ಯಾಸವು ತಿಳಿಯುವದು. ಶ್ಲೋಕ ೨೦ ರಿಂದ ೨೬ ಧೇನುಕಾಸುರನ ವಧೆ—ಶ್ರೀದಾಮನು ರಾಮನಿಗೆ ಹೇಳುವವೇನಂದರೆ— "ತಾಲ ವನದಲ್ಲಿ ಧೇನುಕಾಸುರನಿದ್ದು, ಅಲ್ಲಿಯ ಹಣ್ಣನ್ನು ಆರಿಗೂ ತಿನ್ನಗೊಡುವದಿಲ್ಲ. ನಮಗೆ ಹಣ್ಣುಗಳನ್ನು ದೊರಕಿಸಿಕೊಡಬೇಕು." ಆಗ ರಾಮ ಕೃಷ್ಣರು ಅವನನ್ನು ಕೊಂದು ಹಣ್ಣುಗಳನ್ನು ಗೋಪಾಲಕರಿಗೆ ಕೊಡುವರು. ದೇವತೆಗಳು ಹೂಮಳೆಯನ್ನು ಸುರಿಸುವರು. ಈ ಸಂಗತಿಯು ಪುಟ ೫೭-೫೯ ಪದ ೨೭ ನುಡಿ ೧—೧೫ರಲ್ಲಿ ಬಂದಿದೆ. ೨೪ನೆಯ ಶ್ಲೋಕದಲ್ಲಿದ್ದ "ನ ಸೇವ್ಯಂತೇ ಪಶುಗಣೈಃ ಪಕ್ಷಿಸಂಘವಿವರ್ಜಿತಂ"ಎಂಬ ಅರ್ಥವನ್ನು ದಾಸರು ತಮ್ಮ ಕೃತಿಯಲ್ಲಿಯ ಪುಟ ೫೭ ನುಡಿ ೧ರಲ್ಲಿ "ಬರಗೊಡೊಬ್ಬರಿಗೆ" ಎಂದು ಒಂದೇ ಒಂದು ಮಾತಿನಲ್ಲಿ ಎಲ್ಲ ಅರ್ಥವನ್ನು ತಂದಿದ್ದಾರೆ. ಅದೇ ಪ್ರಕಾರ ೨೫ನೆಯ ಶ್ಲೋಕದಲ್ಲಿಯ 'ಫಲಾನಿ ಸುರಭೀಣಿ' ಎಂಬ ಮಾತನ್ನು ದಾಸರು "ಸುರಭಿ ಸುರಸ ಫಲ" ಎಂದು ಅರ್ಥ ಮಾಡಿದ್ದಾರೆ. ಪುಟ ೫೭ ನುಡಿ ೧. ದಾಸರ ಮಾತು ಬಲು ಮುದ್ದು.

ಶ್ಲೋಕ ೪೭—೫೨ ಕೃಷ್ಣನು ಗೋಪಾಲಕರನ್ನು ಕೂಡಿಕೊಂಡು ಯಮುನೆಗೆ ಹೋದಾಗ್ಗೆ, ಅಲ್ಲಿಯ ವಿಷಮಯವಾದ ನೀರನ್ನು ಕುಡಿದು, ಗೋಪಾಲಕರು ಮತ್ತು ದನಕರುಗಳು ಗತಪ್ರಾಣವಾಗುವವು. ಅದನ್ನು ಕಂಡು ಕೃಷ್ಣನು ತನ್ನ ಮಾಯೆಯಿಂದ ಆವುಗಳನ್ನೂ ಗೋಪಾಲಕರನ್ನೂ ಎಚ್ಚರಿಸುವನು. ಈ ಭಾಗವು ಪ್ರಸನ್ನ ವೆಂಕಟರ ಕೃತಿಯಲ್ಲಿ ಬಂದಿಲ್ಲ. ಕೃಷ್ಣನ ಮಹಿಮೆಯನ್ನು ದಾಸರು ಕೊಡಬೇಕಾಗಿತ್ತು.

**ಅಧ್ಯಾಯ ೧೪.—**

ಶ್ಲೋಕ ೧—೬೮. ಕಾಳಿಯಾ ಸರ್ಪದ ಮರ್ದನ. ಕೃಷ್ಣನು ಯಮುನೆ ಯಲ್ಲಿ ಹೊಕ್ಕು, ಸರ್ಪವನ್ನು ಮೇಲಕ್ಕೆತ್ತುವನು. ಅದು ಘೂತ್ಕರಿಸುವದು, ವೈಯನ್ನು ಉಬ್ಬಿಸುವದು. ಮತ್ತು ಕೃಷ್ಣನನ್ನು ಬಿಗಿಯುವದು. ಕೃಷ್ಣನು ಅದರ ಸೊಕ್ಕನ್ನು ಮುರಿಯುವನು. ನಾಗಪತ್ನಿಯರು ಬಂದು ಶ್ರೀಕೃಷ್ಣನ ಸ್ತುತಿಯನ್ನು ಮಾಡುವರು. ಆಗ ಕೃಷ್ಣನು ಸರ್ಪದ ಬಂಧವಿಮೋಚನೆ ಯನ್ನು ಮಾಡುವನು. ಕಾಳಿಯಾಸರ್ಪವು ಕೃಷ್ಣನನ್ನು ಸ್ತುತಿಸುವದು. ಕೃಷ್ಣನು ಅದಕ್ಕೆ ಸಿಂಧುವಿನಲ್ಲಿ ಸ್ಥಾನ ಕೊಟ್ಟು, ಗರುಡನ ಭಯವನ್ನು ನೀಗಿಸುವನು. ಗೋಪಿಯರಿಗೆ ಆನಂದವಾಗುವದು. ಯಶೋದೆಯು ಕೃಷ್ಣನನ್ನು ಅಪ್ಪು ವಳು. ಇದೆಲ್ಲವೂ ಪುಟ ೬೦—೬೩ ಪದ ೨೮ ನುಡಿ ೧—೩೪ರಲ್ಲಿ ಹೇಳಿದೆ. ಒಂದು ಹೆಚ್ಚಿನ ಸಂಗತಿಯನ್ನು ದಾಸರು ಹೇಳಿದ್ದಾರೆ. ಅದೇನೆಂದರೆ— ಯಮುನೆಯ ತೀರದ ಮೇಲಿನ ಎಲ್ಲ ಗಿಡಬಳ್ಳಿಗಳು ನಾಶಪಾದರೂ ಕದಂಬ ವೃಕ್ಷವು ನಾಶಹೊಂದಲಿಲ್ಲ. ಏಕೆಂದರೆ ಗರುಡನು ಅದರ ಮೇಲೆ ಅಮೃತ ಕಲಶವನ್ನು ಇಟ್ಟಿದ್ದನಂತೆ. (ಪುಟ ೬೦ ಪದ ೨೮ ನುಡಿ ೨ನ್ನು ನೋಡ ಬಹುದು.) ಪದ ೨೮ ನುಡಿ ೩೧ರಲ್ಲಿ "ಅಭಯುವ ಕೊಟ್ಟವನಟ್ಟಿ । ಈ ತ್ರಿಭುವ ನಕೊಬ್ಬನೆ ಜಟ್ಟಿ" ಎಂಬ ನುಡಿಯಲ್ಲಿ ದಾಸರು ಇಟ್ಟ ಪ್ರಾಸವನ್ನು ನೋಡ ಬಹುದು.

**ಅಧ್ಯಾಯ ೧೫ —**

ಶ್ಲೋಕ ೧-೧೨ ಕಾಳಿಯಾಸರ್ಪದ ವೃತ್ತಾಂತವೂ ಗರುಡನಿಗಾದ ಶಾಪದ ವೃತ್ತಾಂತವೂ ಇಲ್ಲಿ ಇವೆ. ಇವು ದಾಸರ ಕೃತಿಯಲ್ಲಿಲ್ಲ. ಶ್ಲೋಕ ೧೩-೧೪ ಕಾಲಿಯು ಕೃಷ್ಣನಿಗೆ ವಸ್ತ್ರಾಭರಣಗಳನ್ನೂ ಸುವರ್ಣ ರತ್ನಗಳನ್ನೂ ಕೊಟ್ಟ ಸಂಗತಿಯು ಇದೆ. ಕೃಷ್ಣನು ಬಂದದ್ದನ್ನು ನೋಡಿ, ಆತನಿಗೆ ಗೋಪಾಲಕರು ಆಲಿಂಗನವನ್ನು ಕೊಡುತ್ತಾರೆ. ಈ ಭಾಗವು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಶ್ಲೋಕ ೧೫—೧೯ ಪುಟ ೬೩ ನುಡಿ ೩೪ ಯಶೋದಾ, ರೋಹಿಣಿ, ನಂದ ಮತ್ತು ಗೋಪ ಗೋಪಿಯರಿಗೆ ಕೃಷ್ಣನ ಆಗಮನದಿಂದ ಆನಂದವಾಗುವದು. ಶ್ಲೋ.೨೦ ಕಾಳಿಯಾಸರ್ಪದ ಮರ್ದನದಿಂದ ಕೃಷ್ಣನಿಗೆ ಮತ್ತು ಗೋಪಾಲಕರಿಗೆ ಶ್ರಮವಾದ್ದರಿಂದ ಆ ರಾತ್ರಿಯನ್ನು ಯಮುನೆಯ ದಂಡೆಯ ಮೇಲೆಯೇ ಕಳೆ

ದರು. ಆದರೆ ಪ್ರಸನ್ನ ವೆಂಕಟರು ಪುಟ ೬೩, ನುಡಿ ೩೩ರಲ್ಲಿ "ಹರಿಯಾಶ್ಚರ್ಯ ಕರ್ಮಗಳ | ಉ | ಚ್ಚರಿಸುತ್ತ ಗೋವರ ಮೇಳ ಹರುಷದಲಾ ರಾತ್ರಿಯಲಿ | ಸು | ಸ್ಥಿರರಾದರು ಯಮುನೆಯಲಿ ||" ಎಂದು ಹೇಳಿದ್ದಾರೆ. ಶ್ಲೋಕ ೨೧-೨೭ ರಾತ್ರಿಯಲ್ಲಿ ಒಮ್ಮೆಲೆ ಅರಣ್ಯವು ಅಗ್ನಿಯಿಂದ ಸುಡಲು ಪ್ರಾರಂಭವಾಗುವದು. ಗೋಪಾಲಕರು ಎಚ್ಚತ್ತು ಗಾಬರಿಗೊಂಡು, "ನಮ್ಮನ್ನು ಈ ಅಗ್ನಿಯಿಂದ ರಕ್ಷಿಸು" ಎಂದು ಕೃಷ್ಣನಿಗೆ ಮೊರೆಹೋಗುವರು. ಕೃಷ್ಣನು ಗೋಪಾಲಕರನ್ನೂ ಗೋವುಗಳನ್ನೂ ಅಗ್ನಿಯಿಂದ ರಕ್ಷಿಸುವನು. ಈ ವೃತ್ತಾಂತವು ಪ್ರಸನ್ನ ವೆಂಕಟರ ಭಾಗವತದಲ್ಲಿ ಪುಟ ೬೩, ನುಡಿ ೩೫ರಲ್ಲಿ ಬಂದಿನೆ. ಮೇಲಿನ ೨೧-೨೭ ಶ್ಲೋಕಗಳಲ್ಲಿಯ ಭಾವವನ್ನು ಪ್ರಸನ್ನ ವೆಂಕಟರು ೨ ಸಾಲಿನಲ್ಲಿ ತಂದಿದ್ದಾರೆ.

**ಅಧ್ಯಾಯ ೧೬—**

ಶ್ಲೋಕ ೧-೧೫ ವೃಂದಾವನದ ವರ್ಣನೆಯಿದ್ದು, ಕೃಷ್ಣನ ಆಟಪಾಟಗಳು ವರ್ಣಿತವಾಗಿವೆ. ಇದು ದಾಸರ ಭಾಗವತದಲ್ಲಿ ಪುಟ ೬೬ರಿಂದ ೬೭, ಪದ ೩೦, ನುಡಿ ೧-೧೪ ಇವುಗಳಲ್ಲಿ ಬಂದಿದೆ. ವರ್ಣನೆ ಸುಂದರವಾಗಿದೆ. ಶ್ಲೋ. ೧೬-೩೧ ಇಲ್ಲಿ ಪ್ರಲಂಬಾಸುರನ ವಧೆಯ ಬಗ್ಗೆ ಹೇಳಿದೆ. ಇದೇ ಮಾತನ್ನು ಪ್ರಸನ್ನ ವೆಂಕಟರು ಪುಟ ೬೭ರಿಂದ ೬೯, ಪದ ೩೦, ನುಡಿ ೧೫-೨೭ ರಲ್ಲಿ ಹೇಳಿದ್ದಾರೆ. ಶ್ಲೋ. ೨೦ರಲ್ಲಿ ಹೇಳಿದ "ವಾಹ್ಯವಾಹಕ ಲಕ್ಷಣಾಃ" ಎಂಬ ಮಾತನ್ನು ಪ್ರಸನ್ನ ವೆಂಕಟರು ಪುಟ ೬೮ರಲ್ಲಿ "ಮೇಳೈಸಿದ ಸೋತವ ವಾಹಕ ಸೋಲ್ದವನೆ ವಾಹ್ಯನು |" ಎಂದಿದ್ದಾರೆ. ಇಲ್ಲಿಯ ಅನುವಾದವು ಎಷ್ಟು ಮಧುರವಾಗಿದೆ ನೋಡಿರಿ. ದಾಸರು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಸಮಾನರೆಂದು ಹೇಳಬಹುದು.

**ಅಧ್ಯಾಯ ೧೭—**

ಶ್ಲೋ. ೧ರಿಂದ ೧೮, ಪ್ರಲಂಬನ ವಧೆಯಾದ ನಂತರ ಎಲ್ಲರೂ ಆಟದಲ್ಲಿ ತೊಡಗುವರು. ದನಕರುಗಳು ನೀರು ಕುಡಿಯಲು ಹೋಗುವವು. ಅವುಗಳನ್ನು ತಿರುಗಿ ತರಲು ಗೋಪಾಲಕರೂ ಹೋಗುವರು. ಅಷ್ಟರಲ್ಲಿ ಎಲ್ಲಿಯೋ ಕಾಡುಗಿಚ್ಚು ಹತ್ತಿ ಅವರನ್ನು ಮುತ್ತಿ ದಹಿಸುವಂತೆ ಹತ್ತಿರ ಬರುವುದು.

ಗೋಪಾಲಕರು ಇದರಿಂದ ಮುಕ್ತ ಮಾಡಬೇಕೆಂದು ಕೃಷ್ಣನನ್ನು ಪ್ರಾರ್ಥಿಸುವರು. ಕೃಷ್ಣನು ಅವರಿಗೆ ಕಣ್ಣು ಮುಚ್ಚಲು ಹೇಳಿ, ಅವರನ್ನು ಮುಕ್ತ ಮಾಡುವನು. ಮನೆಗೆ ಹೋಗಿ ಗೋಪಾಲಕರು ಈ ವೃತ್ತಾಂತವನ್ನು ತಮ್ಮ ಸ್ತ್ರೀಯರಿಗೆ ತಿಳಿಸುವರು. ಅವರಿಗೆ ಅತ್ಯಾನಂದವಾಗುವದು. ರಾಮಕೃಷ್ಣರು ನರರೂಪದಿಂದ ಗೋಕುಲದಲ್ಲಿ ಅವತರಿಸಿರುವರು ಎಂದು ಅವರು ತಿಳಿದುಕೊಳ್ಳುವರು. ಅವರು ಅವನನ್ನು ಸ್ತುತಿಸುವರು. ಗೋಪಿ-ಯಶೋದೆಯರಿಗೆ ಆನಂದವಾಗುವದು. ಈ ಸಂಗತಿಯು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಕೃಷ್ಣನ ಲೀಲೆಯ ಈ ವೃತ್ತಾಂತವನ್ನು ದಾಸರು ಕೊಡಬಹುದಾಗಿತ್ತು.

**ಅಧ್ಯಾಯ ೧೮—**

ಶ್ಲೋ. ೧-೪೭ ಇವರಲ್ಲಿ ವೃಂದಾವನದಲ್ಲಿಯ ವರ್ಷಾಋತುವಿನ ವರ್ಣನೆಯಿದೆ. ವೃಂದಾವನದಲ್ಲಿಯ ಶ್ರೀಕೃಷ್ಣನ ಲೀಲೆಗಳು ಮತ್ತು ಶರತ್‌ಕಾಲದ ವರ್ಣನೆಗಳು ಇವರಲ್ಲಿವೆ. ಇಲ್ಲಿ ಉಪಮೆಗಳು ಹೆಚ್ಚಾಗಿವೆ. ಇನ್ನು, ಪ್ರಸನ್ನ ವೆಂಕಟರ ಕೃತಿಯಲ್ಲಿ ಪುಟ ೭೦, ಪದ ೩೧, ನುಡಿ ೧ರಿಂದ ೪ರಲ್ಲಿ ವರ್ಷಾಕಾಲದ ವರ್ಣನೆಯಿದ್ದು, ಭಾಗವತದಂತೆ ವಿಸ್ತಾರವಾಗಿಲ್ಲ. ಮತ್ತು ಉಪಮೆಗಳಿಲ್ಲ. ಶರತ್ಕಾಲದ ವರ್ಣನೆ ದಾಸರ ಭಾಗವತದಲ್ಲಿಲ್ಲ. ಪುಟ ೭೦, ೭೧, ಪದ ೩೧, ನುಡಿ ೫-೭ರಲ್ಲಿ ಆಕಳುಗಳ ಹೆಸರು ತುಂಬಿವೆ. ಹೆಸರಿನಿಂದ ಕರೆಯುವ ರೀತಿ ಹೊಸತು. ಇದು ಮೂಲ ಭಾಗವತದಲ್ಲಿಲ್ಲ. ಪುಟ ೭೧, ನುಡಿ ೮ರಲ್ಲಿ ಕೃಷ್ಣನು ಆವುಗಳನ್ನು ಕರೆಯುತ್ತಾನೆ. ಅವು ಬಂದು ಕೃಷ್ಣನ ಹೆಗಲ ಮೇಲೆ ಹೆಗಲನ್ನಿಟ್ಟು ನೆಕ್ಕುವವು. ಕೃಷ್ಣನು ಅವುಗಳನ್ನು ತುರಿಸುವನು. ಈ ಚಿತ್ರವು ಕಣ್ಣುಮುಂದೆ ಕಟ್ಟಿದಂತಾಗುತ್ತದೆ. ಪುಟ ೭೧-೭೨, ನುಡಿ ೯-೧೬, ರಲ್ಲಿ ಕೃಷ್ಣನ ಲೀಲೆಗಳೂ ಗೋಪಿಯರ ಸ್ತೋತ್ರ ಮತ್ತು ಅವರಿಗೆ ಆದ ಆನಂದವು ವರ್ಣಿತವಾಗಿವೆ.

**ಅಧ್ಯಾಯ ೧೯—**

ಶ್ಲೋ. ೧-೨೧ ವೇಣುಲೀಲೆ. ಶ್ರೀಕೃಷ್ಣನು ವೇಣುವನ್ನು ನುಡಿಸಲು ಆರಂಭಮಾಡಲು ಗೋಪಿಯರೆಲ್ಲ ಕಾಮಮೋಹಿತರಾಗಿ ಆತನನ್ನು ಧ್ಯಾನಿಸಲು ಆರಂಭಮಾಡುತ್ತಾರೆ. "ವೇಣುವಿಗೆ ಕೃಷ್ಣನ ತುಟಿಯು ಸ್ಪರ್ಶವಾಗುತ್ತದೆ.

ನಮಗೆ ಆಗುವದಿಲ್ಲ " ಎಂದು ಅವರು ಅಸೂಯೆಪಡುತ್ತಾರೆ. ವೃಂದಾವನಕ್ಕೆ ಕೃಷ್ಣನ ಪಾದಸ್ಪರ್ಶವಾಗುವದು. ವನದಲ್ಲಿಯ ವೃಕ್ಷಗಳಿಗೆ ಕೃಷ್ಣದರ್ಶನವಾಗುವದು. ಪುಳಿಂದಿಯರು ಕೃಷ್ಣನಿಗೆ ಗಂಧಸ್ಪರ್ಶ ಮಾಡುವರು. ಈ ವರ್ಣನೆಯು ಪುಟ ೭೩-೭೫, ಪದ ೩೨, ನುಡಿ ೧-೯ರಲ್ಲಿ ಬಂದಿದೆ. ದಾಸರು ಅಂತ್ಯಪ್ರಾಸವನ್ನು ಸಾಧಿಸಿರುವರೆಂದು ಪು. ೨೩, ನುಡಿ ೩ರಲ್ಲಿ ನೋಡಿದರೆ ತಿಳಿಯಬಹುದು. " ಬ್ರಹ್ಮ ಗಂಧರ್ವ ಗಾನವಿಸ್ಮಿತರೂವಾಗೀತಾ | ಅಮ್ಮರ ಗಂಧರ್ವರಮ್ಮರ ನಾರೇರು || "

**ಅಧ್ಯಾಯ ೨೦--**

ಶ್ಲೋ. ೧-೧೪ ಕಾತ್ಯಾಯನಿ ವ್ರತ ಇಲ್ಲವೆ ವಸ್ತ್ರಾಹರಣ. ಗೋಪಿಯರು ತಮಗೆ ಶ್ರೀಕೃಷ್ಣನು ಪ್ರಾಪ್ತವಾಗಬೇಕೆಂದು ಹೇಮಂತದ ಪ್ರಥಮ ಮಾಸದಲ್ಲಿ ಕಾತ್ಯಾಯನಿ ವ್ರತವನ್ನು ಆರಂಭಿಸುವರು. ದಿನಾಲು ಬೆಳಿಗ್ಗೆ ಎದ್ದು ಯಮುನೆಯಲ್ಲಿ ಸ್ನಾನಮಾಡಿ, ಕಾತ್ಯಾಯನಿ ಪೂಜೆಗೈದು ನೈವೇದ್ಯವನ್ನು ತೋರಿಸುವರು. ಈ ಪ್ರಕಾರ ನಡೆದಾಗ್ಗೆ, ಒಂದು ದಿನ ಕೃಷ್ಣನು ಅಲ್ಲಿಗೆ ಹೋಗಿ ಗಿಡದ ಮೇಲೆ ಸೀರೆಗಳನ್ನಿಟ್ಟು, ತನಗೆ ಎರಡೂ ಕೈಗಳಿಂದ ನಮಸ್ಕರಿಸಿದರೆ ವಸ್ತ್ರಗಳನ್ನು ಕೊಡುವೆನೆಂದು ಹೇಳುವನು. ಆ ಪ್ರಕಾರ ಅವರು ನಡೆಯಲು, ಅವರ ನಿಶ್ಚಲ ಭಕ್ತಿಗೆ ಮೆಚ್ಚಿ, ಅವರಿಗೆ ವಸ್ತ್ರಗಳನ್ನು ಕೊಟ್ಟು, ಇಚ್ಛೆಯನ್ನು ಪೂರೈಸುವೆನೆಂದು ಹೇಳುವನು. ಮತ್ತು ಕಾಲಕ್ಕೆ ಯಮುನೆಗೆ ಬಂದ ಗೋಪಾಲಕರಿಗೆ ಉಪದೇಶ ಮಾಡುವನು. ಈ ಭಾಗವು ದಾಸರ ಕೃತಿಯಲ್ಲಿ ಪುಟ ೭೬-೭೯, ಪದ ೩೩, ನುಡಿ ೧-೭೧ರಲ್ಲಿ ಬಂದಿದೆ. ಮತ್ತು ಆ ಗೋಪಾಲಕರಿಗೆ ಮಾಡಿದ ಉಪದೇಶವು ಪುಟ ೭೯-೮೧, ಪದ ೩೪, ನುಡಿ ೧-೧೧ರಲ್ಲಿ ಬಂದಿದೆ. ದಾಸರು ' ಕಾತ್ಯಾಯನಿ 'ಯ ಬದಲಾಗಿ ' ಸೋಮಶೇಖರ 'ನ ಅರ್ಧಾಂಗಿಯೆಂದು ಉಪಯೋಗಿಸಿದ್ದಾರೆ.

**ಅಧ್ಯಾಯ ೨೧—**

ಶ್ಲೋ. ೧—೫೧ ಸತ್ರದಡಿಗೆಯ ಊಟ. ಗೋಪರು ಹಸಿದೆವೆಂದು ರಾಮಕೃಷ್ಣರಿಗೆ ಹೇಳುವರು. ರಾಮಕೃಷ್ಣರು ಅವರನ್ನು ಯಜ್ಞಶಾಲೆಗೆ ಕಳುಹಿಸಿ, ಅನ್ನವನ್ನು ತರಲು ಹೇಳುವರು. ಬ್ರಾಹ್ಮಣರು ಅನ್ನವನ್ನು ಕೊಡುವದಿಲ್ಲ.

ತಿರುಗಿ ಬರುವರು. ಕೃಷ್ಣನು " ಅವರ ಪತ್ನಿಯರ ಕಡೆಗೆ ಹೋಗಿರಿ, ದೊರೆಯುವದು " ಎಂದು ಹೇಳುವನು. ಗೋಪರು ಹೋಗುವರು. ಅದಕ್ಕೆ ಬ್ರಾಹ್ಮಣಿಯರು ಒಪ್ಪಿಕೊಂಡು ಅನೇಕ ವಿಧದ ಅನ್ನವನ್ನು ತರುವರು. ಕೃಷ್ಣನನ್ನು ನೋಡಿ ಆನಂದಪರವಶರಾಗುವರು. ಕೃಷ್ಣನು ಅವರಿಗೆ ತಿರುಗಿ ಹೋಗಲು ಹೇಳುವನು. ಅದಕ್ಕೆ ಅವರು " ಮನೆಯಲ್ಲಿ ಪುರುಷರು ಕರೆದುಕೊಳ್ಳುವದಿಲ್ಲ " ಎಂದು ಹೇಳುವರು. " ಜ್ಞಾನಿಗಳಾದ ನಿಮ್ಮವರು ಹಾಗೆ ಮಾಡಲಾರರು. ಹೋಗಿರಿ" ಎಂದು ಕೃಷ್ಣನು ಹೇಳುವನು. ಸ್ತ್ರೀಯರು ಮನೆಗೆ ಹೋಗುವರು. ಬ್ರಾಹ್ಮಣರಿಗೆ ಪಶ್ಚಾತ್ತಾಪವಾಗುವದು. ಕೃಷ್ಣನ ಸ್ಮರಣೆ ಮಾಡಿ ಬ್ರಾಹ್ಮಣಿಯರು ಮುಕ್ತಿಯನ್ನು ಹೊಂದುವರು. ಒಬ್ಬಳ ಗಂಡನು ಅವಳಿಗೆ ಹೋಗಲು ಅಪ್ಪಣೆ ಕೊಡುವದಿಲ್ಲ. ಅವಳು ಅಲ್ಲಿಯೇ ಕೃಷ್ಣನನ್ನು ಧ್ಯಾನಿಸಿ, ಸಾಯುಜ್ಯವನ್ನು ಪಡೆಯುವಳು. ಇದೇ ಪ್ರಕಾರ ದಾಸರ ಭಾಗವತದಲ್ಲಿ ಪುಟ ೮೧-೮೩, ಪದ ೩೫, ನುಡಿ ೧-೧೭ರಲ್ಲಿ ಬಂದಿದೆ. ಆವರೆ ಶ್ಲೋಕ ೨೦ರಲ್ಲಿ ಬಂದ "ನಿಷಿಧ್ಯಮಾನಾಃ ಪತಿಭಿರ್ಭ್ರಾತೃಭಿರ್ಬಂಧುಭಿಃ ಸುತೈಃ ॥ " ಎಂಬ ಮಾತನ್ನು ದಾಸರು " ಗಂಡರ ಮಕ್ಕಳ ಆಪ್ತರೆಲ್ಲರ ಬಿಟ್ಟು " ಎಂದು ಹೇಳಿದ್ದಾರೆ. ೫೧ನೇ ಶ್ಲೋಕದಲ್ಲಿ ಬಂದ ಬ್ರಾಹ್ಮಣರು " ಕಂಸಾತ್ ಭೀತಾ ನ ಚಾಚಲನ್" ಕಂಸನಿಗೆ ಎಷ್ಟು ಹೆದರಿದರು ಎಂಬ ಮಾತು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಇನ್ನು ಕೆಲವು ಅಂಶಗಳು ದಾಸರ ಭಾಗವತದಲ್ಲಿವೆ. ಪುಟ ೮೨, ನುಡಿ ೫ರಲ್ಲಿ ಬಂದ ಮಾತು. " ವೃಷ್ಟೋದನ ಭಕ್ಷಪಾಯಸಾಜ್ಯ ಕ್ಷೀರವು । ಯ । ಥೇಷ್ಟ ಶಾಕ ಪಪ್ಪಡಪಳಿದ್ಯಾ ದಧಿ ವ್ಯಂಜನವು । " ಅದರಂತೆ ಪುಟ ೮೨, ನುಡಿ ೬ರಲ್ಲಿ ಇದ್ದ ಮಾತು. " ತಂಡತಂಡದ್ದುರಿವಾಣಗಳ ಚಷಕದೊಳಗೆ | ತುಂಬಿಕೊಂಡು ಬಂದರು.........ಹರಿಯಿದ್ದೆಡೆಗೆ ॥ " ಇವು ದಾಸರ ಕಾಲದ ಊಟದ ಪದ್ಧತಿಯನ್ನೂ ಪದಾರ್ಥಗಳನ್ನು ತೆಗೆದುಕೊಂಡು ಹೋಗುವ ರೀತಿಯನ್ನೂ ತೋರಿಸುತ್ತವೆ.

**ಅಧ್ಯಾಯ ೨೨—**

ಶ್ಲೋ. ೧-೩೮ ಈ ಅಧ್ಯಾಯದಲ್ಲಿ ಇಂದ್ರಯಾಗವನ್ನು ನಿಷೇಧಿಸಿ, ಆಕಳು, ಬ್ರಾಹ್ಮಣ, ಗೋವರ್ಧನ ಇವುಗಳ ಪ್ರೀತ್ಯರ್ಥವಾಗಿ ಯಜ್ಞ ಮಾಡಬೇಕೆಂದು ಹೇಳಿದೆ. ಇಂದ್ರನ ಗರ್ವವನ್ನು ಖಂಡಿಸುವದಕ್ಕಾಗಿ " ಇಂದ್ರ

ಯಾಗ ಮಾಡಬೇಡಿರಿ. " ಎಂದು ಕೃಷ್ಣನು ಉಪದೇಶ ಮಾಡುವನು ಇದು ದಾಸರ ಕೃತಿಯಲ್ಲಿಲ್ಲ.

**ಅಧ್ಯಾಯ ೨೫—**

ಶ್ಲೋ. ೧-೧೦ ಗೋವರ್ಧನೋದ್ಧಾರ. ಕೃಷ್ಣನು " ಇಂದ್ರ ಯಾಗ ಮಾಡಬೇಡಿರಿ " ಎಂದು ಹೇಳಿದ್ದನ್ನು ಕೇಳಿ, ಇಂದ್ರನು ಸಿಟ್ಟಿಗೆದ್ದು ಸಾಂವರ್ತಕ ಮಳೆಯನ್ನು ಕರೆದು, " ವೃಂದಾವನದಲ್ಲಿ ಮಳೆಗರೆ " ಎಂದು ಹೇಳುವನು. ಗೋಪರು, ದನಕರುಗಳು ಮಳೆ-ಚಳಿಯಿಂದ ನಡುಗುವರು. ಪುಟ ೮೪, ಪದ ೩೬, ನುಡಿ ೩ರಲ್ಲಿ ಈ ಭಾಗವು ಬಂದಿದೆ. ಶ್ಲೋ. ೧೧ರಿಂದ ೧೩ ಗೋಪ-ಗೋಪಿಯರು ತಮ್ಮನ್ನು ರಕ್ಷಿಸೆಂದು ಕೃಷ್ಣನನ್ನು ಸ್ತುತಿಸುವರು. ಇದು ದಾಸರ ಭಾಗವತದಲ್ಲಿಲ್ಲ. ಶ್ಲೋ. ೧೪-೨೮ ಕೃಷ್ಣನು ಸಹಜವಾಗಿ ಗೋವರ್ಧನವನ್ನು ಎತ್ತಿ, " ಹೆದರಬೇಡಿರಿ, ಒಳಗೆ ಹೋಗಿರಿ " ಎಂದು ಎಲ್ಲರಿಗೂ ಹೇಳುವನು. ಏಳು ದಿವಸ ಮಳೆಯಾಗಿ, ಇಂದ್ರನು ಸೋತು ಮಳೆಯನ್ನು ನಿಲ್ಲಿಸುವನು. ಆಮೇಲೆ, ಕೃಷ್ಣನು ಎಲ್ಲರಿಗೂ ಹೊರಗೆ ಹೋಗಲು ಹೇಳಿ, ಅನಾಯಾಸವಾಗಿ ಪರ್ವತವನ್ನು ಕೆಳಗಿಳಿಸುವನು, ಈ ವರ್ಣನೆಯು ಪುಟ ೮೪ ರಿಂದ ೮೬, ನುಡಿ ೪-೮ರಲ್ಲಿ ಬಂದಿದೆ. ಶ್ಲೋ. ೨೯-೩೦ ಗೋಪಿಯರು ಕೃಷ್ಣನಿಗೆ ಶುಭವನ್ನು ಚಿಂತಿಸುವರು. ನಂದ, ಯಶೋದೆ, ರೋಹಿಣಿ, ರಾಮರು ಕೃಷ್ಣನನ್ನು ಆಲಂಗಿಸುವರು. ಇದು ದಾಸರ ಕೃತಿಯಲ್ಲಿಲ್ಲ. ಶ್ಲೋ. ೩೧ರಿಂದ ೩೩ ದೇವತೆಗಳೂ ಗಂಧರ್ವರೂ ಹೂಮಳೆಗರೆಯುವರು. ಗೋಪಿಯರು ದಾರಿಯುದ್ದಕ್ಕೂ ಕೃಷ್ಣನ ಲೀಲೆಯನ್ನು ಹಾಡುತ್ತ ನಡೆಯುವರು. ಇದೂ ದಾಸರ ಭಾಗವತದಲ್ಲಿಲ್ಲ.

**ಅಧ್ಯಾಯ ೨೬—**

ಶ್ಲೋ. ೧-೨೬. ಕಂಸನ ಕಡೆಯಿಂದ ಬಂದ ಎಲ್ಲ ರಾಕ್ಷಸರನ್ನೂ ಕೃಷ್ಣನು ವಧೆ ಮಾಡಿದ್ದನ್ನು ಕಂಡು, ಗೋಪಾಲಕರಿಗೆ ಆಶ್ಚರ್ಯವಾಗುವದು. ಗರ್ಗಾಚಾರ್ಯರಿಂದ ತಿಳಿದ ಕೃಷ್ಣನ ಯೋಗ್ಯತೆಯನ್ನು ನಂದನು ಗೋಪರಿಗೆ ತಿಳುಹಿಸುವನು. ಈ ಸಂಗತಿಯು ದಾಸರ ಭಾಗವತದಲ್ಲಿಲ್ಲ.

**ಅಧ್ಯಾಯ ೨೫—**

ಶ್ಲೋ. ೧-೨೮ ಇಂದ್ರನು ಕೃಷ್ಣನನ್ನು ಸ್ತುತಿಸಿ, ತನ್ನನ್ನು ಕ್ಷಮಿಸ ಸೆಂದು ಪ್ರಾರ್ಥಿಸುವನು. ಕೃಷ್ಣನು ಇಂದ್ರನಿಗೆ ಯಾವ ರೀತಿಯಿಂದ ಇರ ಬೇಕೆಂಬುವ ಬಗ್ಗೆ ಉಪದೇಶ ಮಾಡುವನು. ಪುಟ ೮೫-೮೬, ಪದ ೩೬, ನುಡಿ ೬-೯ರಲ್ಲಿ ಈ ವಿಷಯುವು ಬಂದಿದೆ. ಕಾಮಧೇನುವು ಪೃಥ್ವೀತಲದ ಮೇಲೆ ಬಂದು ಕೃಷ್ಣನ ಸ್ತುತಿ ಮಾಡುವದು. ಅದಿತಿಯು ಹೇಳಿದಂತೆ ಇಂದ್ರಾದಿಗಳು ಆಕಾಶಗಂಗೆಯ ನೀರು ಐರಾವತದ ಸೊಂಡೆಯಲ್ಲಿ ತಂದು ಕೃಷ್ಣನಿಗೆ ಗೋ ಅಧಿಪತಿಯೆಂದು ಅಭಿಷೇಕಮಾಡಿ ಕೃಷ್ಣನಿಗೆ "ಗೋವಿಂದ" ಎಂದು ನಾಮಕರಣ ಮಾಡುವರು. ಇದು ದಾಸರ ಭಾಗವತದಲ್ಲಿಲ್ಲ.

**ಅಧ್ಯಾಯ ೨೬—**

ಶ್ಲೋ. ೧-೮ ವರುಣಪಾಶಬಂಧ ವಿಮೋಚನ. ನಂದನು ಏಕಾದಶಿ ವ್ರತವನ್ನು ಆಚರಿಸಿ ಮರುದಿನ ದ್ವಾದಶಿಯ ದಿವಸ ಸ್ನಾನಕ್ಕೆಂದು ಯಮುನೆಗೆ ಹೋಗುವನು. ಅಲ್ಲಿ ವರುಣನ ದೂತರು ಬಂದು ಆತನನ್ನು ವರುಣನ ಕಡೆಗೆ ತರುವರು. ಕೃಷ್ಣನು ಇದನ್ನು ಅಂತರ್ಧ್ಯಾನದಿಂದ ತಿಳಿದು, ವರುಣಾಲಯಕ್ಕೆ ಹೋಗಿ 'ನಂದನನ್ನು ಬಿಡು' ಎಂದು ಕೃಷ್ಣನು ಹೇಳಲು, ವರುಣನು ತನ್ನನ್ನು ಕ್ಷಮಿಸೆಂದು ಬೇಡಿಕೊಂಡು, ತನ್ನ ಜನ್ಮ ಸಫಲವಾಯಿತೆಂದು ಹೇಳುವನು. ಇದು ಪುಟ ೮೭-೮೮ ಪದ ೩೭, ನುಡಿ ೧-೯ರಲ್ಲಿ ಇದೆ. ಶ್ಲೋ. ೯-೧೭, ಕೃಷ್ಣನು ನಂದಸಹಿತ ವೃಂದಾವನಕ್ಕೆ ಬರುವನು. ನಂದನು ಕೃಷ್ಣನ ಮಹಾತ್ಮ್ಯೆಯನ್ನು ವರ್ಣಿಸುವನು. ಆಗ ಗೋಪಾಲಕರು ಆತನ ಅತುಲ ಶಕ್ತಿಯನ್ನು ಕಂಡು, ಬ್ರಹ್ಮಸ್ವರೂಪವನ್ನೂ ವೈಕುಂಠವನ್ನೂ ನೋಡಲು ಬಯಸುವರು. ಆಗ ಕೃಷ್ಣನು ಬ್ರಹ್ಮಸ್ವರೂಪವನ್ನು ತೋರಿಸಿ, ವೈಕುಂಠವನ್ನು ಎದುರಿಗಿರಿಸುವನು. ಇದ ರಿಂದ ಗೋಪಾಲಕರಿಗೆ ಅತ್ಯಾನಂದವಾಗುವದು. ಈ ಸಂಗತಿಗಳು ಪುಟ ೮೯, ನುಡಿ ೧೦-೧೧ರಲ್ಲಿ ಬಂದಿವೆ. ಪ್ರಸನ್ನ ವೆಂಕಟರ ಭಾಗವತದಲ್ಲಿ ಇಲ್ಲದ ಸಂಗತಿಗಳು ಬ್ರಹ್ಮಸ್ವರೂಪದ ಅಂತರ. ಕೃಷ್ಣನಿಗೆ ಇದು ಅಸಾಧ್ಯವಾದುದಲ್ಲ. ಹಿಂದೊಮ್ಮೆ ಅಕ್ರೂರನಿಗೆ ಬ್ರಹ್ಮಸ್ವರೂಪವನ್ನು ತೋರಿಸಿದ್ದು. ಪ್ರಸನ್ನ ವೆಂಕಟರ ಕೃತಿಯಲ್ಲಿ ಕಾಣುವ ಹೆಚ್ಚಿನ ಅಂಶಗಳು—ಗೋಪಾಲಕರು ಹರಿಕಥಾಮೃತ

ವನ್ನು ಆಲಿಸುವರು. ಅವಸ್ಥಾತ್ರಯಗಳು — ಕಾಂಬುದು, ಕೇಳುವದು, ಕೊಂಬುವದು, ಸಂಭಾಷಣ, ಪ್ರಾಣ, ನಡೆ, ಶ್ವಾಸ, ಸಂಭ್ರಮ, ಮನೋರಥ, ಪುಟ ೮೭, ಪದ ೩೭, ನುಡಿ ೧ ಕೆಳಗಿನ ಪಾದದಲ್ಲಿ ಅನುಪ್ರಾಸವನ್ನು ನೋಡಬಹುದು.

"ತಂದರು ತಂದೆಯ ತಂದೆ ನವೊ!" ಪುಟ ೮೮, ನುಡಿ ೭. "ಕಾಂಬುದು ಕೇಳುವದು, ಕೊಂಬುದು, ಕೊಡುವದು |" ಪುಟ ೮೭, ನುಡಿ ೧. "ಪ್ರಸನ್ನೀಕರಿಸಿದನು |" ಇದು ಕೇವಲ ಗದ್ಯಮಯವಾಗಿದೆ. ಪುಟ ೮೮, ನುಡಿ ೯. ಪುಟ ೮೯, ನುಡಿ ೧೫ರಲ್ಲಿ "ಸತ್ಯೇಶಭವವಿಪಾಹಿಪರಿಂ ನುತನು" ಇಲ್ಲಿ ಶಬ್ದ ಜೋಡಣೆ ಎಷ್ಟು ಸಹಜವಾಗಿ ಬಂದಿದೆ ನೋಡಿರಿ.

**ಅಧ್ಯಾಯ ೨೭—**

ರಾಸಕ್ರೀಡೆ– ಶ್ಲೋ. ೧-೩ ಇಲ್ಲಿ ಉಪಮೆಗಳಿವೆ. ಪುಟ ೯೦, ಪದ ೩೮, ನುಡಿ ೧-೨ ಇಲ್ಲಿ ಉಪಮೆಗಳು ಹೇಗೆ ಸಹಜವಾಗಿ ಬಂದಿವೆಯೆಂಬುದನ್ನು ನೋಡಬಹುದು. ಶ್ಲೋ. ೪-೧೧ ಕೃಷ್ಣನು ಕೊಳಲನ್ನೂದಲಾಗಿ ಗೋಪಿಯರು ಕಾಮಮೋಹಿತರಾಗಿ ಬರುವರು. ಪುಟ ೯೦-೯೧, ನುಡಿ ೩-೭ರಲ್ಲಿ ಈ ಭಾಗವು ಬಂದಿದೆ. ಆದರೆ, ಪುಟ ೯೧, ನುಡಿ ೬ರಲ್ಲಿ "ಕರವಲಯುವ ಕಾಲಿಗಿಟ್ಟು ಪರಮಪುರುಷನ್ನೈದಿದರು" ಎಂಬುವ ಮಾತು ಔಚಿತ್ಯವನ್ನುಂಟು ಮಾಡುತ್ತದೆ. ಶ್ಲೋ. ೧೨-೧೭ ಗೋಪಿಯರು ಕಾಮದಿಂದ ಶ್ರೀಕೃಷ್ಣನನ್ನು ಪೂಜಿಸುವರು; ಆದರು ಕೂಡ ಮುಕ್ತಿಯು ವೈರಿಯಾದ ಶಿಶುಪಾಲನಿಗೂ ದೊರೆಯಿತು. ಇನ್ನು ಪ್ರಿಯಜನರಿಗೇಕೆ ಮುಕ್ತಿಯು ದೊರೆಯಬಾರದು ? ಇದು ದಾಸರ ಭಾಗವತದಲ್ಲಿಲ್ಲ.

ಶ್ಲೋ. ೧೮—೩೦ ಕೃಷ್ಣನು ಗೋಪಿಯರಿಗೆ ಅನ್ನುವನು. "ನೀವು ಇಂಥ ಘೋರ ರಾತ್ರಿಯಲ್ಲಿ ನನ್ನ ಕಡೆಗೆ ಬಂದು ಪ್ರೇಮ ವ್ಯಕ್ತ ಮಾಡಿದಿರಿ. ಸಂತೋಷವಾಯಿತು. ಇನ್ನು ಮನೆಗೆ ಹೋಗಿರಿ, ತಂದೆ ತಾಯಿ ಮಕ್ಕಳು ಮತ್ತು ನಿಮ್ಮ ಪುರುಷರು ದಾರೀ ಕಾಯುತ್ತ ಕುಳಿತಿರುವರು. ಸ್ತ್ರೀಯರಿಗೆ ಪತಿಯೇ ಶ್ರೇಷ್ಠ." ಇದನ್ನು ಕೇಳಿ ಅವರು ದುಃಖಿತರಾಗಿ ನೆಲವನ್ನು ಬರೆಯಲಾರಂಭಿಸಿದರು. ಪುಟ ೯೧—೯೩ ಪದ ೩೮ ನುಡಿ ೮-೧೪ರಲ್ಲಿಯು ಮೊದ

ಲಿನ ೨ ಚರಣಗಳ ವರೆಗೆ ಈ ಸಂಗತಿಯು ವರ್ಣಿತವಾಗಿದೆ. ಈ ಭಾಗದಲ್ಲಿ ಪ್ರಸನ್ನ ವೆಂಕಟರು ಕೃಷ್ಣನ ಪಾತ್ರವನ್ನು ಸರಿಯಾಗಿ ತೀಡಿದ್ದಾರೆ. ಇಲ್ಲವಾದರೆ ಆ ಪಾತ್ರಕ್ಕೆ ಭಂಗ ಬರುತ್ತಿತ್ತು.

ಶ್ಲೋ. ೩೧–೪೧. ಗೋಪಿಯರು ಅನ್ನುವರು "ಕೃಷ್ಣಾ, ನಿನ್ನ ಮೇಲೆ ಮೋಹಿತರಾಗಿ ಬಂದಿದ್ದೇವೆ. ನಿನ್ನ ಪಾದವನ್ನು ಬಿಟ್ಟು, ಇರಲಾರೆವು. ಲಕ್ಷ್ಮಿಯು ಯಾವ ಪ್ರಕಾರ ತುಳಸಿಯನ್ನು ಕೂಡಿಕೊಂಡು ನಿನ್ನ ವಕ್ಷಸ್ಥಳದಲ್ಲಿ ರುವಳೋ, ಅದೇ ಪ್ರಕಾರ ನಾವು ನಿನ್ನ ಪಾದರಜವನ್ನು ಹೊಂದಿಕೊಂಡು ಇರುವೆವು. ನಮ್ಮನ್ನು ಸಲಹು." ಪುಟ ೯೩–೯೪ ನುಡಿ ೧೪–೧೭ ರಲ್ಲಿ ಈ ಭಾಗವು ಬಂದಿದೆ. ಇಲ್ಲಿ ಗೋಪಿಯರ ಸ್ವಭಾವವನ್ನು ಉತ್ತಮ ರೀತಿಯಿಂದ ವರ್ಣನೆ ಮಾಡಿದ್ದು ಕಂಡುಬರುವದು.

ಶ್ಲೋ. ೪೨—೪೮. ಈ ಪ್ರಕಾರ ಮಾಡಿದ ಸ್ತೋತ್ರಕ್ಕೆ ಮೆಚ್ಚಿ ಕೃಷ್ಣನು ಅವರ ಕೂಡ ರಾಸಕ್ರೀಡೆ ಮಾಡುವನು. ಅದರಿಂದ ಗೋಪಿಯರು ಕಾಮಾಗ್ನಿಯಿಂದ ತಪ್ತರಾಗಿ ಮತ್ತರಾಗುವರು. ಇದನ್ನು ಶಮನ ಮಾಡುವ ದಕ್ಕೋಸ್ಕರ ಕೃಷ್ಣನು ಗುಪ್ತನಾಗುವನು. ಪುಟ ೯೪–೯೫ ನುಡಿ ೧೮-೨೧ ರಲ್ಲಿ ದಾಸರು ಇವನ್ನು ಸರಿಯಾಗಿ ವರ್ಣಿಸಿದ್ದಾರೆ.

**ಅಧ್ಯಾಯ ೨೮.—**

ಶ್ಲೋ. ೧–೧೩. ಕೃಷ್ಣನು ಒಮ್ಮಿಂದೊಮ್ಮೆಲೇ ಗುಪ್ತವಾದುದನ್ನು ಕಂಡು ಗೋಪಿಯರು ಆತನನ್ನು ಕಾಣಲು ಹೊರಡುವರು. ಗಿಡಬಳ್ಳಿಗಳನ್ನು ಕೇಳುವರು, ಇದನ್ನು ಪುಟ ೯೬–೯೭ ಪದ ೩೯ ನುಡಿ ೧-೭ ರಲ್ಲಿ ನೋಡಬಹುದು. ಶ್ಲೋ. ೧೪ ರಿಂದ ೨೫ ಗೋಪಿಯರು ಗಿಡಬಳ್ಳಿಗಳನ್ನು ಕೇಳುವ ಕಾಲದಲ್ಲಿ ಶಂಖ, ಚಕ್ರಾಂಕಿತವಾದ ಶ್ರೀಪಾದವನ್ನು ಕಾಣುವರು. ಅವರ ಧೂಳಿಯನ್ನು ಹಣೆಯ ಮೇಲೆ ಇಟ್ಟುಕೊಳ್ಳುವರು. ಅಷ್ಟರಲ್ಲಿ ಅದರ ಕೂಡ ಇನ್ನೊಂದು ಹೆಜ್ಜೆಯನ್ನು ಕಾಣುವರು. ಆವಳು ಹೆಚ್ಚಿನವಳೆಂದು ಆವರು ಅಸಹ್ಯಪಡುವರು. ಮುಂದೆ ಆವಳ ಹೆಜ್ಜೆ ಕಾಣುವದಿಲ್ಲ. ಪಾದದಲ್ಲಿ ಮುಳ್ಳು ಮುರಿದಿದ್ದರಿಂದ ಅವಳನ್ನು ಹೆಗಲ ಮೇಲೇರಿಸಿಕೊಂಡಿರಬೇಕೆನ್ನು ವರು. ಇಲ್ಲವೆ ಹೂವು ತೆಗೆದಿರಬೇಕೆನ್ನುವರು. ಈ ಸಂಗತಿಗಳು ಪುಟ ೯೭-

೯೮ ನುಡಿ ೮-೧೩ರಲ್ಲಿ ಬಂದಿವೆ. ಶ್ಲೋ. ೨೧ರಲ್ಲಿ "ನ ಲಕ್ಷ್ಯಂತೇ ಪದಾನ್ಯತ್ರ ತಸ್ಯಾ ನೂನಂ ತೃಣಾಂಕುರ್ಯೈಃ" ಇದ್ದ ಪದವು ಪ್ರಸನ್ನ ವೆಂಕಟರ ಕೃತಿಯಲ್ಲಿಲ್ಲ. ಆದರೆ "ಕೆಳದಿಗೆ ಹೆಗಲಿತ್ತನಾಥಾ" ಪುಟ ೯೭ ನುಡಿ ೧೨ ರಲ್ಲಿ ಇದೆ. ಶ್ಲೋ. ೨೩ರಲ್ಲಿದ್ದ "ಅತ್ರ ಪ್ರಸೂನಾವಚಯಃ ಪ್ರಿಯಾರ್ಥೇ ಪ್ರೇಯಸಾ ಕೃತಃ" ಎಂಬ ದನ್ನೂ "ಹೆಗಲನೇರಿದಳ ಕೈಯಿಂದ ಹೂವ ತೆಗೆಸಿದನಲ್ಲ ಗೋವಿಂದ" ಎಂದೂ ದಾಸರು ಹೇಳಿದ್ದಾರೆ. ಪುಟ ೯೮ ನುಡಿ ೧೩ ಈ ಪಾದವು ಬಹು ಸುಂದರ ವಾಗಿದೆ. ಶ್ಲೋ. ೨೬–೩೬ ಅವಳ ಕೂಡ ಕೃಷ್ಣನು ಇರಲು, ಅವಳು ಮದಾಂಧಳಾಗುವಳು. ಅದನ್ನು ಶಮಿಸುವ ಸಲುವಾಗಿ ಕೃಷ್ಣನು ಅದೃಶ್ಯನಾ ಗುವನು. ಅವಳು ದುಃಖಿಸುವಳು. ಗೋಪಿಯರು ಅವಳನ್ನು ಕಾಣುವರು. ಮತ್ತು ಕೃಷ್ಣನ ಬಗ್ಗೆ ಕೇಳುವರು. ಅವಳು ತನ್ನ ಮೂರ್ಖತನವನ್ನು ಹೇಳು ವಳು. ಕೊನೆಗೆ ಎಲ್ಲರೂ ಕೂಡಿ ಯಮುನೆಯ ದಡದಲ್ಲಿ ಹರಿಗುಣ ಧ್ಯಾನದಲ್ಲಿ ಕುಳಿತುಕೊಳ್ಳುವರು. ಮನೆಯನ್ನು ಮರೆಯುವರು. ಇದೆಲ್ಲವೂ ಪುಟ ೯೮–೯೯ ನುಡಿ ೧೪-೨೩ ರಲ್ಲಿ ಇವೆ. ಆದರೆ ಶ್ಲೋಕ ೩೫ ರಲ್ಲಿದ್ದ "ನಾತ್ಮಗಾರಾಣಿ ಸಸ್ಮರುಃ" ಎಂಬ ಅರ್ಥವುಳ್ಳ ವಾಕ್ಯವು ದಾಸರ ಕೃತಿಯಲ್ಲಿ ಇಲ್ಲ. ಏಕೆಂದರೆ ಇಂಥ ಕಿರುಕಳ ವಾಕ್ಯದ ಕಡೆಗೆ ದಾಸರು ಲಕ್ಷ್ಯ ಕೊಟ್ಟಿಲ್ಲವೆಂದು ಕಾಣು ತ್ತದೆ.

**ಅಧ್ಯಾಯ ೨೯—**

ಶ್ಲೋ. ೧–೧೮. ಗೋಪೀ ಗೀತ— ಕೃಷ್ಣನನ್ನು ಕಾಣುವದಕ್ಕಾಗಿ ಆತನ ಲೀಲೆಗಳನ್ನು ನೆನೆದು ಗೋಪಿಯರು ಸ್ತುತಿ ಮಾಡುತ್ತಾರೆ. ಇದೇ ಪ್ರಕಾರ ಮತ್ತು ಅಷ್ಟೇ ವಿಸ್ತಾರವಾಗಿ ಈ ಭಾಗವು ಪುಟ ೯೯—೧೦೨ ಪದ ೪೦ ನುಡಿ ೧-೧೯ ರಲ್ಲಿ ಬಂದಿದೆ.

**ಅಧ್ಯಾಯ ೩೦—**

ಶ್ಲೋ. ೧–೨. ಈ ಎರಡು ಶ್ಲೋಕಗಳನ್ನು ದಾಸರು ಪುಟ ೧೦೨ ಪದ ೪೦ ನುಡಿ ೨೦–೨೧ ರಲ್ಲಿ ಇದ್ದಕ್ಕಿದ್ದಂತೆ ಇಟ್ಟಿದ್ದಾರೆ. ಎಲ್ಲ ದಾಸರಲ್ಲಿ ಪದ್ಧತಿಯೇನಂದರೆ, ಪ್ರತಿಯೊಂದು ಪದದ ಕೊನೆಯ ನುಡಿಯ ಕೊನೆಯ ಪಾದ

ದಲ್ಲಿ ಇಲ್ಲವೇ ಅದರ ಮೇಲಿನ ಪಾದದಲ್ಲಿ ತಮ್ಮ ಅಂಕಿತವನ್ನು ಬರೆಯುವದು. ಇದೇ ಕ್ರಮವನ್ನು ಪ್ರಸನ್ನ ವೆಂಕಟದಾಸರೂ ಇಟ್ಟುಕೊಂಡಿದ್ದಾರೆ. ಅಂದರೆ ೪೦ ನೆಯ ಪದದ ೧೯ ನೆಯ ನುಡಿಯಲ್ಲಿ ತಮ್ಮ ಅಂಕಿತವನ್ನಿಟ್ಟು ಕೊನೆಗೆ ಮತ್ತೆ ಎರಡು ಶ್ಲೋಕಗಳನ್ನು ಬರೆದಿದ್ದಾರೆ. ಇನ್ನು ಈ ಶ್ಲೋಕಗಳನ್ನು ಇದ್ದಕ್ಕಿದ್ದಂತೆಯೇ ಇಡುವ ಕಾರಣವಾವುದು ? ಎಂಬುದನ್ನು ತಿಳಿಯಲು ಮಾರ್ಗವಿಲ್ಲ. ಈ ಶ್ಲೋಕಗಳನ್ನು ಕನ್ನಡಕ್ಕೆ ಪರಿವರ್ತಿಸಲು ದಾಸರಿಗೆ ಸಾಧ್ಯವಿತ್ತು. ಶ್ಲೋ. ೩—೯ ಕೃಷ್ಣನನ್ನು ಕಂಡ ಕೂಡಲೆ ಎಲ್ಲರಿಗೂ ಪರ ಮಾನಂದವಾಗುವದು. ಒಬ್ಬರು ಆತನ ಮುಖಕ್ಕೆ ಮುಖ ಹಚ್ಚುವರು. ಒಬ್ಬರು ಆತನ ಪಾದವನ್ನು ಅಪ್ಪುವರು. ಪುಟ ೧೦೪ ರಿಂದ ೧೦೫ ಪದ ೪೪ ನುಡಿ ೧–೩ ರಲ್ಲಿ ಈ ವಿಷಯವು ಬಂದಿದೆ. ಶ್ಲೋ. ೧೦—೨೨ ಕೃಷ್ಣನ ಗುಣಗಾನ, ಆತನ ಮೇಲಿನ ಪ್ರೇಮ, ಆತನ ಕೂಡ ಮಾತುಕತೆ ಇವು ವರ್ಣಿತವಾಗಿವೆ. ಇದೇ ಪ್ರಕಾರ ಪ್ರಸನ್ನ ವೆಂಕಟರ ಭಾಗವತ ಪುಟ ೧೦೫ ರಿಂದ ೧೦೬ ಪದ ೪೪ ನುಡಿ ೪—೮ ರಲ್ಲಿ ಇದು ವರ್ಣಿತವಾಗಿದೆ.

**ಅದ್ಯಾಯ ೩೧—**

ಶ್ಲೋ. ೧—೭. ಗೋಪಿಯರು ಯಮುನೆಯ ದಂಡೆಯ ಮೇಲೆಬಂದು ಕ್ರೀಡಿಸಹತ್ತುವರು. ಇದು ಪುಟ ೧೦೭-೧೦೮ ನುಡಿ ೧೬–೨೧ರಲ್ಲಿ ಬಂದಿದೆ. ಶ್ಲೋ. ೮—೧೭ ಗೋಪಿಯರು ಪದನ್ಯಾಸದಿಂದ, ಭ್ರೂವಿನ್ಯಾಸದಿಂದ ಹಾಡಿ ಕುಣಿಯಲು ಆರಂಭ ಮಾಡುವರು. ಅವರಲ್ಲಿ ಒಬ್ಬಳು ಕೃಷ್ಣನ ಉಚ್ಚಾರ ದಂತೆ ತನ್ನ ದನಿಯನ್ನು ಏರಿಸುವಳು. ಕೃಷ್ಣನು "ಸಾಧು ಸಾಧು" ಎನ್ನು ವನು. ಒಬ್ಬಳು ಬೇಸತ್ತು ಕೃಷ್ಣನ ಹೆಗಲ ಮೇಲೆ ತಲೆಯಿಡುವಳು. ಮುಖಕ್ಕೆ ಮುಖ ನೀಡುವಳು. ನೋಡಿದತ್ತ ಆನಂದವೇ ಆನಂದ. ಈಮೇಲೆ ವಿಸ್ತರಿಸಿದ ಭಾಗವು ಪುಟ ೧೦೯ ರಿಂದ ೧೧೦ ಪದ ೪೫ ನುಡಿ ೧–೧೪, ಮತ್ತು ಪದ ೪೬ ನುಡಿ ೧–೧೪ ರಲ್ಲಿ ದಾಸರು ವಿಸ್ತರಿಸಿದ್ದಾರೆ. ಶ್ಲೋ. ೧೮-೨೨. ದೇವಾಂಗನೆಯರು ಕೃಷ್ಣನ ಲೀಲೆಯನ್ನು ನೋಡಲು ನೆರೆಯುವರು. ಕೃಷ್ಣನು ಗೋಪಿಯರಿಗೆ ತನ್ನ ರೂಪವನ್ನು ತೋರಿಸುವನು. ಮನತಣಿಯು ವಂತೆ ನೋಡುವರು. ಎಲ್ಲರೂ ರತಿವಿಹಾರದಲ್ಲಿ ಮಗ್ನರಾಗುವರು. ಈ

ಭಾಗವು ಪುಟ ೧೧೧-೧೧೨ ಪದ ೪೬ ನುಡಿ ೧೫-೨೪ ರಲ್ಲಿ ಬಂದಿವೆ. ಈ ವಿಸ್ತಾರವಾದ ಕೃಷ್ಣನ ಲೀಲೆಯನ್ನು ವರ್ಣಿಸಲು ಪ್ರಸನ್ನ ವೆಂಕಟರಿಗೆ ಬೇಸರ ವಿಲ್ಲ.

ಶ್ಲೋಕ ೨೨-೨೩ ಜಲಕ್ರೀಡೆ— ಆ ಮೇಲೆ ಕೃಷ್ಣನು ನೀರಿನಲ್ಲಿ ಹೋಗಿ ಗೋಪಿಯರ ಕೂಡ ಜಲಕ್ರೀಡೆಯನ್ನು ಆಡುವನು. ಪುಟ ೧೧೨-೧೩೩ ನುಡಿ ೨೫-೨೮ರಲ್ಲಿ ಬಂದಿವೆ. ಶ್ಲೋ. ೨೩ರಲ್ಲಿ ಬಂದ "ಗಜೀಭಿರಿಭರಾಟ್ ಇವ" ಎಂಬುವದು ದಾಸರ ಭಾಗವತದಲ್ಲಿ ಪುಟ ೧೧೨, ನುಡಿ ೨೫ರಲ್ಲಿ "ಹೆಣ್ಣಾನೆಗಳ ಕೂಡ ಮದ್ದಾನೆಯಂತೆ" ಬಂದಿದೆ. ನುಡಿಯು ಎಷ್ಟು ಸಹಜ ವಾಗಿದೆ. ಸಂಸ್ಕೃತದಲ್ಲಿವ್ವ ಸ್ವಾರಸ್ಯವನ್ನು ಕನ್ನಡದಲ್ಲಿ ಎಷ್ಟು ಸುಲಭವಾಗಿ ತಂದಿದ್ದಾರೆಂಬುದನ್ನು ನೋಡಬಹುದು. ಶ್ಲೋ. ೨೪-೨೮ ಪರೀಕ್ಷಿತರಾಜನು ಶುಕಮುನಿಗೆ ಪ್ರಶ್ನೆಮಾಡುವನು. "ಧರ್ಮಸಂಸ್ಥಾಪಕನಾದ ಕೃಷ್ಣನು ಹೀಗೇಕೆ ನಡೆಯುವನು? ಅದಕ್ಕೆ ಶುಕಮುನಿಗಳು "ಕೃಷ್ಣನು ನಿರ್ಲಿಪ್ತನು ಅತೀತನು ಆತನಿಗೆ ದೋಷ ತಟ್ಟುವದಿಲ್ಲ. ಆದರೆ ಅನ್ಯರು ಹೀಗೆ ಆಚರಿಸಿದರೆ ಮಾತ್ರ ದೋಷ ತಟ್ಟುವದು ಮತ್ತು ನಾಶ ಹೊಂದುವರು." ಎಂದು ಹೇಳುವರು. ದಾಸರ ಭಾಗವತದಲ್ಲಿ ಹೀಗೆ ಪ್ರಶ್ನೋತ್ತರ ರೂಪವಾಗಿರದೆ ಕೃಷ್ಣನ ಶ್ರೇಷ್ಠತ್ವ ಮಾತ್ರ ಬಂದಿದೆ. ಪುಟ ೧೧೩ ನುಡಿ ೩೧-೩೨ ರಲ್ಲಿ "ಸರ್ವ ವಿಶ್ವೇಶ್ವರ ಸರ್ವ ಸುರೇಶ್ವರ। ಸರ್ವಾರ್ಥ ದಾತಾ ನಾಥಾ॥" ಶ್ಲೋ. ೩೯-೪೦ ಕೃಷ್ಣನ ಆಜ್ಞೆ ಯಿಂದ ಗೋಪಿಯರು ಮನೆಗೆ ತೆರಳುವರು. ಪುಟ ೧೧೩ ನುಡಿ ೩೮—೩೯ ರಲ್ಲಿ ಈ ಗೋಪಿಯರನ್ನು ದಾಸರು ಮನೆಗೆ ತೆರಳಿಸಿದ್ದಾರೆ.

**ಅಧ್ಯಾಯ ೩೨—**

ಶ್ಲೋ. ೧-೯ ಗೋಪಾಲಕರು ಅಂಬಿಕೆಯ ಯಾತ್ರೆಯಗೋಸ್ಕರ ಯಮು ನೆಗೆ ಹೋಗಿ ಅಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ದಾನಗೊಟ್ಟು ಭೋಜನ ಮಾಡಿ ಅಲ್ಲಿಯೇ ಇರುವರು. ಅಲ್ಲಿ ಒಂದು ಸರ್ಪವು ಬಂದು ನಂದನನ್ನು ನುಂಗಲು, ಆತನು ಕೃಷ್ಣನನ್ನು ಪ್ರಾರ್ಥಿಸುವನು. ಅದನ್ನು ಕೇಳಿ, ಗೋಪಾ ಲಕರು ಉರಿವ ಕಟ್ಟಿಗೆಯಿಂದ ಸರ್ಪವನ್ನು ಹೊಡೆಯುವರು. ಅದು ನಂದ ನನ್ನು ಬಿಡುವದಿಲ್ಲ. ಕೃಷ್ಣನು ಅದನ್ನು ಸ್ಪರ್ಶ ಮಾಡುವನು. ಆ ಸರ್ಪವು ವಿದ್ಯಾಧರನ ರೂಪ ತಾಳಿ, ನಿಲ್ಲುವದು. ಈ ಭಾಗವು ಪುಟ ೧೧೪-

೧೧೫, ಪದ ೪೭, ನುಡಿ ೧-೨ ಮತ್ತು ೩ರಲ್ಲಿಯ ಮೊದಲನೆಯ ಪಾದದಲ್ಲಿ ಬಂದಿದೆ.

**ವ್ಯತ್ಯಾಸ**:— ( i ) ಮೂಲ ಭಾರತದಲ್ಲಿ ನಂದನು ಕೃಷ್ಣನನ್ನು ಕರೆಯುತ್ತಾನೆ ಎಂದು ಹೇಳಿದೆ. ದಾಸರ ಭಾಗವತದಲ್ಲಿ ಗೋಪಾಲಕರು ಕರೆಯುತ್ತಾರೆ ಎಂದಿದೆ. ( ii ) ಭಾಗವತದಲ್ಲಿ ಗೋಪಾಲಕರು ಸರ್ಪವನ್ನು ಕೊಳ್ಳಿಯಿಂದ ಹೊಡೆಯುತ್ತಾರೆ ಎಂದು ಹೇಳಿದರೆ, ದಾಸರ ಭಾಗವತದಲ್ಲಿ "ಕೊಳ್ಳಿಯಪಿಡಿದು ಅಂಜುತ ಅಜಗರ ಕಂಡರಂದು" ಎಂದು ಹೇಳಿದೆ. ಇದನ್ನು ಏಕೆ ದಾಸರು ಮಾಡಿದರು ಎಂಬುದು ತಿಳಿಯುವದಿಲ್ಲ.

ಶ್ಲೋಕ ೧೦-೧೫ ಕೃಷ್ಣನು ಮನುಷ್ಯರೂಪ ತಾಳಿದವನಿಗೆ "ನೀನು ಯಾರು ?" ಎಂದು ಕೇಳಿದಾಕ್ಷಣವೇ ತಾನು ಸುದರ್ಶನನೆಂಬ ವಿದ್ಯಾಧರನಾಗಿದ್ದು, ಧನದ ಮದದಿಂದ ಮದಾಂಧನಾದೆ. ಅಂಗೀರಸರ ಕುರೂಪಕ್ಕೆ ನಕ್ಕೆ. ಅವರಿಂದ ಶಾಪನಾಯಿತು. ನಿನ್ನಿಂದ ಮುಕ್ತನಾದೆನು ಎಂದು.... ಆ....ವ್ಯಕ್ತಿಯು ಹೇಳುವುದು. ದಾಸರ ಭಾಗವತದಲ್ಲಿ ಇದು ವಿಸ್ತಾರವಾಗಿದೆ. ಪುಟ ೧೧೫, ನುಡಿ ೩ರಲ್ಲಿ "ಹಿಂದೆ ವಿದ್ಯಾಧರ ತಾನು ಮುನಿಯ ಶಾಪ | ದಿಂದಹಿಯಾಗಿರಲು |" ಎಂದು ಒಂದೇ ಪಾದದಲ್ಲಿ ಸುದರ್ಶನನ ವೃತ್ತಾಂತವನ್ನು ಹೇಳುತ್ತಾರೆ. ಇಲ್ಲಿ ಪ್ರಸನ್ನ ವೆಂಕಟರು ಕತೆಯನ್ನು ಯಾವ ರೀತಿಯಲ್ಲಿ ಹಿಡಿತದಲ್ಲಿ ತಂದಿದ್ದಾರೆ ಎಂಬುದನ್ನು ನೋಡಬಹುದು. ಶ್ಲೋಕ ೧೬-೧೯ ವಿದ್ಯಾಧರನು ಕೃಷ್ಣನನ್ನು ಸ್ತುತಿಸುವನು. ಧನ್ಯನಾದೆನೆನ್ನುವನು. ಮತ್ತು ವಿಮಾನದಲ್ಲಿ ಕುಳಿತು ಹೋಗುವನು. ಪುಟ ೧೧೫, ನುಡಿ ೪-೫ರಲ್ಲಿ ಈ ಭಾಗವು ಬಂದಿದೆ. ಶ್ಲೋಕ ೨೦-೩೨ ಶಂಖಚೂಡನ ವಧೆ. ಪುಟ ೧೧೬, ಪದ ೪೮, ನುಡಿ ೪-೫ ಎರಡರಲ್ಲಿಯೂ ಇದು ಇದೆ.

**ವ್ಯತ್ಯಾಸ**:—ಮೂಲ ಭಾಗವತದಲ್ಲಿ ರಾಮನು ಸಖಿಯರನ್ನು ಕಾಯುತ್ತಿನಿಂತನೆಂದು ಹೇಳಿದೆ. ಆದರೆ ಭಾಗವತದಲ್ಲಿ ಇದು ಇಲ್ಲ.

**ಅಧ್ಯಾಯ ೩೩**—

ಶ್ಲೋಕ ೧-೨೬ ವೇಣುಗೀತಾ:— ಕೃಷ್ಣನು ಕೊಳಲು ಊದುವನು. ನವಿಲುಗರಿಯನ್ನು ಚುಚ್ಚಿಕೊಂಡು ರಾಮನ ಕೂಡ ಕೊಳಲನೂದಲು ನದಿ

ಗಳು ಸಾಗವು, ಗಿತಬಳ್ಳಿಗಳು ರೋಮಾಂಚನವನ್ನು ತೋರುವವು. ಮುಂತಾದ ಸಂಗತಿಗಳು ದಾಸರ ಭಾಗವತದಲ್ಲಿ ಪುಟ ೧೧೭—೧೨೩ ಪದ ೪೯ ನುಡಿ ೧—೩೧ ವರೆಗೆ ವರ್ಣಿತವಾಗಿವೆ.

**ದಾಸರ ಭಾಗವತದಲ್ಲಿಲ್ಲದ ಅಂಶಗಳು.**

೧) ಲಕ್ಷ್ಮಿಯು ಯಾವಾಗಲೂ ಕೃಷ್ಣನ ವಕ್ಷಸ್ಥಳದಲ್ಲಿ ವಾಸಿಸುವಳು.

೨) ಮೇಘಗಳು ಗರ್ಜನೆ ಮಾಡದೆ ಕೃಷ್ಣನ ವೇಣುನಾದಕ್ಕೆ ಮನ ಸೋತು ಕೊಳಲಿನ ದನಿಗೆ ಸರಿಹೋಗುವಂತೆ ಧ್ವನಿ ಮಾಡುತ್ತವೆ.

೩) ಕೃಷ್ಣನು ಮಾಲೆಯಲ್ಲಿಯ ಮಣಿಗಳಿಂದ ಆಕಳುಗಳನ್ನು ಎಣಿಸು ವಾಗ್ಗೆ ಗೋಪಾಲಕರ ಹೆಗಲ ಮೇಲೆ ಕೈಹಾಕುವನು.

**ದಾಸರ ಭಾಗವತದಲ್ಲಿನ ಹೆಚ್ಚಿನ ಅಂಶಗಳು.**

೧) ಗೋವುಗಳ ಹೆಸರು ಪುಟ ೧೧೮—೧೧೯ ನುಡಿ ೬ "ಹಂಡೆ, ಹವಳೆ ಹುಲ್ಲುಗಚ್ಚಿ । ಕೊಂಡು ನಿಂತವಲ್ಲಿಗಲ್ಲಿ ॥" ಈ ನುಡಿಯಲ್ಲಿಯ ಅನುಪ್ರಾಸ ಬಲು ಮಧುರವಾಗಿದೆ.

೨) ಪುಟ ೧೨೧ ನುಡಿ ೨೨ರಲ್ಲಿ "ನಾಕದವರು ವ್ರಜದ ವಾಸ । ಬೇಕೆಂದು ಬಯಸಿದರಲ್ಲಿ । ಶ್ರೀಕೃಷ್ಣಾಂಘ್ರಿಯಾಶ್ರಿತರ್ಗೆ । ವೈಕುಂಠವ್ಯಾಕೆ ॥" ಇಲ್ಲಿ ಹೇಳಿದ್ದೇನಂದರೆ ಸ್ವರ್ಗದಲ್ಲಿರುವರಿಗಿಂತಲೂ ಕೃಷ್ಣನು ಯಾವಾಗಲೂ ಇರುವ ಸ್ಥಾನವಾದ ವೃಂದಾವನವು ಮೇಲು ಮತ್ತು ಗೋಪಾಲಕರು ದೇವತೆ ಗಳಿಗಿಂತಲೂ ಶ್ರೇಷ್ಠರು.

೩) ಪುಟ ೧೨೦ ನುಡಿ ೩೨—೩೫ರಲ್ಲಿ ಕೃಷ್ಣನ ಸ್ತುತಿಯನ್ನು ಎಷ್ಟು ಮಾಡಿದರೂ ದಾಸರಿಗೆ ಸಾಲದು.

**ಅಧ್ಯಾಯ ೩೬—**

ಶ್ಲೋ. ೧—೧೫ ಅರಿಷ್ಟಾಸುರನ ವಧೆ:— ಎಲ್ಲರೂ ವೃಂದಾವನದಲ್ಲಿ ಸುಖದಿಂದ ಇರುತ್ತಿರಲು ಅರಿಷ್ಟಾಸುರನು ವೃಷಭ ರೂಪವನ್ನು ಧರಿಸಿ, ಗೋವು ಗೋಪಾಲಕರನ್ನು ಪೀಡಿಸುವನು. ಕೃಷ್ಣನು ಅವನನ್ನು ಯಮಪುರಿಗೆ ಕಳುಹಿ ಸುವನು. ಪುಟ ೧೨೩ ರಿಂದ ೧೨೫ ಪದ ೫೦ ನುಡಿ ೧—೯ ರಲ್ಲಿ ಈ ಸಂಗ ತಿಯು ಬಂದಿದೆ. ಶ್ಲೋ. ೧೧ "ಪ್ರತ್ಯಪೋವಾಹ ಭಗವಾನ್ ಗಜಂ ಪ್ರತಿಗಜಂ

ಯಥಾ " ಇದು ದಾಸರ ಭಾಗವತದಲ್ಲಿಲ್ಲ. ಆದರೆ ಕೃಷ್ಣನ ಸ್ತುತಿ ಮಾತ್ರ ಹೆಚ್ಚಾಗಿ ಕಂಡುಬರುವದು. ಶ್ಲೋ. ೧೬—೨೦ ನಾರದನ ಯುಕ್ತಿ—ನಾರದನು ಕಂಸನೆಡೆಗೆ ಬಂದು ವಸುದೇವನನ್ನು ಬಂಧನದಲ್ಲಿಟ್ಟರೆ ಕೃಷ್ಣನು ಬರುವನೆಂದು ಆತನಿಗೆ ಹೇಳಿದನು. ಪುಟ ೧೨೫—೨೬. ಪದ ೫೧ ನುಡಿ ೧—೪ ರಲ್ಲಿ ಈ ಭಾಗವು ಬಂದಿದೆ. ಶ್ಲೋ. ೧೯ "ಜ್ಞಾತ್ವಾ ಲೋಹಮಯೈಃ ಪಾಶೈರ್ಬಬಂಧ ಸಹ ಭಾರ್ಯಯಾ" ಎಂಬ ಮಾತನ್ನು ಪ್ರಸನ್ನ ವೆಂಕಟದಾಸರು ಪುಟ ೧೨೬ ನುಡಿ ೪ರಲ್ಲಿ "........ಸತಿಸಹ ಕಾರಾಗೃಹದಿ ಬಂಧಿಸಲು |ಕ್ರೂರನು ಲೋಹದ ಕಾಮುಕರಿಗೆ ಹೇಳಿ |" ಎಂದು ಹೇಳಿದ್ದಾರೆ. ಶ್ಲೋ. ೨೦ ಕಂಸನು ಕೇಶಿಯನ್ನು ಕೃಷ್ಣನನ್ನು ನಾಶ ಮಾಡುವದಕ್ಕಾಗಿ ಕಳುಹುತ್ತಾನೆ. ಆದರೆ ಪ್ರಸನ್ನ ವೆಂಕಟರು "ಗೋವಳರ ಪಳ್ಳಿಗೆ ಹೋಗು" ಎಂದು ಆ ಮೇಲಿನ ಮಾತನ್ನು ಸ್ಪಷ್ಟಪಡಿಸುತ್ತಾರೆ. (ಪುಟ ೧೨೬ ನುಡಿ ೫) ಶ್ಲೋ. ೨೨—೨೬ ಆಮೇಲೆ ಕಂಸನು ಮುಷ್ಟಿಕ, ಚಾಣೂರರನ್ನು ಕರೆಯಿಸಿ ಕೃಷ್ಣನನ್ನು ಕೊಲ್ಲುವ ಬಗ್ಗೆ ಹೇಳುತ್ತಾನೆ. ಪುಟ ೧೨೬ ನುಡಿ ೬—೮ ಮತ್ತು ೧೨೭ ನುಡಿ ೧೬—೧೮ರಲ್ಲಿ ಈ ಭಾಗವು ಬಂದಿದೆ.

ಶ್ಲೋ. ೨೭—೫೦ ಕಂಸನ ಜನ್ಮವು ಹೇಗಾಯಿತು ? ಎಂಬುದನ್ನು ಹೇಳಿದೆ. ಪುಟ ೧೨೭—೧೨೮ ನುಡಿ ೯—೧೫ರಲ್ಲಿ ದಾಸರು ಈ ಸಂಗತಿಯನ್ನು ಹೇಳಿದ್ದಾರೆ. ಇಲ್ಲಿ ಅನುವಾದವು ಸುಂದರವಾಗಿದೆ. ಪ್ರಸನ್ನ ವೆಂಕಟದಾಸರು ಕೃಷ್ಣನ ಲೀಲೆಯನ್ನೂ ಆತನ ಗುಣಗಾನವನ್ನೂ ಅದ್ಭುತ ಕಾರ್ಯವನ್ನೂ ತೋರಿಸ ಹೊರಟವರು. ಇದಕ್ಕೆ (ಕಂಸನ ಜನ್ಮ) ಏಕೆ ಕೈಹಾಕಿದರೆಂಬ ಪ್ರಶ್ನೆಯು ಉದ್ಭವಿಸುವದು. ಆದರೆ ನೀಚವೃತ್ತಿಯ ಮನುಷ್ಯನ ಉತ್ಪತ್ತಿಯು ಕೂಡ ನೀಚತನದಿಂದಲೇ ಆಗಿರುವದು ಎಂಬುವನ್ನು ತೋರಿಸಲು ಇದನ್ನು ಕೊಟ್ಟಿರಬಹುದು. ಶ್ಲೋ. ೫೧—೭೨ ಕಂಸನು ಅಕ್ರೂರನನ್ನು ಕರೆಯಿಸಿ, ಕೃಷ್ಣನನ್ನು ಕೊಲ್ಲುವ ವಿಚಾರವನ್ನು ಆತನಿಗೆ ಹೇಳಿ, ಕೃಷ್ಣ ಬಲರಾಮರನ್ನು ಕರೆದು ತರಲು ಆತನನ್ನು ವೃಂದಾವನಕ್ಕೆ ಕಳುಹುವನು. ಪುಟ ೧೨೯-೧೩೦ ನುಡಿ ೧೯—೨೪ರಲ್ಲಿಯ ಮೊದಲಿನ ೨ ಚರಣಗಳ ವರೆಗೆ ಈ ಸಂಗತಿಯು ಬಂದಿದೆ. ಆದರೆ ಪ್ರಸನ್ನ ವೆಂಕಟರ ಭಾಗವತದಲ್ಲಿಯ ಪುಟ ೧೩೦ ನುಡಿ ೨೪ ನೆಯ ಕೊನೆಯ ಎರಡನೇ ಪಾದ, ಮತ್ತು ೨೫ನೆಯ ಮೊದಲಿನ ೩ ಚರಣ

ಗಳಲ್ಲಿ ಇದ್ದ "ದುರುಳರು ಉಚ್ಚಪದಕೆ ಕರವಿಕ್ಕಲು । ಹರಿಯು ಸಹಾಯನಾಗುವನೇ । ...........ಹರಿ ಸ್ಮರಣೆಯಿಂದ ॥" ಎಂಬ ಸಂಗತಿಯು ಹೆಚ್ಚಿನದು ಎಂದು ಹೇಳಬಹುದು. "ದುರುಳರು........ಕರವಿಕ್ಕಲು ಹರಿಯು ಸಹಾಯವಾಗುವನೇ ? " ಎಂಥ ಮಾರ್ಮಿಕವಾದ ಮಾತಿದು. ನೀಚರು ಯಾವಾಗಲೂ ನೀಚ ಕೃತ್ಯಕ್ಕೇ ಕೈಹಾಕುವರು. ಮತ್ತು ಅವರಿಗೆ ಎಂದಿಗೂ ಯಶಸ್ಸು ದೊರೆಯಲಾರದು.

**ಅಧ್ಯಾಯ ೩೭—**

ಶ್ಲೋ. ೧—೮. ಕೇಶಿ ರಾಕ್ಷಸನ ವಧ— ಕಂಸನ ಆಜ್ಞೆಯ ಪ್ರಕಾರ ಕೇಶಿಯು ಹಯವೇಷಧಾರಿಯಾಗಿ ವೃಂದಾವನಕ್ಕೆ ಬರುವನು. ಮತ್ತು ಹೇಷಾರವ ಮಾಡಹತ್ತುವನು. ಕೃಷ್ಣನು ಎದುರಾಗುವನು. ಕೇಶಿಯು ಹಿಂಗಾಲಿನಿಂದ ಕೃಷ್ಣನನ್ನು ಒದೆಯುವನು. ಅವುಗಳನ್ನು ಹಿಡಿದು ಕೃಷ್ಣನು ಕೇಶಿಯನ್ನು ನೂರು ಬಿಲ್ಲು ಪ್ರಮಾಣ ಒಗೆಯುವನು. ಆದರೆ ಕೇಶಿಯು ಎದ್ದು ಬಂದು ಕೃಷ್ಣನ ಕೈ ಕಚ್ಚುವನು. ಕೇಶಿಯ ಹಲ್ಲು ಮುರಿಯುವವು. ಕೃಷ್ಣನು ತನ್ನ ಕೈಯನ್ನು ಉಬ್ಬಿಸಲು ಕೇಶಿಯ ಶ್ವಾಸವು ನಿಂತು, ಲದ್ದಿಯನ್ನು ಹಾಕಿ ಕೇಶಿಯು ನೆಲಕ್ಕುರುಳುವನು; ಪ್ರಾಣವನ್ನು ಬಿಡುವನು. ದೇವತೆಗಳು ಹೂವಿನ ಮಳೆಗರೆಯುವರು. ಈ ಲೀಲೆಯು ಪುಟ ೧೩೦—೧೩೨ ಪದ ೫೭ ನುಡಿ ೧—೮ ರಲ್ಲಿ ವರ್ಣಿತವಾಗಿದೆ. "ಲೆಂಡಂ ವ್ಯಸೃಜನ್" ಎಂಬುದರ ಅರ್ಥವನ್ನು ದಾಸರು ತಮ್ಮ ಕೃತಿಯಲ್ಲಿ ತಂದಿಲ್ಲ. ಶ್ಲೋ. ೫ರಲ್ಲಿಯ "ಧನುಃ ಶತಾಂತರೇ" ಎಂಬ ನುಡಿಯ ಅರ್ಥವನ್ನು ದಾಸರು ಪುಟ ೧೩೧ ನುಡಿ ೫ರಲ್ಲಿ "ನೂರು ಬಿಲ್ಲ ಪ್ರಮಾಣ ಹಿಂಗದೆ" ಎಂದು ಸರಿಯಾದ ಅರ್ಥವನ್ನು ತಂದಿದ್ದಾರೆ.

ಶ್ಲೋ. ೧೦—೧೫ ಕೃಷ್ಣನು ಕೇಶಿಯನ್ನು ಸಂಹರಿಸಿದ್ದಕ್ಕಾಗಿ ನಾರದರು ಆತನನ್ನು ಸ್ತುತಿಸುವರು. ಈ ಭಾಗವು ಪದ ೫೩ ಪುಟ ೧೩೨—೧೩೩ ನುಡಿ ೧—೨ ಮತ್ತು ೩ರಲ್ಲಿಯ ಮೊದಲನೆಯ ೨ ಪಾದಗಳಲ್ಲಿ ವರ್ಣಿತವಾಗಿದೆ. ೫ನೇಯ ಶ್ಲೋಕದ ಅರ್ಥವನ್ನು ದಾಸರು ಪುಟ ೧೩೩ ನುಡಿ ೧ ರಲ್ಲಿ "ಸೃಷ್ಟಾರ ಪಾತಾರ, ಹಂತಾರ । ನಿಯಂತಾರ ॥" ಎಂಬ ಈ ನಾಲ್ಕು ಶಬ್ದಗಳಲ್ಲಿ ತಂದಿದ್ದಾರೆ. ಇವರಲ್ಲಿಯ ದೀರ್ಘ ಸ್ವರಗಳು ಪರಮಾತ್ಮನ ವಿಶಾಲತೆಯನ್ನು ಸೂಚಿಸುತ್ತವೆ.

ಶ್ಲೋಕ ೧೬—೨೬, ನಾರದರು ಕೃಷ್ಣನಿಗೆ "ನೀನು ಚಾಣೂರ ಮುಷ್ಟಿಕರನ್ನು ಕೊಲ್ಲುವೆ, ಪಾರಿಜಾತ ತರುವೆ, ಸತ್ಯಭಾಮೆಯನ್ನು ದೊರಕಿಸುವೆ, ಗುರುಗಳ ಮಗುವನ್ನು ತರುವೆ," ಎಂದು ಭವಿಷ್ಯ ಹೇಳಿದ ಸಂಗತಿಯು ದಾಸರ ಭಾಗವತದಲ್ಲಿದೆ. ಪುಟ ೧೩೩—೧೩೪ ಪದ ೫೩ ನುಡಿ ೩—೯ ದಾಸರ ಕೃತಿಯಲ್ಲಿಯು ಈ ನುಡಿಗಳಲ್ಲಿಯು ಬಿಡಿಬಿಡಿ ನುಡಿಗಳು ಹೇಗೆ ಸರಿಯಾಗಿ ಬಂದಿವೆ ಎಂಬುದನ್ನು ನೋಡಬಹುದು.

ಶ್ಲೋ. ೨೬—೩೪ ವ್ಯೋಮಾಸುರನ ವಧೆ—ಕೃಷ್ಣನನ್ನು ಕೂಡಿಕೊಂಡು ಗೋಪಾಲಕರು ಆಡುವ ಕಾಲಕ್ಕೆ ವ್ಯೋಮಾಸುರನು ಗೋಪಾಲ ವೇಷವನ್ನು ಧರಿಸಿ ಒಬ್ಬೊಬ್ಬರನ್ನು ಎತ್ತಿಕೊಂಡು ಹೋಗುವನು. ಈ ಸಂಗತಿಯು ಕೃಷ್ಣನಿಗೆ ತಿಳಿಯಲು ಕೃಷ್ಣನು ಆತನನ್ನು ಕೊಲ್ಲುವನು. ದಾಸರ ಭಾಗವತದಲ್ಲಿ ಪುಟ ೧೩೫—೧೩೬ ಪದ ೫೪ ನುಡಿ ೧-೬ರಲ್ಲಿ ಈ ಸಂಗತಿಯು ಬಂದಿದೆ.

ಶ್ಲೋ. ೨೮ರಲ್ಲಿದ್ದ "ಮಯಪುತ್ರೋ ಮಹಾಮಾಯೋ ವ್ಯೋಮಃ" ಎಂಬ ಅರ್ಥವುಳ್ಳ ನುಡಿಯು ವಿಸ್ತಾರವಾಗಿ ದಾಸರ ಕೃತಿಯಲ್ಲಿ ಬಂದಿಲ್ಲ.

**ಅಧ್ಯಾಯ ೩೬—**

ಶ್ಲೋ. ೧—೩೮. ಅಕ್ರೂರನು ಗೋಕುಲಕ್ಕೆ ಹೊರಡುವನು. ದಾರಿಯಲ್ಲಿ ಹೋಗುವಾಗ್ಗೆ ಕೃಷ್ಣನ ದರ್ಶನದ ಬಗ್ಗೆ ವಿಚಾರ ಮಾಡುವನು. ತನ್ನ ಸುಕೃತದ ಬಗ್ಗೆ ವಿಚಾರ ಮಾಡುವನು. ಆಮೇಲೆ ವ್ರಜಕ್ಕೆ ಬರುವನು. ಕೃಷ್ಣ ಬಲರಾಮರನ್ನು ಕಂಡ ಕೂಡಲೆ ದಾರಿಯಲ್ಲಾದ ಶ್ರಮವು ಪರಿಹಾರವಾಗುವದು. ದಾಸರು ತಮ್ಮ ಭಾಗವತದಲ್ಲಿ ಮಾತ್ರ ಈ ಅಧ್ಯಾಯದ ಸಾರವನ್ನು ತಂದಿದ್ದಾರೆ. ಪುಟ ೧೩೭—೧೩೫ ಪದ ೫೫ ನುಡಿ ೧-೫೭.

**ಅಧ್ಯಾಯ ೩೭—**

ಶ್ಲೋ. ೧—೧೫ ಶ್ರೀಕೃಷ್ಣನು ಅಕ್ರೂರನಿಗೆ ಬಂದ ಕಾರಣವನ್ನು ಕೇಳುವನು, ಆತನು ಹೇಳಿದ ಕೂಡಲೆ ನಕ್ಕು, ಕೃಷ್ಣನು ಆ ಸಂಗತಿಯನ್ನು ನಂದನಿಗೆ ತಿಳುಹಿಸುವನು. ನಂದನು ಮಧುರೆಗೆ ಹೋಗಲು ಸಿದ್ಧನಾಗುವನು; ಮತ್ತು ಹಾಲು ಮೊಸರು ಮತ್ತು ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಬರಲು ಗೋಪಾಲಕರಿಗೆ ಹೇಳುವನು. ಆ ವೃತ್ತಾಂತವು ಗೋಪಿಯರಿಗೆ ತಿಳಿದು, ಅವರು ತಮ್ಮ ಆಭರಣಗಳನ್ನು ಬಿಸುಟು, ಮೂರ್ಛೆ ಹೊಂದುವರು. ಈ

ವೃತ್ತಾಂತವು ಪುಟ ೧೪೫—೧೪೭ ಪದ ೫೬ ನುಡಿ ೧-೯ ರಲ್ಲಿ ಬಂದಿದೆ. ಶ್ಲೋ. ೧೬—೧೮ ಬ್ರಹ್ಮನಿಗೆ ಗೋಪಿಯರು ದೋಷ ಕೊಡುವರು. ಪುಟ ೧೪೭ ನುಡಿ ೧೦—೧೩ರಲ್ಲಿ ಈ ಸಂಗತಿಯು ಕಾಣುವದು.

ಶ್ಲೋ. ೧೯—೨೪ ಕೃಷ್ಣನ ಬಗ್ಗೆ ಮಾತು ಕತೆಗಳು ನಡೆಯುವವು. ಕೃಷ್ಣನು ಮಧುರೆಗೆ ಹೋಗುವನು. ಇನ್ನು ತಿರುಗಿ ಬರುವದಿಲ್ಲ. ಹಿರಿಯರು ಇತ್ತ ಲಕ್ಷ ಕೊಡುವದಿಲ್ಲ. ಗೋಪಾಲಕರು ಸಿದ್ಧರಾಗುವರು. ಈ ಮಾತು ಪುಟ ೧೪೮ ನುಡಿ ೧೬ರಿಂದ ೨೧ರಲ್ಲಿ ಬಂದಿದೆ. ಆದರೆ ದಾಸರ ಭಾಗವತ ದಲ್ಲಿಯ "ಪ್ರಿಯಾತ್ ಪ್ರೀಯನ ಅಗಲಿಸಿದವಸಿಗತಿ ಪಾಪ ||........ ನುಡಿ ೨೦ ಪುಟ ೧೪೮. ಈ ಸಂಗತಿಯು ಹೆಚ್ಚಿನದು. ಸತಿಯನ್ನು ಪತಿಯಿಂದ ಅಗಲಿ ಸುವ ಕೆಲವು ಸಂಗತಿಗಳು ದಾಸರ ಕಾಲವಲ್ಲಿ ನಡೆದಿರಬಹುದು.

ಶ್ಲೋ. ೨೫—೩೪ ಗೋಪಿಯರು ಕೃಷ್ಣನನ್ನು ತಡೆಯಬೇಕೆಂದು ವಿಚಾರ ಮಾಡುವರು. ಗೋಪರು ಬಂಡಿಗಳನ್ನು ಹೊರಡಿಸುವರು. ಕೃಷ್ಣನು ಅಕ್ರೂರನ ರಥವನ್ನೇರಿ ಹೊರಡುವನು. ಗೋಪಿಯರೂ ಹೊರಡುವರು. ಅವ ರನ್ನು ಕೃಷ್ಣನು ಸಮಾಧಾನಪಡಿಸುವನು; ರಥದ ಧೂಳಿಯು ಕಾಣುವ ವರೆಗೆ ಗೋಪಿಯರು ಕೃಷ್ಣನನ್ನು ನೋಡುವರು. ಕೃಷ್ಣನ ಲೀಲೆಗಳನ್ನು ಹಾಡುತ್ತ ಗೋಪಿಯರು ಕಾಲ ಕಳೆಯುವರು. ಇದು ಪುಟ ೧೪೯—೧೫೦ ನುಡಿ ೨೩-೨೪ ಇಲ್ಲಿದೆ. ಶ್ಲೋ. ೩೪ ರಲ್ಲಿ "ವಿಶೋಕಾ ಅಹನೀ ನಿನ್ಯುರ್ಗಾಯಂತ್ಯಃ ಪ್ರಿಯಚೇಷ್ಟಿತವ್ ||" ಎಂದು ಇದೆ. ಆದರೆ ದಾಸರು ಇವನ್ನು ವಿಸ್ತಾರವಾಗಿ ಕೊಟ್ಟಿದ್ದಾರೆ. ಪುಟ ೧೫೦ ನುಡಿ ೩೨ರಿಂದ ೩೪.

ಶ್ಲೋ. ೩೫—೫೩ ಅಕ್ರೂರನು ವೇಗದಿಂದ ರಥ ಹೊಡೆದು, ಯಮು ನೆಗೆ ಬಂದು ರಥವಿಳಿದು ಸ್ನಾನಕ್ಕೆ ಹೊರಡುವನು. ರಾಮ ಕೃಷ್ಣರು ನೀರು ಕುಡಿದು, ಮೇಲೆ ಬರುವರು. ಅಕ್ರೂರನು ನೀರಿನಲ್ಲಿ ಮುಳುಗಿ ಮಂತ್ರ ಪಠಿ ಸಲು ಕೃಷ್ಣನು ಮುಂದೆ ನಿಲ್ಲುವನು. ಅಕ್ರೂರನಿಗೆ ಸಂಶಯ ಬಂದು ಮೇಲೆ ನೋಡುವನು. ಕೃಷ್ಣನು ಕುಳಿತಲ್ಲಿಯೇ ಕುಳಿತದ್ದನ್ನು ಕಂಡು ನೀರಿನಲ್ಲಿ ಮುಳುಗಿ ಮಂತ್ರ ಪಠಿಸಲು ಮತ್ತೆ ಮುಂದೆ ಬಂದು ನಿಲ್ಲುವನು. ಇದನ್ನು ಕಂಡು ತಾನು ಧನ್ಯನಾದೆನೆಂದು ಕೃಷ್ಣನಿಗೆ ಕೈ ಮುಗಿಯುವನು. ಈ ಭಾಗವು ಪುಟ ೧೫೧—೧೫೨ ನುಡಿ ೩೫ ರಿಂದ ೪೭ ರಲ್ಲಿ ಬಂದಿದೆ. ಇಲ್ಲಿ ಪ್ರಸನ್ನ

ವೆಂಕಟರಿಗೆ ನಿಜವಾದ ಭಕ್ತಿಯನ್ನೂ ಅದರಿಂದ ಆಗುವ ಲಾಭವನ್ನೂ ತೋರಿಸ ಬೇಕಾಗಿದೆ. ಕಾರಣವೇ ಈ ಭಾಗವತವನ್ನು ದಾಸರು ವಿವರಿಸುತ್ತಿದ್ದಾರೆ.

**ಅಧ್ಯಾಯ ೩೮—**

ಶ್ಲೋ. ೧ ಪ್ರಸನ್ನ ಮನಸ್ಕನಾದ ಅಕ್ರೂರನು ಕೃಷ್ಣನನ್ನು ಭಕ್ತಿಯಿಂದ ಆನಂದಪಡಿಸುವನು. ಶ್ಲೋ. ೨ ಅಕ್ರೂರನ ಮಾತು—"ನಿನಗೆ ನಮಸ್ಕಾರ. ಎಲ್ಲಕ್ಕೂ ನೀನೇ ಕಾರಣನು. ನಿನ್ನ ನಾಭಿಯಿಂದ ಬ್ರಹ್ಮೋತ್ಪತ್ತಿ. ನಿನ್ನಿಂದ ಜಗತ್ತು." ಪ್ರಸನ್ನ ವೆಂಕಟರ ಭಾಗವತದಲ್ಲಿದ್ದ ಸಂಗತಿಯೇನಂದರೆ, "ನೀನು ಹದಿನಾಲ್ಕು ಭುವನದ ಒಡೆಯ. ನಿನ್ನ ನಾಭಿ ಕಮಲದಲ್ಲಿ ಬ್ರಹ್ಮನನ್ನು ಹುಟ್ಟಿಸಿ, ಆತನಲ್ಲಿ ಹೋಗಿ ಜಗವನ್ನು ಹುಟ್ಟಿಸುವೆ. ಜೀವರ ಕರ್ಮಗಳನ್ನು ಮೂರು ಗುಣಗಳಿಂದ ಬಂಧಿಸುವೆ." ಇಷ್ಟು ವ್ಯತ್ಯಾಸವಿದೆ. ಪುಟ ೧೫೩—೧೫೪ ಪದ ೫೭ ನುಡಿ ೧-೩ ಶ್ಲೋಕ ೩ ಪಂಚತತ್ವ, ದಶೇಂದ್ರಿಯಗಳನ್ನು ನಿರ್ಮಿಸಿಹೆ. ನಿನ್ನ ಜ್ಞಾನವು ಯಾರಿಗೂ ಆಗದು. ಆದರೆ ಪ್ರಸನ್ನ ವೆಂಕಟರ ಭಾಗವತದಲ್ಲಿ ಬೇರೆಯಾಗಿದೆ. "ಎಲ್ಲ ಅಧಿಕಾರವನ್ನು ದೇವಾ ಮುಖ್ಯ ಪ್ರಾಣನಿಗೆ ಕೊಟ್ಟಿರುವೆ. ಸುರರೆಲ್ಲರೂ ಆತನ ಸ್ವಾಧೀನವಿರುವರು. ಎಲ್ಲವೂ ನಿನ್ನ ಆಜ್ಞೆಯಲ್ಲಿರುವವು. ಸುರರಿಗೆ ಸ್ವಾತಂತ್ರ್ಯವಿಲ್ಲ. ನೀನು ಎಲ್ಲರ ಹೃದಯದಲ್ಲಿರುವೆ. ನೀನು ಮಾಯೆಯಿಂದ ಮೋಹಿಸುವೆ. ಅಜ್ಞಾನವನ್ನು ತುಂಬಿರುವೆ." ಹೀಗೆ ದ್ವೈತ ತತ್ವಗಳ ವಿಚಾರವು ತುಂಬಿದೆ. ಪುಟ ೧೫೪ ನುಡಿ ೪-೬ ನೋಡಬಹುದು. ಶ್ಲೋ. ೪ ಬ್ರಹ್ಮಾದಿ ದೇವತೆಗಳು ನಿನ್ನ ಮಾಯೆಯಿಂದ ನಿನ್ನನ್ನು ತಿಳಿಯಲು ಅಸಮರ್ಥರಾಗಿದ್ದಾರೆ. ಶ್ಲೋ. ೫—೧೦ ಜನರು ನಿನ್ನನ್ನು ನಾನಾ ಪ್ರಕಾರವಾಗಿ ಭಜಿಸುವರು. ಇದು ದಾಸರ ಭಾಗವತವಲ್ಲಿ ಬಂದಿದೆ. ಪುಟ ೧೫೪—೧೫೫ ನುಡಿ ౭-೯.

**ವ್ಯತ್ಯಾಸ :—** ಶಿವೋಪಾಸಕರು— ಶಿವನು ಉಪದೇಶ ಮಾಡಿದ ಪಾಶುಪತ ಮಾರ್ಗದಿಂದ ಶಿವನ ರೂಪಿಯಾದ ನಿನ್ನನ್ನು ಪೂಜಿಸುವರು ಎಂದು ಮೂಲದಲ್ಲಿದ್ದು, ದಾಸರ ಭಾಗವತದಲ್ಲಿಲ್ಲ. ಶ್ಲೋ. ೧೧ ನದಿ, ಹಳ್ಳ ಹೇಗೆ ಸಮುದ್ರಕ್ಕೆ ಕೂಡುವವೋ ಅದೇಪ್ರಕಾರ ಎಲ್ಲ ಮಾರ್ಗಗಳು ನಿನ್ನನ್ನು ಕೂಡುವವು.

**ವ್ಯತ್ಯಾಸ**:— ದಾಸರ ಭಾಗವತವಲ್ಲಿ ಕಾಣುವದೇನಂದರೆ ನದಿ ಹಳ್ಳಗಳು ಸಮುದ್ರಕ್ಕೆ ಜಿರಿವಂತೆ ಜ್ಞಾನಿಗಳು ಸುರ, ಋಷಿ, ಪಿತೃಗಳ ತರ್ಪಣವನ್ನು ನಿನಗೆ ಅರ್ಪಿಸುವರು. ನಿನ್ನ ವಿನಾ ಅರ್ಚನೆಯಾಗದು, ಎನ್ನುವರು. ಪುಟ ೧೫೫, ನುಡಿ ೧೧-೧೨.

ಶ್ಲೋ. ೧೨. ಸತ್ವ, ರಜ, ತಮ ಇವು ನಿನ್ನ ಪ್ರಕೃತಿಯ ಗುಣಗಳು. ಇವುಗಳಲ್ಲಿಯೇ ಬ್ರಹ್ಮನಿಂದ ಸ್ಥಾವರಗಳ ವರೆಗೆ ಎಲ್ಲವೂ ತೊಡಗಿರುವವು. ಆದರೆ ಪ್ರಸನ್ನ ವೆಂಕಟರ ಭಾಗವತದಲ್ಲಿ ಸತ್ವ, ರಜ, ತಮ ಇವು ಬ್ರಹ್ಮನಿಂದ ಆರಂಭಿಸಿ ಎಲ್ಲವನ್ನೂ ಆಳುತ್ತವೆ ಎಂದಿದೆ. ಪುಟ ೧೫೫, ನುಡಿ ೧೩, ಶ್ಲೋ. ೧೩ ಎಲ್ಲವೂ ದೇವರ ಮಾಯೆ ಮತ್ತು ಆತನ ( ಪರಮಾತ್ಮನ ) ಅಧೀನ. ದಾಸರ ಭಾಗವತದಲ್ಲಿ ಹೀಗೆಯೇ ಇದೆ. ಪುಟ ೧೫೫, ನುಡಿ ೧೪.

ಶ್ಲೋ. ೧೪-೧೫ ವಿರಾಟಸ್ವರೂಪದ ವರ್ಣನೆಯು ಕಂಡುಬರುವದು. ದಾಸರ ಭಾಗವತದಲ್ಲಿ ಈ ಭಾಗವು ಇದ್ದು, ಅನುವಾದವು ಸುಂದರವಾಗಿದೆ. ಆದರೆ ಮೂಲದಲ್ಲಿ ಅಗ್ನಿಯು ನಿನ್ನ ಮುಖವೆಂದು ಹೇಳಿದರೆ, ದಾಸರ ಭಾಗವತದಲ್ಲಿ ನಿನ್ನ ಮುಖದಿಂದ ಅಗ್ನಿ ಹುಟ್ಟಿತ್ತು ಎಂದು ಹೇಳಿದೆ. ೧೫೫-೧೫೬, ನುಡಿ ೧೫-೧೮.

ಶ್ಲೋ. ೧೬-೧೭ ದೇವರು ಎಲ್ಲಕ್ಕೂ ಕಾರಣನು. ಇದೇ ಮಾತನ್ನು ಪ್ರಸನ್ನ ವೆಂಕಟರೂ ಹೇಳಿದ್ದಾರೆ. ಪುಟ ೧೫೬, ನುಡಿ ೧೯-೨೩, ಮೂಲದಲ್ಲಿಯ ಹೋಲಿಕೆಯು ಸಹಜ ಸುಂದರವಾಗಿ ದಾಸರ ಭಾಗವತದಲ್ಲಿ ಬಂದಿದೆ. ಶ್ಲೋ. ೧೬ರಲ್ಲಿದ್ದ “ ಯಥಾ ಜಲೇ ಸಂಜಿರಂತೇ ಜಲೌಕಸೋಽಪ್ಯುದುಂಬರೇ। ವಾ ಮಶಕಾ ಮನೊಮಯೇ॥” ಎಂದಂತೆ ದಾಸರ ಭಾಗವತ ಪುಟ ೧೫೬, ನುಡಿ ೨೦ರಲ್ಲಿ “ ಜಲಜಂತುಗಳ ಲಯವು ಜಲದಿ । ಅತ್ತಿ-ಫಲದ್ದುಳಕೆ ಲಯವದೆ ಫಲದಿ।” ಎಂದು ದಾಸರು ಹೇಳಿದ್ದಾರೆ. ಶ್ಲೋ. ೧೮—೨೩ ಮತ್ಸ್ಯಾವತಾರದಿಂದ ಕಲ್ಕಿಯ ವರೆಗೆ ದಶಾವತಾರದ ವರ್ಣನೆಯಿದೆ. ಪುಟ ೧೫೬-೧೫೭, ನುಡಿ ೨೭-೪೯ರಲ್ಲಿ ಬಂದಿವೆ. ಸಂಸ್ಕೃತದಲ್ಲಿಯ ಅರ್ಥವನ್ನು ಕನ್ನಡದಲ್ಲಿ ಎಷ್ಟು ಅರ್ಥವತ್ತಾಗಿ ದಾಸರು ತಂದಿದ್ದಾರೆ. ಅದನ್ನು ಕೆಳಗಿನ ನುಡಿಗಳಲ್ಲಿ ನೋಡಬಹುದು.

ಶ್ಲೋಕ ೧೮ “ ಕಾರಣಮತ್ಸ್ಯಾಯ ಪ್ರಲಯಾಬ್ಧಿಚರಾಯ ಚ ”

ಪುಟ ೧೫೬, ನುಡಿ ೨೪ " ಲಯಜಲಧಿಗಾವೋಘಮೀನ ". ಶ್ಲೋಕ ೨೧ " ದೃಪ್ತಕ್ಷತ್ರವನಚ್ಛಿದೇ ". ಪುಟ ೧೫೭, ನುಡಿ ೨೬ " ದೃಪ್ತನೃಪಕುಲಕುಜ ಕುಠಾರಾ ". ಇಲ್ಲಿ ಪ್ರಾಸ ನೋಡಬಹುದು. ಶ್ಲೋಕ ೨೩. " ನಮೋ ಬುದ್ಧಾಯ ಶುದ್ಧಾಯ ". ಪುಟ ೧೫೭, ನುಡಿ ೨೯ " ನಮೋ ಸತ್ಸುಬುದ್ಧಿ ಬುದ್ಧ ". ಶ್ಲೋ. ೨೪-೩೧ ಭವಾಬ್ಧಿಯಿಂದ ದಾಟಿಸಲು ಅಕ್ರೂರನ ಪ್ರಾರ್ಥನೆ ಇದೆ. ಪುಟ ೧೫೭-೧೫೯, ನುಡಿ ೩೦-೪೩ರಲ್ಲಿ ಈ ಭಾಗವು ಬಂದಿದೆ. ದಾಸರ ಭಾಗವತದಲ್ಲಿ ಹೆಚ್ಚಿನ ಅಂಶವೇನೆಂದರೆ, " ನಿನ್ನಾಶ್ರಯದಿ ಬದಿಯಲಿರುವೆ ". ಪುಟ ೧೫೮, ನುಡಿ ೩೪ "ನಿನ್ನ ಬದಿಯಲಿರುವೆ" ಎಂದು ದಾಸರು ಸಾಮೀಪ್ಯ ಮುಕ್ತಿಯನ್ನು ಬೇಡಿದ್ದಾರೆ. ಇದೇ ಪ್ರಕಾರ "ಸಾಮೀಪ್ಯ ಮುಕ್ತಿಯನೀಯೋ" ಎಂದು ಪ್ರಸನ್ನ ವೆಂಕಟರ ಕೀರ್ತನೆಗಳು ಭಾಗ ೧, ಪುಟ ೪೨ರಲ್ಲಿದೆ. ಹೆಚ್ಚಾಗಿ–ಶ್ರೀಪ್ರಸನ್ನ ವೆಂಕಟದಾಸರು ಸಂಸ್ಕೃತಕ್ಕಿಂತಲೂ ಕನ್ನಡದಲ್ಲಿ ಮಿರಿರುವರು. ಎಂದು ಹೇಳಲು ಕೆಳಗಿನ ನುಡಿಯು ಸಾಕ್ಷಿಯಾಗಿದೆ.

ಶ್ಲೋಕ ೨೭ರಲ್ಲಿ " ಯಥಾ ಅಬುಧೋ ಜಲಂ ಹಿತ್ವಾ ಪ್ರತಿಚ್ಛನ್ನಮ್ ತದುದ್ಭವೈಃ । ಅಭ್ಯೇತಿ ಮೃಗತೃಷ್ಣಾಂ ವೈ ತದ್ವತ್ ತ್ವಾಽಹಮ್ ಪರಾಂಙ್ಮುಖಃ " ಇದನ್ನೇ ದಾಸರು ಪುಟ ೧೫೮, ನುಡಿ ೩೪ರಲ್ಲಿ " ಸನ್ನೀರ ಜರಿದು ಬಿಸಿಲದೊರೆಗೆ ಓಡಿ । ಬನ್ನಬಡುವೆ ಭವಾಟವಿಯೊಳಗೆ ॥ " ಎಂದು ಮುದ್ದು ಮಾತಿನಲ್ಲಿ ಹೇಳಿದ್ದಾರೆ.

**ಅಧ್ಯಾಯ ೪೯—**

ಶ್ಲೋಕ ೧-೧೮ ಅಕ್ರೂರನು ನೀರಿನಿಂದ ಏಳಲು ಕೃಷ್ಣನು ಆತನಿಗೆ ' ಏನು ಕಂಡೆ ' ಎಂದು ಕೇಳುವನು. ಆದಕ್ಕೆ ಅವನು ' ನಿನ್ನ ಮಾಯೆ ' ಎಂದು ಉತ್ತರ ಕೊಡುವನು. ಆಮೇಲೆ ಮಧುರೆಗೆ ಹೋಗುವರು. ಅಕ್ರೂರನು ಕೃಷ್ಣನಿಗೆ ತನ್ನ ಮನಗೆ ಬರಬೇಕೆಂದು ಪ್ರಾರ್ಥಿಸುವನು. ಆಗ್ಗೆ ಕೃಷ್ಣನು " ಕಂಸನನ್ನು ಕೊಂದು ನಿನ್ನ ಮನೆಗೆ ಬರುವೆನು " ಎಂದು ಹೇಳುವನು. ಈ ಸಂಗತಿಯು ದಾಸರ ಕೃತಿಯಲ್ಲಿ ಬಂದಿದೆ. ಪುಟ ೧೫೯-೧೬೨, ಪದ ೫೮, ನುಡಿ ೧-೨೧ ಪ್ರಸನ್ನ ವೆಂಕಟರು ಹಿಂದೆ ಪುಟ ೨, ನುಡಿ ೩ರಲ್ಲಿ ಹೇಳಿದ ಮಾತನ್ನೇ ಮತ್ತೆ ಇಲ್ಲಿ ಹೇಳುತ್ತಾರೆ. ಪುಟ ೧೬೩, ನುಡಿ ೨೪. ಸಂಸ್ಕೃತ

ದಷ್ಟು ಮನ್ನಣೆ ಕನ್ನಡಕ್ಕೆ ದಾಸರ ಕಾಲಕ್ಕೆ ದೊರೆತಿರಲಿಲ್ಲವೆಂದು ತಿಳಿಯು ತ್ತದೆ. ಶ್ಲೋಕ ೧೯-೩೦ ಮಧುರೆಯ ವರ್ಣನೆ—ರಾಮಕೃಷ್ಣರು ಪಟ್ಟಣ ವನ್ನು ನೋಡಲು ಹೊರಡುತ್ತಾರೆ. ಅವರನ್ನು ನೋಡಲು ಜನರು ಬರು ತ್ತಾರೆ. ಪುಟ ೧೬೩-೧೬೫, ಪದ ೫೯, ನುಡಿ ೧-೧೫ರಲ್ಲಿ ಈ ಭಾಗವು ಬಂದಿದೆ.

ಹೆಚ್ಚಿನ ಅಂಶ:—ಪುಟ ೧೬೪, ನುಡಿ ೩ರಲ್ಲಿ

" ಸುಬರುಹಿ ಶುಕಪಿಕೌಘ । ಶುಭರವ ಶ್ರವಣಗಳ್ಗೆ ॥ "

ಶ್ಲೋಕ ೩೧-೩೮ ರಜಕನ ವಧೆಯ ಬಗ್ಗೆ ಹೇಳಿದೆ. ಇದು ದಾಸರ ಭಾಗವತದ ಪುಟ ೧೬೫ರಿಂದ ೧೬೬, ನುಡಿ ೧೬-೧೯ರಲ್ಲಿ ಬಂದಿದೆ. ಶ್ಲೋಕ ೩೮ರಲ್ಲಿ ವರ್ಣಿತವಾದ " ವಿಸೃಜ್ಯ ಭುವಿಕಾನಿಚಿತ್ ॥ " ಇದನ್ನು ದಾಸರು ಪುಟ ೧೬೬, ನುಡಿ ೧೯ರಲ್ಲಿ " ಅವನಿಗ್ಹಾಸಿಬಿಟ್ಟ " ಎಂದು ಸಹಜ ಸುಂದರವಾದ ಭಾಷೆಯಲ್ಲಿ ಚಿತ್ತಾರನ ಕೈಚಳಕವನ್ನು ತೋರಿಸಿದ್ದಾರೆ.

ಶ್ಲೋಕ ೩೯-೪೧ ಸಿಂಪಿಗಳು (ಯಾವಕ) ಬೇಡಿದ ವಸ್ತುಗಳನ್ನು ರಾಮ ಕೃಷ್ಣರಿಗೆ ಕೊಟ್ಟದ್ದಕ್ಕಾಗಿ ಅವರು ಆತನಿಗೆ ಸವಿಯದ ಆನಂದವನ್ನು ಕೊಡುವರು. ಪುಟ ೧೬೬, ನುಡಿ ೨೦-೨೧ರಲ್ಲಿ ಇದನ್ನು ದಾಸರು ವರ್ಣಿ ಸಿದ್ದಾರೆ.

ಶ್ಲೋಕ ೪೨–೫೧ ರಾಮಕೃಷ್ಣರು ಹೂಗಾರ ಸುದಾಮನ ಮನೆಗೆ ಹೋಗಿ ಪೂಮಾಲೆಗಳನ್ನು ಬೇಡುತ್ತಾರೆ. ಆತನು ಅವರನ್ನು ಪೂಜಿಸಿ, ಮಾಲೆಗಳನ್ನು ಕೊಡುತ್ತಾನೆ. ಮತ್ತು ಭಕ್ತಿಯನ್ನು ಬೇಡುತ್ತಾನೆ. ರಾಮ ಕೃಷ್ಣರು ಅದನ್ನು ಕೊಡುತ್ತಾರೆ. ಪುಟ ೧೬೬-೧೬೭, ನುಡಿ ೨೨-೨೯ರಲ್ಲಿ ಇದು ವರ್ಣಿತವಾಗಿದೆ. ದಾಸರ ಭಾಗವತದಲ್ಲಿಯ ಹೆಚ್ಚಿನ ಅಂಶಗಳು:—

( i ) ನಿಮ್ಮಿಂದೆ ಧರ್ಮಕ್ಕೆ ಕ್ಷೇಮವು । ಸರ್ವರಿಗೆ ।........ಪರಿಚಾರ ಕ ನಾ । ಪುಟ ೧೬೭, ನುಡಿ ೨೫-೨೬.

( ii ) ದಶಮಸ್ಕಂದವಾರ್ಧಿಲಿ । ನಿಶಿದಿನ....ಮುಕ್ತಿಗೈದುವರು ॥ " ಪುಟ ೧೬೭, ನುಡಿ ೨೯.

( iii ) ದ್ವೈತ ತತ್ವಗಳು :— " ತಮ್ಮತಮ್ಮ ಯೋಗ್ಯತೆಯಂತೆ । ಕರ್ಮವ ಮಾಡ್ಯೆಂಬರು " ಪುಟ ೧೬೭, ನುಡಿ ೨೫.

( iv ) ಹರಿದಾಸರ ನುಡಿಯು:— "ನಿಮ್ಮ ಭೃತ್ಯಭೃತ್ಯ ಭೃತ್ಯರ ಪರಿಚಾರಕ ನಾ" ಪುಟ ೧೬೭, ನುಡಿ ೨೯.

**ಅಧ್ಯಾಯ ೪೦—**

ಶ್ಲೋಕ ೧-೧೩ ಕುಬ್ಜೆಯು ಕಂಸನಿಗೆ ಗಂಧವನ್ನು ತೆಗೆದುಕೊಂಡು ಹೋಗುವ ಕಾಲಕ್ಕೆ ರಾಮಕೃಷ್ಣರು ಅದನ್ನು ಬೇಡುವರು. ಆವರಿಗೆ ಅದನ್ನು ಆವಳು ಕೊಡುವಳು. ಕಾರಣ ಅವಳ ಡೊಂಕನ್ನು ಕೃಷ್ಣನು ತಿದ್ದುವನು. ದಾಸರ ಭಾಗವತ ಪುಟ ೧೬೮—೧೭೦, ಪದ ೬೦, ನುಡಿ ೧-೧೫ರಲ್ಲಿ ಇದು ಬಂದಿದೆ. ಶ್ಲೋಕ ೮ರಲ್ಲಿ "ಬಭೂವ ಪ್ರಮದೋತ್ತಮಾ" ಎಂದು ಹೇಳಿದೆ. ಇದನ್ನು ದಾಸರು "ಶಕ್ರಾಂಗನೆಯಂತೆ ತೋರ್ದಳಾಗೆ" ಎಂದು ಹೇಳಿ, ಸಂಸ್ಕೃತಕ್ಕಿಂತಲೂ ಕನ್ನಡ ಮೇಲು ಎಂದು ತೋರಿಸಿಕೊಟ್ಟಿದ್ದಾರೆ. ಪುಟ ೧೬೯, ನುಡಿ ೯, ಶ್ಲೋಕ ೧೫-೧೭ ಧನುರ್ಯಾಗ—ರಾಮಕೃಷ್ಣರು ಧನುಷ್ಯ ಗೃಹಕ್ಕೆ ಹೋಗಿ, ಧನುರ್ಭಂಗವನ್ನು ಮಾಡುವರು. ಅದರ ಟಂಕಾರದಿಂದ ಕಂಸನು ಹೆದರುವನು. ಪುಟ ೧೭೦-೧೭೧, ಪದ ೬೧, ನುಡಿ ೧-೫. ಶ್ಲೋಕ ೧೮-೨೩ ಧನುಷ್ಯ ರಕ್ಷಕರ ವಧೆ— ರಕ್ಷಕರು ರಾಮಕೃಷ್ಣರನ್ನು ಹಿಡಿಯಲು ಹೋಗುವರು. ಅವರನ್ನು ಹೊಡೆಯುವರು. ಮತ್ತು ತಮ್ಮ ಶಕಟಗಳಿದ್ದಲ್ಲಿ ಹೋಗಿ ಮಲಗುವರು. ಪುಟ ೧೭೧-೧೭೨, ಪದ ೬೧, ನುಡಿ ೬-೧೨ರಲ್ಲಿ ದಾಸರು ಇದನ್ನು ವರ್ಣಿಸಿದ್ದಾರೆ. ಏಕೆಂದರೆ ಇಲ್ಲಿ ಕೃಷ್ಣನ ಲೀಲೆಯು ಕಂಡು ಬರುವದು.

ಶ್ಲೋಕ ೨೪-೩೬ ಕಂಸನಿಗೆ ತನ್ನ ಮೃತ್ಯುವಿನ ಅನೇಕ ಉತ್ಪಾತಂಗಳೂ ಭಯಸೂಚನೆಗಳೂ ಕಂಡುಬರುತ್ತವೆ. ಮಾರನೆಯ ದಿನ ಮಲ್ಲಯುದ್ಧದ ಸಿದ್ಧತೆಯಾಗುವದು. ಜನರು, ಮಾಂಡಲಿಕರು, ಗುರುಗಳು ತರುವರು. ಆವರ ಮಧ್ಯದಲ್ಲಿ ಕಂಸನು ಬಂದು ಕುಳಿತುಕೊಳ್ಳುವನು. ಸಂಗೀತ, ತುತ್ತೂರಿಗಳ ನಾದ ಹಬ್ಬುವದು. ನಂದಗೋಪಾದ್ಯರು ಕಪ್ಪಕಾಣಿಕೆಗಳನ್ನು ಕೊಟ್ಟು, ಕುಳಿತುಕೊಳ್ಳುವರು. ಪುಟ ೧೭೨-೧೭೫, ಪದ ೬೨, ನುಡಿ ೧-೧೦ ಇಲ್ಲಿ ಈ ಸಂಗತಿಯು ಬಂದಿದೆ. ಶ್ಲೋಕ ೩೩ "ಹೃದಯೇನ ವಿದ್ಯತಾ" ಎಂಬು ದನ್ನು ದಾಸರು "ಹೋದ ತೇಜಾಗ್ನಿಯಂತಿದ್ದನು" ಎಂದು ವರ್ಣಿಸಿದ್ದಾರೆ. ಪುಟ ೧೭೪, ನುಡಿ ೮ರಲ್ಲಿ ನೋಡಬಹುದು. ಶ್ಲೋಕ ೩೪ "ವಾದ್ಯಮಾನೇಷು

ತೂರ್ಯೇಷು ಚ ।" ಇದನ್ನು ದಾಸರು "ಸಂಗೀತ ತುತ್ತೂರಿ ತಾಳ ಜಾಗಟೆ" ಎಂದು ಹೇಳಿದ್ದಾರೆ. ಪುಟ ೧೭೪ ನುಡಿ ೯ ಇಲ್ಲಿ ದಾಸರ ಕಾಲದ ವಾದ್ಯಗಳು ವರ್ಣಿತವಾಗಿವೆ. ಹೆಚ್ಚಿನ ಸಂಗತಿ:— ದಾಸರು ಕೃಷ್ಣನ ಸ್ತುತಿಯನ್ನು ಮನಃಪೂರ್ವಕವಾಗಿ ಮಾಡಿದ್ದಾರೆ. ಪುಟ ೧೭೪—೧೭೫ ನುಡಿ ೧೧—೧೩. ಪ್ರಸನ್ನ ವೆಂಕಟರ ಅಭಿಪ್ರಾಯ ನೋಡಬಹುದು. "ಶ್ರೀಕರ ಪ್ರಸನ್ವೆಂಕಟ ಕೃಷ್ಣನೊಲುಮೆಯಲಿ ವೈಕುಂಠ ಲಾಭವಕ್ಕು । ಏಕಾಂತ ಜನರೊಳು ವಾಸ ಬೇಕಾದರೆ ಅನೇಕ ಸಾಧನವಿನ್ಯಾಕೆ ॥" ಪುಟ ೧೭೫ ನುಡಿ ೧೩ರಲ್ಲಿ ನೋಡ ಬಹುದು.

## ಅಧ್ಯಾಯ ೪೧—

ಶ್ಲೋ. ೧—೩೧ ಕುವಲಯಾಪೀಡವೆಂಬ ಆನೆಯು ವಧೆಯಾದಕೂಡಲೆ ರಾಮಕೃಷ್ಣರು ರಂಗಮಂಟಪಕ್ಕೆ ಹೋಗುವರು. ಜನರು ಅವರ ಲೀಲೆಗಳನ್ನು ನೆನೆದು ಅವರನ್ನು ಸ್ತುತಿಸುವರು. ದಾಸರ ಭಾಗವತ ಪುಟ ೧೭೫—೧೮೧ ಪದ ೬೩ ನುಡಿ ೧—೧೯ರಲ್ಲಿ ಇದು ಬಂದಿದೆ.

ಹೆಚ್ಚಿನ ಅಂಶ:— ಎಲ್ಲ ಗಜಗಳಿಗೆ ಮೀರಿದಂಥ ಕೃಷ್ಣನು ಈ ಆನೆ ಯನ್ನು (ಕುವಲಯಾಪೀಡನನ್ನು) ಸಹಜವಾಗಿ ಕೊಲ್ಲುವನು ಎಂಬ ಭಾವವನ್ನು ಪ್ರಸನ್ನ ವೆಂಕಟರು ಪದ ೬೩ರ ಪಲ್ಲವಿಯಲ್ಲಿ ತಂದಿದ್ದಾರೆ.

ಶ್ಲೋ. ೩೨—೪೦ ಚಾಣೂರನು ಕೃಷ್ಣನ ಕೂಡ ಮಾತನಾಡುವನು. "ನೀವು ಬಾಲಕರಿದ್ದಾಗ್ಗೆ ಗೋಪಾಲಕರ ಕೂಡ ಮಲ್ಲಯುದ್ಧ ಮಾಡಿದ್ದೀರಿ. ಈಗ ನಮ್ಮ ಕೂಡ ಮಲ್ಲಯುದ್ಧ ಮಾಡಿರಿ. ಅರಸರನ್ನು ಸಮಾಧಾನ ಪಡಿ ಸಿರಿ." ಈ ಮಾತಿಗೆ ರಾಮಕೃಷ್ಣರು ಅಸಾಧ್ಯವೆಂದರು. ಪುಟ ೧೮೧—೧೮೨ ಪದ ೬೪ ನುಡಿ ೬ರಲ್ಲಿ ಈ ವರ್ಣನೆಯಿದೆ.

ಹೆಚ್ಚಿನ ಅಂಶ:— ಚಾಣೂರನು "ಇಳಿದಿವಿಯಲಿ ಸಟೆಯೊಂದ" ಪುಟ ೧೮೨ ನುಡಿ ೬.

## ಅಧ್ಯಾಯ ೪೨—

ಶ್ಲೋ. ೧—೩೦ ಚಾಣೂರ ಮುಷ್ಟಿಕರ ವಧೆ— ಕೃಷ್ಣನು ಚಾಣೂ ರನ ಕೂಡ ಹಾಗೂ ರಾಮನು ಮುಷ್ಟಿಕನ ಕೂಡ ಯುದ್ಧ ಮಾಡಹತ್ತುವರು.

ಕೈಗೆ ಕೈ, ಕಾಲಿಗೆ ಕಾಲು, ಎದೆಗೆ ಎದೆ, ಈ ಪ್ರಕಾರ ನಡೆದಾಗ್ಗೆ ಜನರು "ಅವರು ಬಾಲಕರು, ಇವರು ಜಟ್ಟಿಗಳು ಇದು ಸರಿಜೋಡಿಯಲ್ಲವಾದ್ದರಿಂದ ಸಜ್ಜನರು ಇವನ್ನು ನೋಡಬಾರದು. ಗೋಪಿಯರು ಧನ್ಯರು, ರಾಮ ಕೃಷ್ಣರ ಕೂಡ ಕಾಲ ಕಳೆದರು. ನಾವು ಪಾಪಿಗಳು " ಎಂದು ಮಾತನಾಡುವರು. ರಾಮಕೃಷ್ಣರು ಇಬ್ಬರೂ ಜಟ್ಟಿಗಳನ್ನು ಹೊಡೆಯುವರು. ಆಮೇಲೆ ಶಲ, ತೋಶಲರನ್ನು ಹೊಡೆಯುವರು. ಉಳಿದ ಮಲ್ಲರು ಓಡುವರು. ಕೃಷ್ಣನ ಭಕ್ತರಿಗೆ ಸಂತೋಷವಾಗುವದು. ಕಂಸನ ಹಿತೈಷಿಗಳಿಗೆ ದುಃಖವಾಗುವದು. ಕಂಸನು ವಾದ್ಯಘೋಷಗಳನ್ನು ನಿಲ್ಲಿಸುವನು. ಪುಟ ೧೮೩—೧೮೭ ಪದ ೬೪ ನುಡಿ ೬—೨೭ರಲ್ಲಿ ಇದು ವರ್ಣಿತವಾಗಿದೆ.

ಶ್ಲೋ. ೩೧—೫೧ ಕಂಸನ ವಧೆ— ಮಲ್ಲರು ತೀರಿದ ಕೂಡಲೆ ಕಂಸನು "ರಾಮಕೃಷ್ಣರನ್ನು ಓಡಿಸಿರಿ. ಅವರ ಧನವನ್ನು ತೆಗೆದುಕೊಂಡು ಅವರನ್ನು ಅಟ್ಟಿರಿ. ನಂದನನ್ನು ಬಂಧಿಸಿರಿ. ವಸುದೇವನನ್ನು ಹೊಡೆಯಿರಿ." ಎಂದೆನ್ನಲು ಕೃಷ್ಣನು ಮಂಚದ ಮೇಲೇರಿ ಕಂಸನನ್ನು ಹಿಡಿಯುವನು. ಕಂಸನು ಯುದ್ಧಕ್ಕೆ ನಿಲ್ಲುವನು. ಕೃಷ್ಣನು ಕಂಸನನ್ನು ಹೊಡೆಯುವನು. ಕಂಸನ ಆಪ್ತರು ಬರುವರು. ರಾಮನು ಅವರನ್ನು ಯಮಸದನಕ್ಕೆ ಕಳುಹುವನು. ಕಂಸನಿಗೆ ಮುಕ್ತಿಯಾಗುವದು. ಕಂಸನ ಹೆಂಡಿರ ಪ್ರಲಾಪವು ನಡೆಯುವದು. ರಾಮಕೃಷ್ಣರು ವಸುದೇವ ದೇವಕಿಯರನ್ನು ಕಾಣುವರು. ಪುಟ ೧೮೭-೧೯೧ ಪದ ೬೫ ನುಡಿ ೧–೨೨ ರಲ್ಲಿ ಈ ವರ್ಣನೆಯು ಬಂದಿದೆ.

**ಅಧ್ಯಾಯ ೪೩—**

ಶ್ಲೋ. ೧—೧೧ ವಸುದೇವ ದೇವಕಿಯರಿಗೆ ಕೃಷ್ಣನು ಮೋಹದಲ್ಲಿ ಕೆಡಹುವನು. ಆಗ ಅವರು ರಾಮಕೃಷ್ಣರನ್ನು ಮಕ್ಕಳೆಂದು ಅಪ್ಪುವರು. ಅವರಿಗೆ ಕೃಷ್ಣನು ಹೇಳುವನು. "ನಾವು ಬಾಲ್ಯದಲ್ಲಿ ನಿಮ್ಮ ಸೇವೆ ಮಾಡಲಿಲ್ಲ. ನಾವು ಪಾತಕಿಗಳು. ಸೇವೆ ಮಾಡುವ ಭಾಗ್ಯ ನಮಗೆ ದೊರೆಯಲಿಲ್ಲ." ಮುಂತಾಗಿ ಹೇಳುವನು. ಪುಟ ೧೯೧ ರಿಂದ ೧೯೪ ಪದ ೬೫ ನುಡಿ ೨೩–೪೦ ರಲ್ಲಿ ಈ ವಿಷಯವು ಬಂದಿದೆ.

ಹೆಚ್ಚಿನ ಅಂಶ:— ೧) " ಉಗ್ರಸೇನನಿಗೆ ತುಷ್ಟಿಯಿಂದ ವಂದಿಸಲು

ಅಷ್ಟು ಜನಕಾಶ್ಚರ್ಯ" ಪುಟ ೧೯೪ ನುಡಿ ೩೯. ౨) " ಪ್ರಸನ್ನ ವೆಂಕಟದಾಸರಿಗೆ ಲೇಸು........ಸರ್ವದಾ ಸುಖವು ಹೇಳಿಕೇಳಿದವರಿಗೆ" ಪುಟ ೧೯೪ ನುಡಿ ೪೦ ಶ್ಲೋ. ೧೨—೧೭ ಶ್ರೀಕೃಷ್ಣನು ತನ್ನ ಅಜ್ಜನಾದ ಉಗ್ರಸೇನನನ್ನು ಯಾದವರ ಅರಸನೆಂದು ಪಟ್ಟಕ್ಕೇರಿಸುವನು. ಮತ್ತು ಎಲ್ಲ ಅರಸರಿಗೆ ಕಪ್ಪ ಕಾಣಿಕೆ ಕೊಡಬೇಕೆಂದು ಆಜ್ಞೆ ಮಾಡುವನು. ಕಂಸನ ಭಯದಿಂದ ದೇಶವನ್ನು ಬಿಟ್ಟುಹೋದ ವೃಷ್ಣಿ, ಅಂಧಕ, ದಾಶಾರ್ಹ, ಮಧುಕುಕುರ ಮುಂತಾದವರನ್ನು ಕರೆದು ಅವರನ್ನು ಸಂತೋಷದಲ್ಲಿಡುವನು. ಪುಟ ೧೯೪-೧೯೫ ಪದ ೬೬ ನುಡಿ ೧—೭. ಈ ಭಾಗವು ದಾಸರ ಕೃತಿಯಲ್ಲಿ ಬಂದಿದೆ. ಕೊನೆಗೆ ಒಂದು ಮಂಗಳ ಪದವಿದೆ. ಅದರಲ್ಲಿ ಶ್ರೀಕೃಷ್ಣನ ಎಲ್ಲ ಲೀಲೆಗಳನ್ನು ವರ್ಣಿಸಿ, ಆತನು ಮಾಡಿದ ಕಾರ್ಯಗಳನ್ನು ದಾಸರು ವರ್ಣಿಸಿದ್ದಾರೆ.

**ಸಾರಾಂಶ :—**

ಶ್ರೀ ಪ್ರಸನ್ನ ವೆಂಕಟದಾಸರು ಭಾಗವತ ದಶಮಸ್ಕಂದ ಪೂರ್ವಾರ್ಧದಲ್ಲಿ ೪೮ ಅಧ್ಯಾಯಗಳಿದ್ದು, ಅವರಲ್ಲಿ ೪೩ ಅಧ್ಯಾಯಗಳನ್ನು ತೆಗೆದುಕೊಂಡು ಅವುಗಳಲ್ಲಿಯ ಕೃಷ್ಣನ ಲೀಲೆಗಳನ್ನು ವರ್ಣಿಸಿದ್ದಾರೆ. ದಾಸರು ಇವುಗಳನ್ನು ಭಾಷಾಂತರಿಸಿ ಕನ್ನಡದಲ್ಲಿ ಅರ್ಥಬರೆಯಬೇಕೆಂದು ಹೊರಟವರಲ್ಲ. ಭಾಗವತವು ಪುರಾಣವಾದ್ದರಿಂದ ಅಲ್ಲಿ ಪ್ರತಿಯೊಂದು ವಿಷಯದಕಾರಣ ಉತ್ಪತ್ತಿ ಮುಂತಾದ ವಿಷಯಗಳು ಕಂಡುಬರುವದು ಸಹಜ. ಇಂಥ ವಿಷಯಗಳು ದಾಸರಿಗೆ ಬೇಡವಾದ್ದರಿಂದ ಅವರು ತಮ್ಮ ಭಾಗವತದಲ್ಲಿ ಅವುಗಳಿಗೆ ಸ್ಥಾನ ಕಲ್ಪಿಸಿ ಕೊಟ್ಟಿಲ್ಲ. ದಾಸರಿಗೆ ಬೇಕಾಗಿದ್ದ ವಿಷಯವೆಂದರೆ, ಕೇವಲ ಕೃಷ್ಣನ ಲೀಲೆಗಳು. ಹೀಗಿದ್ದರೂ ಕೃಷ್ಣನ ಎಲ್ಲ ಲೀಲೆಗಳನ್ನು ಅವರು ತೆಗೆದುಕೊಂಡಿಲ್ಲ. ಜನಜನಿತವಾದ ಮತ್ತು ಮೇಲಿಂದ ಮೇಲೆ ಓದಿ ತಮಗೆ ಮನದಟ್ಟಾದ ಲೀಲೆಗಳನ್ನು ವರ್ಣಿಸಿದ್ದಾರೆ. ಅವುಗಳನ್ನು ವರ್ಣಿಸುವ ಕಾಲಕ್ಕೆ ಭಾಗವತದಲ್ಲಿಯ ಸಹಜವಾಗಿ ಬರುವ ಹೋಲಿಕೆಗಳನ್ನು ತೆಗೆದುಕೊಂಡಿದ್ದಾರೆ.

ಇನ್ನು ಪ್ರಸನ್ನ ವೆಂಕಟರ ಜಾಣಾಕ್ಷತನವು ಕೆಳಗೆ ತೋರಿಸಿದ ಸಂಗತಿಗಳಲ್ಲಿ ಕಂಡುಬರುವದು. ೧) ಕೃಷ್ಣನ ಜನ್ಮವಾದ ಕೂಡಲೆ ಆತನನ್ನು ಗೋಕುಲಕ್ಕೆ ಕಳುಹುವದು. ಇಲ್ಲವಾದರೆ ಗೋಕುಲದಲ್ಲಿ ನಡೆಯುವ ಲೀಲೆ

ಗಳು ಅಲ್ಲಿಯೇ ನಿಲ್ಲುವವು. ೨) ಅದೇ ಪ್ರಕಾರ ಕೃಷ್ಣನನ್ನು ವೃಂದಾವನಕ್ಕೆ ಕಳುಹುವದು. ಇಲ್ಲವಾದರೆ ಕಲಿಯು ಜನರ ಮನಸ್ಸನ್ನು ಹಿಡಿಯುವದಿಲ್ಲ.

ಇನ್ನು ಪಾತ್ರಪೋಷಣೆಯ ಬಗ್ಗೆ ಹೇಳುವದಾದರೆ, ದಾಸರು ಕಂಸನ ಪಾತ್ರವನ್ನು ಸರಿಯಾಗಿ ತಂದಿಲ್ಲ. ದೇವರ ಕಾರ್ಯವೆಂದರೆ, ದುಷ್ಟರನ್ನು ಸಂಹರಿಸುವದು, ಮತ್ತು ಶಿಷ್ಟರನ್ನು ಪಾಲಿಸುವದು. ಕಂಸನೆಂದರೆ, ನೀಚ ಕೃತಿಗಳ ಒಂದು ಸಂಚಯ. ಅಂದಮೇಲೆ ಅಂಥ ವ್ಯಕ್ತಿಯನ್ನು ನಾಶಗೊಳಿಸ ಬೇಕು ಎಂಬ ಭಾವವು ಪ್ರತಿಯೊಬ್ಬರ ಮನದಲ್ಲಿ ಬರಬೇಡವೇ? ಹಾಗೆ ದಾಸರು ಕಂಸನನ್ನು ಚಿತ್ರಿಸಿಲ್ಲ. ಅದೇ ಪ್ರಕಾರ ನಂದನ ಪಾತ್ರವನ್ನು ಸರಿ ಯಾಗಿ ಚಿತ್ರಿಸಿಲ್ಲ. ಶ್ರೀಕೃಷ್ಣನಿಗೆ ಗೋಕುಲದಲ್ಲಿ ಪೀಡೆಯಾಗಹತ್ತಿದ ಕೂಡಲೇ "ಇದು ಸರಿಯಲ್ಲ, ವೃಂದಾವನಕ್ಕೆ ಹೋಗುವದು ಒಳಿತು." ಎಂದು ಎಲ್ಲರನ್ನು ಶ್ರೀನಂದನನು ಕರೆದುಕೊಂಡು ಹೋಗುವನು. ಸಾಧಾ ರಣವಾಗಿ ಪ್ರತಿಯೊಂದು ಹಳ್ಳಿಯಲ್ಲಿ ಒಬ್ಬ ವೃದ್ಧ ಮತ್ತು ಅನುಭವವುಳ್ಳ ಮನು ಷ್ಯನು ಇರುವನು. ಆತನ ವಿಚಾರವು ಸರಿಯಾಗಿರುವದು. ಅಂಥ ವ್ಯಕ್ತಿ ಇದೊಂದು. ಈ ವ್ಯಕ್ತಿಯನ್ನು ದಾಸರು ಸರಿಯಾಗಿ ನೋಡಿಲ್ಲವೆಂದು ಹೇಳ ಬಹುದಾಗಿದೆ. ಇನ್ನು ನಂದನ ಬಗ್ಗೆ—ಬಾಲಕೃಷ್ಣನು ಪೂತನಿಯಂಥ ರಾಕ್ಷಸಿ ಯಿಂದ ಪಾರಾದ ಸಂಗತಿಯು ಮತ್ತು ಶಕಟಾಸುರನಂಥ ರಾಕ್ಷಸನಿಂದ ಉಳಿದ ಸಂಗತಿಯು ನಂದನಿಗೆ ತಿಳಿದಾಗ್ಗೆ ಆತನಲ್ಲಿ ಭಯ, ದ್ವೇಷ, ಖೇದ, ಆಶ್ಚರ್ಯ ಇಂಥ ಯಾವ ಭಾವವನ್ನೂ ಕಾಣುವದಿಲ್ಲ. ತನ್ನ ಮಗನು ಸಂಕಟದಿಂದ ಉಳಿದ ಸಂಗತಿಯನ್ನು ಕೇಳಿ ಯಾವ ತಂದೆಗೆ ಭಯ, ಆಶ್ಚರ್ಯ ಮತ್ತು ಆನಂದ ವಾಗಲಿಕ್ಕಿಲ್ಲ!

ದಾಸರಲ್ಲಿ ಕಾಣುವ ವಿಶೇಷ ಗುಣಗಳೆಂದರೆ ಔಚಿತ್ಯವನ್ನುಂಟು ಮಾಡುವದು. ಆಕಳುಗಳ ಹೆಸರನ್ನು ಎತ್ತಿ ಕರೆಯುವದರಲ್ಲಿ ದಾಸರು ಔಚಿತ್ಯ ವನ್ನುಂಟು ಮಾಡಿದ್ದಾರೆ. "ಗಂಗೆ ಗೌರಿ ತುಂಗಭದ್ರೆ" ಮುಂತಾಗಿ (ಪುಟ ೭೦ ನುಡಿ ೬) ಇದು ಮೂಲ ಭಾಗವತದಲ್ಲಿಲ್ಲ. ಆಕಳುಗಳು ಕರೆದ ಕೂಡಲೇ ಹೋಗಿ ಕೃಷ್ಣನ ಹೆಗಲ ಮೇಲೆ ತಮ್ಮ ಹೆಗಲನ್ನಿಟ್ಟು ನಿಲ್ಲುವವು. ೭೧ ಪುಟ ನುಡಿ ೮. ಇಲ್ಲಿ ದಾಸರು ತಮ್ಮ ವರ್ಣನಾ ವೈಖರಿಯನ್ನು ತೋರಿಸಿದ್ದಾರೆ. ಇನ್ನು ಕೆಲವು ಕಡೆಗೆ ಆಟದ ರೀತಿಯನ್ನೋ ಊಟದ ಪದಾರ್ಥಗಳನ್ನೋ

ವರ್ಣಿಸಿ, ಸಾಮಾಜಿಕ ಸ್ಥಿತಿಯನ್ನು ಚಿತ್ರಿಸಿದ್ದಾರೆ. ಕತೆಯನ್ನು ಹಿತದಲ್ಲಿ ತರಲು ದಾಸರು ನಿಪುಣರು. ಮೊದಲನೆಯ ಅಧ್ಯಾಯದಲ್ಲಿ ಪರೀಕ್ಷಿತ ರಾಜನ ಪ್ರಶ್ನೆಗೆ ಶುಕಮುನಿಯು ವಿಸ್ತಾರವಾಗಿ ಹೇಳಿದ್ದನ್ನು ಪ್ರಸನ್ನ ವೆಂಕಟರು ಎರಡು ನುಡಿಯಲ್ಲಿ ಹೇಳಿದ್ದಾರೆ. ಅದೇಪ್ರಕಾರ ವಿದ್ಯಾಧರನ ವಿಷಯವನ್ನು ಎರಡು ಪಾದದಲ್ಲಿ ಹೇಳಿದ್ದಾರೆ. ಪುಟ ೧೧೫, ನುಡಿ ೧.

ಸ್ವಲ್ಪದರಲ್ಲಿ ಹೇಳಬೇಕಾದರೆ, ಕಾಲಕಾಲಕ್ಕೆ ತಕ್ಕಂತೆ ಸಮಾಜಕ್ಕೆ ರುಚಿಸುವಂತೆ ಕೃಷ್ಣಭಕ್ತಿಯಿಂದ ಮುಕ್ತಿಯೆಂದು ತಿಳಿಸಿ ಅದಕ್ಕನುಗುಣವಾಗುವಂತೆ ಭಾಗವತವನ್ನು ಹೇಳುವದರಲ್ಲಿ ಪ್ರಸನ್ನ ವೆಂಕಟ ದಾಸರು ನಿಪುಣರೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

## ( ಕ ) ರೂಪ—

ಹರಿದಾಸರು ಭಗವದ್ಭಕ್ತರು. ಎಲ್ಲ ಹರಿದಾಸರ ಕೃತಿಗಳನ್ನು ನೋಡಿದರೆ ಅವುಗಳಲ್ಲಿ ಮುಖ್ಯವಾಗಿ ಕಂಡುಬರುವದು ಭಕ್ತಿ. ಈ ಭಕ್ತಿಯು ಪರಮಾತ್ಮನ ಸ್ತುತಿಯ ರೂಪವನ್ನು ತಾಳುವದು. ಸ್ತುತಿಯು ಗದ್ಯ ಇಲ್ಲವೆ ಪದ್ಯ ರೂಪವನ್ನು ತಾಳಬಹುದು. ಅದರಲ್ಲಿಯೂ ಪದ್ಯರೂಪವನ್ನು ತಾಳಿದ್ದು, ಹೆಚ್ಚಾಗಿ ಕಂಡುಬರುವದು. ಏಕೆಂದರೆ ಯಾವದಾದರೊಂದು ತನಗೆ ಬೇಕಾದ ವಸ್ತು ಲಭಿಸಿತೆಂದರೆ ಆನಂದಾತಿಶಯವು ಉಂಟಾಗಿ, ಇಲ್ಲವೆ ಆ ವಸ್ತುವು ಪ್ರಯತ್ನಪಟ್ಟರೆ ದೊರಕುವದೆಂಬ ಭಾವನೆ ಉತ್ಕಟವಾಗಿ ಮನುಷ್ಯನು ಮುಕ್ತಕಂಠದಿಂದ ಹಾಡಲು ಆರಂಭ ಮಾಡುತ್ತಾನೆ. ಅದೇ ಪ್ರಕಾರ ದೇವರ ಬಗ್ಗೆ ಇಂಥ ಭಾವನೆಯು ಉಂಟಾಗಿ ಹರಿದಾಸರು "ಬಿಗಿದ ಕಂಠದಿಂ ದೃಕ್‌ಬಾಷ್ಪಗಳಿಂ ನಗೆಮೊಗದಿಂ ರೋಮಗಳೊಗೆದು ಮಿಗೆ ಸಂತೋಷದಿ ನೆಗೆದಾಡುತ ನಾಲ್ಮೊಗನಯ್ಯನ" ತುತಿಸುವರು, ಪ್ರಾರ್ಥಿಸುವರು. ದಾಸರು ವರಕವಿಗಳು, ಮೇಲಾಗಿ ಅವರ ಜೀವನವೇ ಕಾವ್ಯಮಯ. ಅಂದಮೇಲೆ ಕೇಳುವದೇನು ! ಕಾವ್ಯ ರೂಪದಿಂದ ಸ್ತುತಿಯು ಹೊರಹೊಮ್ಮುವದು. ಮೇಲಾಗಿ ಪದ್ಯದಲ್ಲಿ ಸ್ತುತಿಸಲು ಮತ್ತು ನೆನಪಿನಲ್ಲಿಡಲು ಎಷ್ಟು ಸುಲಭವೋ ಅಷ್ಟು ಗದ್ಯರೂಪದಲ್ಲಿ ಸುಲಭವಲ್ಲ. ಪದ್ಯವು ದಾಸರಲ್ಲಿ ಬೇರೆ ಬೇರೆ ರೂಪವನ್ನು ತಾಳಿದೆ. ಆ ರೂಪಗಳು ಆವುವೆಂದರೆ, ಕೀರ್ತನೆಗಳು, ಸುಳಾದಿ, ಉಗಾಭೋಗ ಇವು ಮುಖ್ಯ. ಷಟ್ಪದಿ

ಯನ್ನು ಕೆಲವರು ಉಪಯೋಗಿಸಿದ್ದಾರೆ. ಇನ್ನು ಪ್ರತಿಯೊಂದರ ಸ್ವರೂಪ ವನ್ನು ನೋಡುವಾ.

೧. **ಕೀರ್ತನೆ:—**

ದಾಸರು ಹಾಡಿದ ಪದಗಳಿಗೆ ಕೀರ್ತನೆಗಳೆಂಬ ಹೆಸರು. ಇವು ಗಳಿಗೆ ದಾಸರ ಪದಗಳು ಎಂಬುವದುಂಟು. ಪ್ರತಿಯೊಂದು ಪದಕ್ಕೆ ರಾಗ ಮತ್ತು ತಾಳ ಅವಶ್ಯ. ಪಲ್ಲವಿ ಎಂದರೆ " ಪದಗರ್ಭಂತು ಪಲ್ಲವಿ " ಪ್ರತಿ ಯೊಂದು ಪದದಲ್ಲಿದ್ದ ಭಾವಾರ್ಥ ಇಲ್ಲವೆ ಸಾರಾರ್ಥ. ಕೆಲವು ಪದಗಳಲ್ಲಿ ಅನುಪಲ್ಲವಿಯನ್ನು ಕಾಣುತ್ತೇವೆ. ಇದರಲ್ಲಿ ಪಲ್ಲವಿಯಿಂದ ಹೊರಡತಕ್ಕ ಗುಣ ಗಳನ್ನು ಇಲ್ಲವೆ ಪರಿಣಾಮವನ್ನು ಇನ್ನಿಷ್ಟು ವಿವರಿಸಿರುತ್ತದೆ. ಪಲ್ಲವಿಯನ್ನು ಒಂದು ಸಾಲಿನಲ್ಲಿ, ಎರಡು ಸಾಲಿನಲ್ಲಿ, ನಾಲ್ಕು ಸಾಲಿನಲ್ಲಿ, ಇಲ್ಲವೇ ಪಾದ ಗಳಲ್ಲಿ ಕೊಟ್ಟಿರುತ್ತಾರೆ. ಒಂದು ಪಾದ ಪಲ್ಲವಿ. ಒಂದು ಪಾದ ಅನುಪಲ್ಲವಿ. ಎರಡು ಪಾದ ಪಲ್ಲವಿ ಮತ್ತು ಎರಡು ಪಾದ ಅನುಪಲ್ಲವಿ. ಇಲ್ಲವೆ ನಾಲ್ಕು ಪಾದ ಪಲ್ಲವಿ ಈ ರೀತಿ ಪ್ರಭೇದಗಳಿರುತ್ತವೆ. ನಾಲ್ಕು ಪಾದ ಪಲ್ಲವಿ ಇದ್ದಲ್ಲಿ ಕ್ವಚಿತ್ತಾಗಿ ಅನುಪಲ್ಲವಿ ಇರುವದಿಲ್ಲ. ಇವುಗಳಿಗೆ ಉದಾಹರಣೆಗಳನ್ನು ಪ್ರತಿ ಯೊಬ್ಬ ದಾಸರ ಕೀರ್ತನೆಗಳಲ್ಲಿ ನೋಡಬಹುದು.

ಇನ್ನು ನುಡಿಗಳ ಬಗ್ಗೆ ಹೇಳುವದಾದರೆ, ಪ್ರತಿಯೊಂದು ಪದದಲ್ಲಿ ಮೂರು, ಐದು, ಏಳು ಹೀಗೆ ವಿಷಮ ಸಂಖ್ಯೆಯಲ್ಲಿ ನುಡಿಗಳಿರುತ್ತವೆ. ಮತ್ತು ಯೊಂದು ನುಡಿಯಲ್ಲಿ ಎರಡು ಇಲ್ಲವೆ ನಾಲ್ಕು ಚರಣಗಳು ಇರುತ್ತವೆ· ಒಂದು ಇಲ್ಲವೆ ಮೂರು ಚರಣಗಳು ಇರುವದಿಲ್ಲ. ಕೊನೆಯ ನುಡಿಯ ಮೂರನೆ ಇಲ್ಲವೆ ನಾಲ್ಕನೆಯ ಚರಣದಲ್ಲಿ ಆ ದಾಸರ ಅಂಕಿತಗಳಿರುತ್ತವೆ. ಈ ಅಂಕಿ ತದ ಮೇಲಿಂದ ಈ ಪದಗಳನ್ನು ಇಂಥ ಇಂಥ ದಾಸರು ರಚಿಸಿದರೆಂದು ತಿಳಿದು ಕೊಳ್ಳಲು ಬರುತ್ತದೆ. ಪುರಂದರದಾಸರು " ಪುರಂದರವಿಠಲ " ಎಂದೂ ಕನಕ ದಾಸರು " ಕಾಗಿನೆಲೆ ಆದಿಕೇಶವ " ಎಂದೂ ಅಂಕಿತವನ್ನಿಟ್ಟುಕೊಂಡಂತೆ ಶ್ರೀ ಪ್ರಸನ್ನ ವೆಂಕಟದಾಸರು " ಪ್ರಸನ್ನ ವೆಂಕಟ " ಎಂದು ಅಂಕಿತವನ್ನು ಇಟ್ಟು ಕೊಂಡಿದ್ದಾರೆ. ಇನ್ನು ಈ ಕೀರ್ತನೆಗಳಲ್ಲಿ ದಾಸರು ಯಾವ ವಿಷಯಗಳನ್ನು ತಂದಿರುವರೆಂಬುದನ್ನು ನೋಡುವದು ಮುಂದಿನ ಮೆಟ್ಟಿಲು. ದಾಸರು ಬಹು ತರವಾಗಿ ಎಲ್ಲ ಭಾವಗಳನ್ನು ತೋರಿಸಿದ್ದಾರೆ.

## ( ಅ ) ಭಾವಗಳು :—

ಭಾವಗಳೆಂದರೆ ಮನುಷ್ಯನ ಅಂತರಂಗದ ಲಹರಿಗಳು. ಸಮುದ್ರದ ಮೇಲೆ ಗಾಳಿಯು ಬೀಸಿದಂತೆ ಕಿರಿದೆರೆಗಳು ಹೆದ್ದೆರೆಗಳಾಗುವವು. ತಂತು ಗಾರನು ವೀಣೆಯ ಮೇಲೆ ಬೆರಳೆಳೆದಂತೆ ಹೇಗೆ ನಾದವು ಹೆಚ್ಚಾಗುವದೋ ಹಾಗೇ ಪ್ರಸಂಗಕ್ಕನುಗುಣವಾಗಿ ಅಂತರಂಗದಲ್ಲಿ ಬೇರೆ ಬೇರೆ ಭಾವಗಳು ಉದ್ಭವಿಸುವವು. ಇವು ಯಾವವೆಂದರೆ—(೧) ಆರ್ತಭಾವ. (೨) ವೈರಾಗ್ಯಭಾವ. (೩) ಮುಮುಕ್ಷುಭಾವ. (೪) ವ್ಯಾಕುಲಭಾವ. (೫) ಶಾಂತಭಾವ. (೬) ದಾಸ್ಯಭಾವ. (೭) ಸಖ್ಯಭಾವ. (೮) ವಾತ್ಸಲ್ಯಭಾವ. (೯) ಸಮರ್ಪಣಭಾವ.[೧]

ಎಲ್ಲಕ್ಕೂ ಮೊದಲು ಹುಟ್ಟುವದೆಂದರೆ **ಆರ್ತಭಾವ.** ಏಕೆಂದರೆ, ಮನುಷ್ಯನು ಮೊದಲು ಇಂದ್ರಿಯಗಳಿಗೆ ಒಳಗಾಗಿ ವಿಷಯಾಸಕ್ತನಾಗುವನು. ಪ್ರಪಂಚದಲ್ಲಿ ಮುಳುಗುವನು. ದುಃಖದ ರಾಶಿಯು ಕಣ್ಣೆದುರು ನಿಲ್ಲುವದು. ಅಲ್ಲಿಂದ ಹೇಗೆ ಪಾರಾಗಬೇಕು? ಎಂಬುದು ಹೊಳೆಯುವದಿಲ್ಲ. ಅಲ್ಲಿಂದ 'ದೇವರೇ ಈ ಸಂಸಾರದಿಂದ ದಾಟಿಸು' ಎಂದು ದೇವರಿಗೆ ಮೊರೆ ಹೋಗುವನು. ಇದೇ ಆರ್ತಭಾವ. ಈ ಭಾವವು ಪ್ರಸನ್ನ ವೆಂಕಟರಲ್ಲಿ ಕಾಣಬಹುದಾಗಿದೆ.

"ಹರಿಹರಿದು ಕಡೆಗಾಣೆನ್ನೈ ಜನುಮವ । ಭವಕಡಲದಡವ ಸೇರಿಸು ಮಾಧವ ॥"[೨] "ಭವಕಡಲದಡವ ಸೇರಿಸು" ಎಂಬುದರಲ್ಲಿ ದಾಸರು ಸಂಸಾರಕ್ಕೆ ಬೇಸತ್ತು, ಆದರಿಂದ ಪಾರಾಗಲು ದೇವರಿಗೆ ಹೇಗೆ ಮೊರೆ ಹೋಗಿದ್ದಾರೆಂಬುದು ಕಂಡುಬರುವದು. ಆರ್ತಭಾವದ ಮುಂದಿನ ಹೆಜ್ಜೆಯೆಂದರೆ **ವೈರಾಗ್ಯ ಭಾವ.** ಮನಸ್ಸು ನಾನಾ ವಿಷಯಗಳಿಂದ ಪಾರಾಗಲು ಪ್ರಯತ್ನಿಸುವದು. ಏಕೆಂದರೆ ಸಂಸಾರದಲ್ಲಿ ನಿಜವಾದ ಸುಖವಿಲ್ಲೆಂದು ತಿಳಿಯುವದು. ವಿಷಯದಲ್ಲಿಯ ಸುಖವು ಅತ್ಯಲ್ಪವು, ಕ್ಷಣಿಕವು, ದುಃಖಕ್ಕೆ ಕಾರಣವು, ಎಂಬ ಭಾವವು ಉಂಟಾಗುವದು. ಇದೇ ವಿರಾಗವು. ವಿಷಯದಲ್ಲಿಯ ಅನುರಾಗವು ಕಡಿಮೆ

---

೧. ಶ್ರೀ. ರಂಗರಾವ ದಿವಾಕರ ಹರಿಭಕ್ತಿಸುಧೆ.

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೧೮ ಪದ ೧೫

ಯಾಯಿತೆಂದರೆ, ವಿರಾಗವು ಹುಟ್ಟುವದು. ಅದೇ ವೈರಾಗ್ಯಭಾವವು. ಇದನ್ನು ಪ್ರಸನ್ನ ವೆಂಕಟರ "ಕಾಯೋ ಗೋವಿಂದಾ। ಕಾಯೋ ಮುಕುಂದಾ ||[೧] ಎಂಬ ಪದದಲ್ಲಿ ಕಾಣಬಹುದು. ಅಲ್ಲಿಂದ ಮುಂದೆ ಸಂಸಾರದಿಂದ ಮುಕ್ತ ನಾಗಲು ಪ್ರಯತ್ನಿಸುವನು. ಚಿರಶಾಂತಿಯನ್ನು ಬಯಸುವನು. ಮುಕ್ತಿ ಯನ್ನು ಇಚ್ಛಿಸುವನು. ಇದೇ **ಮುಮುಕ್ಷುಭಾವ**. ಎಲ್ಲ ಹರಿಭಕ್ತರಂತೆ, ಹರಿದಾಸರಂತೆ ಪ್ರಸನ್ನ ವೆಂಕಟರು ಕೂಡ ಮುಮುಕ್ಷುಗಳೆಂಬುದು ಕೆಳಗಿನ ಪದ್ಯದಿಂದ ತಿಳಿಯುವದು. "ಸಾಮೀಪ್ಯ ಮುಕ್ತಿಯನೀಯೋ ನನ್ನ ಪ್ರಸನ್ನ ವೆಂಕಟೇಶ"[೨] ಮುಕ್ತಿಯನ್ನು ಬಯಸಿ, ದೇವರ ನಾಮಸ್ಮರಣೆಯಲ್ಲಿ ತನ್ಮಯ ನಾಗುವನು. ಹರಿಪಾದ ದರ್ಶನವನ್ನು ಬಯಸುವನು. ಬೇಗನೆ ಹರಿಯು ಪ್ರಸನ್ನನಾಗಲಿಲ್ಲವೆಂದರೆ, ಆತನು ವಿರಹತಾಪದಿಂದ ಬಳಲುವನು, ದೀನನಾಗು ವನು, ವಿಹ್ವಲನಾಗುವನು, ವ್ಯಾಕುಲನಾಗುವನು. ಅದೇ **ವ್ಯಾಕುಲಭಾವ**. ಇಂಥ ಪ್ರಸಂಗವು ಪ್ರಸನ್ನ ವೆಂಕಟರಿಗೆ ಬಂದಾಗ್ಗೆ ಅವರು ಅಂದದ್ದೇನಂದರೆ— "ಎಂತು ಜೀವಿಸಲಿಮ್ಮಾ ರಂಗನನಗಲಿ ಎ। ನ್ನಂತರಪರಾಧವಾ ನೋಡ ದೊದಗನ್ಯಾಕೆ" || ಪಲ್ಲ ||[೩] ಮನುಷ್ಯನು ಇಲ್ಲಿಯ ವರೆಗೆ ಒಮ್ಮನಸ್ಸಿನಿಂದ ಮತ್ತು ಪ್ರೇಮಪೂರ್ವಕವಾಗಿ ಭಗವಂತನ ಆರಾಧನೆ ಮಾಡಿದ್ದರಿಂದ ಆ ಪರ ಮಾತ್ಮನ ಬಗ್ಗೆ ಜ್ಞಾನ ಉಂಟಾಗುವದು. ಆತನ ಸರ್ವವ್ಯಾಪಿತ್ವ, ಸರ್ವ ಶಕ್ತಿತ್ವ, ಅಚಿಂತ್ಯತ್ವ, ಭಕ್ತಿವತ್ಸಲತ್ವ, ಐಶ್ವರ್ಯಾದಿಗಳ ಆಕಲನದಿಂದ ಮನು ಷ್ಯನು ಸಮಾಧಾನ ಹೊಂದುವನು. ಗಂಭೀರ ಭಾವದಿಂದ ಪರಮಾತ್ಮನನ್ನು ಸ್ತುತಿಸುವನು, ಕೊಂಡಾಡುವನು. ಇದೇ **ಶಾಂತಭಾವ**. ಈ ಭಾವಕ್ಕೆ ತಕ್ಕಂತೆ ಪ್ರಸನ್ನ ವೆಂಕಟರು ಹಾಡಿದ್ದಾರೆ. "ಶರಣು ಶರಣು ಪರಮ ಪುರುಷ। ಶರಣು ಭಯಶರ ಖಂಡನಾ ||"[೪] ಈ ಪದದಲ್ಲಿ ಬಿಡಿ ಬಿಡಿ ಪದಗಳನ್ನು ಇಟ್ಟು, ಒಂದು ಗಂಭೀರ ಭಾವವನ್ನು ತಂದಿದ್ದಾರೆ. ಇಲ್ಲಿ ಭಾವ ಮತ್ತು ಕೃತಿಗಳು

---

೧. ಪ್ರಬಂಧ ಪದ ಸಂಖ್ಯೆ ೧೦೬

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೪೨ ಪದ ೪೦ ನುಡಿ ೩

೩. ಪ್ರಬಂಧ ಪದ ಸಂಖ್ಯೆ ೧೧೦

೪. ಪ್ರಬಂಧ ಪದ ಸಂಖ್ಯೆ ೧೨೨

ಹೇಗೆ ಮೇಳೈಸಿ ಬಂದಿವೆಯೆಂಬುದನ್ನು ನೋಡಬಹುದು. ಇಲ್ಲಿಯ ವರೆಗೆ ವಿವರಿಸಿದ ಭಾವಗಳೆಂದರೆ ಒಂದು ಮೆಟ್ಟಲು. ಮುಂದಿನ ಮೆಟ್ಟಲೆಂದರೆ, ದಾಸ್ಯಭಾವ, ಸಖ್ಯಭಾವ, ವಾತ್ಸಲ್ಯಭಾವ ಮತ್ತು ಸಮರ್ಪಣ ಭಾವಗಳು.

**ದಾಸ್ಯಭಾವ:**— ತಾನು ಪರಮಾತ್ಮನ ದಾಸ, ಸೇವಕ ಎಂದು ಭಕ್ತನು ಹೇಳಿಕೊಳ್ಳುವನು. ಸೇವಕನಿಗೆ ಯಜಮಾನನಲ್ಲಿರುವ ಸಂಬಂಧವೇ ದಾಸ ಈಶರಲ್ಲಿರುವದು. ಅನಂತ ಪ್ರೇಮಸ್ವರೂಪಿಯಾದ ಪರಮಾತ್ಮನಿಗೆ ತನ್ನನ್ನು ಸಮರ್ಪಿಸಿ, ಸ್ವಸುಖಾಭಿಲಾಷೆಗಳನ್ನೆಲ್ಲ ತ್ಯಜಿಸಿಯಾದರೂ ಆತನ ಸೇವೆ ಮಾಡಿ, ಆತನನ್ನು ಒಲಿಸಿಕೊಂಡು, ಆ ಪರಮಾತ್ಮನ ಕೃಪೆಗೆ ಪಾತ್ರನಾಗು ವೆನೆಂಬ ಭಾವವೇ ದಾಸ್ಯಭಾವ. ಇದೇ ಭಾವವನ್ನು ಪ್ರಸನ್ನ ವೆಂಕಟರಲ್ಲಿ ಕಾಣುತ್ತೇವೆ.

" ವೆಂಕಟೇಶ ಶ್ರೀವೆಂಕಟೇಶ ಪಾಲಿಸು । ಕಿಂಕರನ ಪಾಲಿಸು " ||ಪಲ್ಲ||[೧] ಇಲ್ಲಿ " ನನ್ನ ಪಾಲಿಸು " ಎನ್ನುವದಕ್ಕಿಂತಲೂ " ಕಿಂಕರನ ಪಾಲಿಸು " ಎಂಬು ವದರಲ್ಲಿ ಔಚಿತ್ಯವಿದೆ.

**ಸಖ್ಯಭಾವ :**— ಮಿತ್ರರಿಗೆ ಇರುವ ಪರಸ್ಪರ ಸಂಬಂಧ. ಇದರಲ್ಲಿ ಭಕ್ತನು ತನ್ನ ಆರಾಧ್ಯ ದೇವನು ತನ್ನ ಗೆಳೆಯನ ಸಮಾನನು, ಒಡನಾಡಿಗನು ಎಂದು ಭಾವಿಸುವನು. ಆತನ ಸಾನ್ನಿಧ್ಯದಲ್ಲಿ ಸ್ವಲ್ಪವೂ ಭಯಪಡದೆ ಸಲಿಗೆ ಯಿಂದಿರುವನು. ಪ್ರಲ್ಹಾದನ ಭಕ್ತಿಯು ಸಖ್ಯಭಾವದಲ್ಲಿರುವದು. ಈ ಭಾವ ವನ್ನು ಪ್ರಸನ್ನ ವೆಂಕಟರಲ್ಲಿ ನೋಡಬಹುದು. " ನೀ ಸಾಕದಿದ್ದರೆ ಸಾಕುವ ರಾರೋ । ದಾಸಾಭಿಮಾನಿ ನೀನು ದಾರೊ ಕೃಷ್ಣಾ " ||ಪಲ್ಲ||[೨]

**ವಾತ್ಸಲ್ಯಭಾವ :**— ಮಾತಾ-ಪಿತೃಗಳಿಗೆ ತಮ್ಮ ಮಗುವಿನಲ್ಲಿರುವ ಮೃದುಮಧುರವಾದ ಸಂಬಂಧ. ಇಲ್ಲಿ ಭಕ್ತನಿಗೆ ಆತ್ಮವಿಶ್ವಾಸವಿದ್ದ ಮೂಲಕ ಆತನಿಗೆ ಭಯವಿಲ್ಲ. ಏಕೆಂದರೆ ಭಕ್ತನು ತನ್ನ ಆರಾಧ್ಯ ದೇವ ನನ್ನು ತನ್ನ ಮಗುವೆಂದೇ ಭಾವಿಸುತ್ತಾನೆ. ವತ್ಸನಿಗಿಂತ ತಾನು ಶ್ರೇಷ

೧. ಕೌಜಲಗಿ ಬಂಡೆಪ್ಪನವರು: ಪ್ರ. ವೆಂ. ಕೀ. ಪುಟ ೨೩ ಪದ ೧೯

೨. ಪ್ರಬಂಧ ಪದ ಸಂಖ್ಯೆ ೧೩೭

ಮತ್ತು ಬಲಿಷ್ಠ ಎಂಬ ಭಾವವು ಆತನಲ್ಲಿ ಮೂಡುತ್ತದೆ. ತನ್ನ ಮಗುವನ್ನು ತಾನೇ ಲಾಲಿಸಿ, ಪಾಲಿಸಿ, ಮುದ್ದುಗೈದು ಆನಂಪಪಡಬೇಕು. ಎಂಬ ತೀವ್ರವಾದ ಆಕಾಂಕ್ಷೆಯು ಆತನಲ್ಲಿ ಕಾಣುತ್ತದೆ. ಪ್ರಸನ್ನ ವೆಂಕಟರ ಈ ಮುಂದಿನ ಪದ್ಯದಲ್ಲಿ ವಾತ್ಸಲ್ಯಭಾವವು ವ್ಯಕ್ತವಾಗುವದು. "ಅಳದಿರೊ ಸುಮ್ಮನಿರವ್ಮಾ। ನೀ। ಅಳದಿರೊ ಒವ್ವ ಬಂದಾವವ್ಮ ಕೃಷ್ಣವ್ಮಾ॥"[೧]

**ಸಮರ್ಪಣಭಾವ** :— ಈ ಪ್ರಕಾರ ದೇವರ ಧ್ಯಾನದಲ್ಲಿ ಮಗ್ನನಾಗಿಯಾವಾಗಲೂ ಪರಮಾತ್ಮನಲ್ಲಿ ಮನಸಿಟ್ಟು, ಆತನೇ ಕರ್ತಾ ಎಂದು ತಿಳಿದು, ಎಲ್ಲವನ್ನೂ ಆತನಿಗೆ ಅರ್ಪಿಸಿ, ಆತನ ಸಾನಿಧ್ಯದಲ್ಲಿಯೇ ಇರಲು ಭಕ್ತನು ಬಯಸುವನು. ಇದೇ ಸಮರ್ಪಣಭಾವ.

ಎಲ್ಲ ಭಾವಗಳನ್ನು ಎಲ್ಲ ದಾಸರೂ ವರ್ಣಿಸಿದ್ದಾರೆ. ಆದರಲ್ಲಿ ಎಲ್ಲರೂ ಸಮಾನರೆ. ಆದರೆ ವಾತ್ಸಲ್ಯ ಹಾಗೂ ಸಮರ್ಪಣ ಭಾವಗಳನ್ನು ಪ್ರಸನ್ನ ವೆಂಕಟರು ಒಳ್ಳೇ ಸ್ವಾರಸ್ಯವಾಗಿಯೂ ಅನುಭವಿಕವಾಗಿಯೂ ನಿರೂಪಿಸಿದ್ದಾರೆ. ವಾತ್ಸಲ್ಯಭಾವದ ಸ್ವಾರಸ್ಯವನ್ನು ಮುಂದಿನ ಪದದಲ್ಲಿ ಕಾಣಬಹುದು. "ಎತ್ತೊದೆಯವ್ಮಾ। ಸಂಗನ್ನೆತ್ತಿಕೋವವ್ಮಾ। ಬಲು ಹತ್ತು ಹತ್ತು ಬಂದೀನೆ। ಇತ್ತೆ ಉಮ್ಮಿ ತಿಂದೇನೆ ॥"[೨] ಎಂಬ ಬಾಲಭಾಷೆಯಲ್ಲಿ ಆಡಿದ 'ಎತ್ತೊದೆಯವ್ಮಾ'–ಯಶೋದೆಯುವ್ಮಾ, 'ಸಂಗನ್ನ'–ರಂಗನ್ನ, 'ಹತ್ತು'–ಹಸ್ತು, (ಹಸಿದು) ಈ ನುಡಿಯಲ್ಲಿ ದಾಸರು ಮಗನಾಗಿ ಆಡಿದ ಮಾತುಗಳಲ್ಲಿ ವಾತ್ಸಲ್ಯ ಭಾವವು ತುಂಬಿ ತುಳುಕುತ್ತದೆ. ಇದೇ ಪ್ರಕಾರ ಸಮರ್ಪಣಭಾವದಲ್ಲಿ ಪ್ರಸನ್ನ ವೆಂಕಟರಿಗೆ ಬಾಲಕೃಷ್ಣನು ಅಂತ್ಯಕಾಲದಲ್ಲಿ ಪ್ರಸನ್ನನಾದೊಡನೆಯೇ ಅವರು ಅಂದದ್ದು— "ಪ್ರಾಣಕಪ್ಪುವ ನಿನಗಿತ್ತೆವಿನ್ನು ಕಾಯೊ ಶ್ರೀಪ್ರಸನ್ನ ವೆಂಕಟ ಜಾಣ ಪ್ರವೀಣಾ॥"[೩] ಇದರಲ್ಲಿ ದಾಸರು ತಮ್ಮ ಪ್ರಾಣವನ್ನು ಪರಮಾತ್ಮನ ಪಾದಾರವಿಂದದಲ್ಲಿ ಅರ್ಪಿಸಿದ್ದು ಕಂಡುಬರುವದು. ಮತ್ತೊಂದು ನುಡಿಯಲ್ಲಿ

---

೧. ಪ್ರಬಂಧಪದ ಸಂಖ್ಯೆ ೧೩೬

೨. ಪ್ರಬಂಧ ಪದ ಸಂಖ್ಯೆ ೧೪೧.

೩. ಇದೇಪ್ರಬಂಧ ಪದ ಸಂ೹ ೧೦೬ ನುಡಿ ೩

" ಸಾಮೂಪ್ಯ ಮುಕ್ತಿಯನೀಯೊ ನನ್ನ ಪರಸನ್ನ ವೆಂಕಟಯ್ಯಾ ॥ "[೧] ಎಂದು ಅನ್ನುವದರಿಂದ ತಾವು ದೇವರ ನಾಮಸ್ಮರಣೆಯಲ್ಲಿ ಇಲ್ಲವೆ ಆತನ ಆರಾಧನೆ ಯಲ್ಲಿ ಯಾವ ಮಟ್ಟಕ್ಕೆ ಬಂದವರು ಮತ್ತು ಆದರಿಂದ ತಾವು ಯಾವ ಮುಕ್ತಿಗೆ ಯೋಗ್ಯರು ಎಂಬುದನ್ನು ದಾಸರು ಚನ್ನಾಗಿ ತಿಳಿವಿದ್ದರೆಂದು ಹೇಳಬಹುದು.

ಇಲ್ಲಿಯ ವರೆಗೆ ಹೇಳಿದ ಭಾವಗಳಲ್ಲಿ ಮುಖ್ಯವಾದ ಒಂದು ಸಂಗತಿ ಏನೆಂದರೆ,ಭಕ್ತಿಯು ತುಂಬಿ ತುಳುಕುತ್ತಿರುವ ಕೀರ್ತನೆಗಳಿಗೆ ಇಲ್ಲವೆ ಹಾಡು ಗಳಿಗೆ ಭಕ್ತಿಯ ಭಾವವಾಙ್ಮಯ ಎಂದೆನ್ನಬಹುದು. ಇಂಥ ವಾಙ್ಮಯವನ್ನು ಎಲ್ಲ ದಾಸರಲ್ಲಿಯೂ ಕಾಣುತ್ತೇವೆ. ಪ್ರಸನ್ನ ವೆಂಕಟರಲ್ಲಿ ಭಕ್ತಿಯು ಎದ್ದು ಕಾಣುವ ಪದಗಳಿವೆ. " ಹೊರಿಯೊ ವಿಪಗಮನಾ । ಮಂಗಳ ಶರಧಿಜಾ ರಮಣಾ ॥ "[೨] ಎಂಬ ಪದದಲ್ಲಿ ಅದನ್ನು ಕಾಣಬಹುದು. ಇನ್ನೊಂದು ಪದ್ಯ ದಲ್ಲಿ ಭಕ್ತಿಯ ಮೇಲ್ಮಟ್ಟವನ್ನು ಕಾಣಬಹುದು. " ನೀನೆ ಗತಿ ಕೃಷ್ಣಾ ಎನಗೆ ನೀನೆ ಗತಿ ಕೃಷ್ಣಾ ॥ ಪಲ್ಲ ॥ ನೀನೆ ಗತಿಯೆಂದಾನತನಾಗಿ । ಮಾನಾಪಮಾನ ನಿನಗೊಪ್ಪಿಸಿದೆ । ಜ್ಞಾನವಿಹೀನನ ಪಾವನ ಮಾಡಿ । ಶ್ರೀನರಹರಿ ಕರುಣಿಸು ನಮ್ಮಯ್ಯನೆ ॥ "[೩] ಎಲ್ಲ ಭಾರವನ್ನು ಪರಮಾತ್ಮನ ಮೇಲೆ ಹಾಕಿ ಆತನೇ ಗತಿಯೆಂದು ಅನ್ನುವದೆಂದರೆ ಭಕ್ತಿಯ ಮೇಲಿನ ಮೆಟ್ಟಲೇ ಅನ್ನಬಹುದು. ಇದರಂತೆ ಪ್ರಸನ್ನ ವೆಂಕಟರು ತಮ್ಮ ನುಡಿಗಳಲ್ಲಿ " ಬಿಡೆನೋ ನಿನ್ನಂಘ್ರಿ ಶ್ರೀನಿ ವಾಸಾ । ನನ್ನ ದುಡಿಸಿಕೊಳ್ಳೆಲೊ ಶ್ರೀನಿವಾಸಾ ನಿ । ನ್ನುಡಿಯೇ ಜೀತಲ್ಲೋ ಶ್ರೀನಿವಾಸಾ । ನನ್ನ । ನಡೆತಪ್ಪು ಕಾಯೊ ಶ್ರೀನಿವಾಸಾ ॥[೪] ಇನ್ನೊಂದು ಪದ ವನ್ನು ನೋಡಬಹದು. " ನಂಬಿದೆ ನಂಬಿದೆ ನಿನ್ನ ಪಾದ । ದಿಂಬಿನೊಳಿಡು ವೆಂಕಟೇಶ ॥ ಬಿಂಬಮೂರುತಿ ಪ್ರಸನ್ವೆಂಕಟೇಶ ಪ್ರತಿ । ಬಿಂಬಕ್ಕರವು ವೆಂಕ ಟೇಶ ॥ "[೫] " ನಂಬಿದೆ, ನಂಬಿದೆ, ನಂಬಿದೆ '' ಎಂದು ಮೂರು ಬಾರಿ ಹೇಳುವ

---

೧. ಕೌಜಲಗಿ ಬಂಡೇರಾಯರು ಪ್ರ. ವೆ. ಕೀ. ಪುಟ ೪೨ ಪದ ೪೧ ನುಡಿ ೩

೨. ಪ್ರಬಂಧ ಪದ ಸಂಖ್ಯೆ ೫೭.

೩. ಕೌಜಲಗಿ ಬಂಡೇರಾಯರು: ಪ್ರ ವೆಂ. ಕೀ. ಪುಟ ೧೯ ಪದ ೧೭ ಪಲ್ಲ

೪. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೨೦ ಪದ ೧೭

೫. ಕೌಜಲಗಿ ಬಂಡೇರಾಯರು ಪ್ರ ವೆಂ, ಕೀ. ಪುಟ ೨೪ ಪದ ೧೯ ನುಡಿ ೪

ದೆಂದರೆ "ಸತ್ಯ ಸತ್ಯ ಸತ್ಯ" ನಂಬಿದೆನು ಎಂದು ಹೇಳಿದಂತೆ. ಇಂಥ ಪದಗಳು ಶ್ರೀಪ್ರಸನ್ನ ವೆಂಕಟದಾಸರಲ್ಲಿ ಹೇರಳವಾಗಿವೆ. ತಮ್ಮ ಕೃತಿಗಳಲ್ಲಿ ನಿಜವಾದ ಭಕ್ತನು ಯಾರು? ಎಂದು ವಿವರಿಸುವ ಕಾಲಕ್ಕೆ ಪ್ರಸನ್ನ ವೆಂಕಟರು ತಮ್ಮ ವ್ಯಕ್ತಿತ್ವವನ್ನು ಹೇಗೆ ತೋರಿಸಿದ್ದಾರೆಂಬುವನ್ನು ನೋಡಿರಿ.

"ಅರಿ ಸಖರೊಳು ಸಮವೆರಿಸಿ ನೋಡುತ ಹರಿ । ಇರಿಸಿದೊಲಂಗೀಕರಿಸಿ ನಿರಂತರ । ಪರಸನ್ನ ವೆಂಕಟಗಿರೀಶ ನಾವಮಾಸ್ತ್ರವ । ಧರಿಸಿ ನಿಸ್ಸಾರರ ತಾರಿಸುವವರು ॥"[೧]

"ಅರಿ ಸಖರೊಳು ಸಮವೆರಿಸಿ ನೋಡುತ" ಎಂಬ ಪಾದದಲ್ಲಿ ಸಖ ಮತ್ತು ಶತ್ರು ಇವರನ್ನು ಒಂದೇ ದೃಷ್ಟಿಯಿಂದ ನೋಡುವದೆಂದರೆ ಪ್ರಸನ್ನ ವೆಂಕಟರ ಸಮಾನದೃಷ್ಟಿ, ದೃಷ್ಟಿವಿಶಾಲತೆಗಳು ಕಂಡುಬರುವವು. ಮತ್ತು "ಹರಿಯಿರಿಸಿದೊಲಂಗೀಕರಿಸಿ" ಎಂಬುವದರಲ್ಲಿ ಭಕ್ತನಿಗೆ ಅವಶ್ಯವಾದ ಮತ್ತು ಭಕ್ತನಲ್ಲಿ ಇರತಕ್ಕಂಥ ಅಂಗೀಕಾರದ ಗುಣವು ಎದ್ದು ಕಾಣುತ್ತದೆ. ಇದೇ ಪ್ರಕಾರ

"ತಂದೆ ತಾಯಿ ಪುತ್ರ ನೀನೆ । ಬಂಧು ಬಾಂಧವ ನೀನೆ ನಿನ್ನಿಂದ ಬಳಗಿಲ್ಲೆನಗೆ । ಇಂದಿರಾಧವನೆ ಕಾಯೋ ॥ಪಲ್ಲ॥[೨]

ಇದರಲ್ಲಿ ತನ್ನ ಹೆಂಡರುಮಕ್ಕಳು, ತಾಯಿ, ತಂದೆ ಎಲ್ಲರನ್ನು ಬಿಟ್ಟು, ಧನಕನಕವನ್ನು ತ್ಯಾಗಮಾಡಿ, ಪ್ರಪಂಚವನ್ನು ಒದೆದು, ಹರಿಯನ್ನು ಹಿಂಬಾಲಿಸುವದೆಂದರೆ, ಸರ್ವರಿಗೂ ಸಾಧ್ಯವಿಲ್ಲ. "ಸರದಾರರಿಂದ, ಸಾಮಂತರಿಂದ ವರ್ಷಾಶನಗಳು, ಉಂಬಳಿಗಳು, ನನಗೆ ದೊರೆತಿವೆ. ಸುಖದಿಂದ ಪ್ರಪಂಚವನ್ನು ಸಾಗಿಸಬಹುದು" ಎಂಬ ಮೋಹದಲ್ಲಿ ಸಿಲುಕದೆ, ಆ ಮೋಹಪಾಶವನ್ನು ತೊರೆದು, ಹರಿಯ ವಿನಾ ಮುಕ್ತಿಯಿಲ್ಲ, ಎಂದು ತಿಳಿದುಕೊಂಡು ಹೋಗುವದು ಪ್ರಸನ್ನ ವೆಂಕಟರಂಥ ಅಸಾಮಾನ್ಯ ವ್ಯಕ್ತಿಗೇ ಮಾತ್ರ ಸಾಧ್ಯ.

ಹೀಗೆ ಪ್ರಸನ್ನ ವೆಂಕಟರ ವ್ಯಕ್ತಿತ್ವವನ್ನು ತೋರಿಸುವ ಅನೇಕ ಪದಗಳು ದೊರೆತಿವೆ. "ಕೆಡಗುಡದಿರು ದೇಶಿಗ ನಾ ರಂಗಾ । ನುಡಿ ನುಡಿದು

---

೧. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೧೧ ಪದ ೭ ನುಡಿ ೫

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪುಟ ೧೫ ಪದ ೧೨ ಪಲ್ಲ

ಮುಪ್ಪಾದೆ ನನ್ನಯ ನಡೆ ನೋಡಲಿ ಹುರುಳಿಲ್ಲಾ ||"೧ ಈ ಇಡೀ ಪದವನ್ನು ಓದಿದರೆ, ಪ್ರಸನ್ನ ವೆಂಕಟರು ತಮ್ಮಲ್ಲಿದ್ದಂಥ ದೋಷಗಳನ್ನು ಹೇಳಿ, ತಾವು ದಾರಿ ಹೇಗೆ ತಪ್ಪುವರು ಎಂಬುವನ್ನು ಹೇಳಿದ್ದಾರೆ. ತಮ್ಮ ತಪ್ಪುಗಳನ್ನು ಬಯಲಿಗೆಳೆದು ಜನರ ಮುಂದೆ ಇಡುವದು ಸಾಮಾನ್ಯ ವ್ಯಕ್ತಿಗೆ ಸಾಧ್ಯವಿಲ್ಲ.

"ದುರಿತಗಿರಿ ತಾ ಅರಿಗಿರಿಗಂಜೆ ನಾಮ | ವಜ್ರವಿರೆ ಪ್ರಸನ್ವೆಂಕಟೆರಸ ಮನ್ನಿಸಲೊಲ್ಲದೇತರ "೨

"ದುರಿತಗಿರಿ ಅರಿಗಿರಿಗಂಜೆ" ಎಂಬುದರಲ್ಲಿ ತಮಗೆ ಎಂಥ ಸಂಕಟಗಳು ಬಂದರೂ ಹರಿನಾಮದಿಂದಲೇ ಅವುಗಳನ್ನು ದಾಟಬಲ್ಲೆವು ಎಂಬ ಭಕ್ತಿಯ ದಾರ್ಢ್ಯವು ಶ್ರೀಪ್ರಸನ್ನ ವೆಂಕಟದಾಸರಲ್ಲಿ ಕಂಡುಬರುವದು.

೨. **ಸುಳಾದಿ**—ಇದರ ಬಗ್ಗೆ ಆಧಾರವು ಮೊದಲು ದೊರೆಯುವದು, "ವೆಂಕಟಮುಖಿ ಚತುರ್ದಂಡಿ ಪ್ರಕಾಶಿಕಾ" ಇದರಲ್ಲಿ. ಇಲ್ಲಿ ಹೇಳುವದೇನೆಂದರೆ—

ಧ್ರುವೋ ಮಠ್ಯೋ ರೂಪಕಶ್ಚ ಝಂಪಾ ತ್ರಿಪುಟ ಏವ ಚ |
ಅಠತಾಲೈಕತಾಲಶ್ಚೆ ತ್ಯಷ್ಟಾಲಂಕೃತಯಃ ಸ್ಮೃತಾಃ ||
ಏವಮುಷ್ಟಾಲಂಕಾರಾ ಲಕ್ಷಿತಾಲಕ್ಷ್ಯಸಮ್ಮತಾಃ
ಏತಾನ್ಧ್ರುವಾದಿಕಾನ್ಸಪ್ತತಾಳಾನ್ 'ಸೂಳಾದಿ' ಸಂಜ್ಞಕಾನ್ ||
ಗೀತಪ್ರಕರಣೋಕ್ತಿಷು ಗೀತೇಷು ವಿನಿವೇಶಯೇತ್
ಏತಾನ್ ವಾತಿರಿಕ್ತಾಂಸ್ತು ನ ಗೀತೇಷು ನಿವೇಶಯೇತ್
ಪ್ರಬಂಧೇಷು ಚ ಸಂಯೋಜ್ಯಾಸ್ತಾಲಪ್ರಕರಣೋದಿತಾಃ
ತಾಲಾಃ ಸೂಳಾದಿಕಾಶ್ಚೈತೇ ಸರ್ವ ಏವೇತಿ ನಿರ್ಣಯಃ ||

ಮೇಲಿನ ಎರಡೂ ಶ್ಲೋಕಗಳ ಮೇಲಿಂದ ಸುಳಾದಿಯ ಲಕ್ಷಣಗಳನ್ನು ಹೇಳಬಹುದು. ಮೂಲದಲ್ಲಿದ್ದ ಸಪ್ತ ತಾಲಗಳಾದ ಧ್ರುವ, ಮಠ್ಯ, ರೂಪಕ ಝಂಪಾ, ತ್ರಿಪುಟ, ಅಠ (ಅಟ್ಟ) ಮತ್ತು ಏಕತಾಲಗಳಿಂದ ಚತಿ ( ಜತಿ ) ಗಳಿಂದ ಸುಳಾದಿಯು ಕೂಡಿಕೊಂಡಿರುತ್ತದೆ. ಮತ್ತು ಆರಂಭದಲ್ಲಿ ಧ್ರುವ ತಾಳವು ಇರುತ್ತದೆ. ಜತೆ ಕೊನೆಗೆ ಇರುತ್ತದೆ. ಈ ಮೇಲಿನ ಏಳು ತಾಳ

---

೧. ಪ್ರಬಂಧ ಪದ ಸಂಖ್ಯೆ ೧೨೪

೨. ಶ್ರೀ ಕೌಜಲಗಿ ಬಂಡೇರಾಯರು : ಪ್ರ. ವೆಂ. ಕೀ. ಪುಟ ೨೫ ಪದ ೨೦ ನುಡಿ ೫

ಗಳಲ್ಲಿ ಶ್ರೋತ್ರ, ಚಕ್ಷು, ತ್ವಕ್, ರಸನೆ, ಘ್ರಾಣ, ಮನಸ್ಸು ಮತ್ತು ಬುದ್ಧಿ ಇವು ಗಳಿಗೆ ಒಂದು ಭಾವವು ಉಂಟಾಗಿ ಅದು ಹೊರಹೊಮ್ಮುತ್ತದೆ. ಸಾಧಾರಣ ವಾಗಿ ಧ್ರುವ ತಾಳದಲ್ಲಿ ಯಾವ ವಸ್ತುವಿನ ವರ್ಣನೆ ಮಾಡುವದಿದೆಯೋ ಆ ವಸ್ತುವಿನ ನಿರ್ದೇಶ, ಮಟ್ಟದಲ್ಲಿ ಆ ವಸ್ತುವಿನ ಗುಣಧರ್ಮಗಳ ವಿಸ್ತಾರ, ರೂಪ ಕದಲ್ಲಿ ಆ ವಸ್ತುವಿನ ಬಗ್ಗೆ ಅಭಿಮಾನ, ಝಂಪೆ ಮತ್ತು ತ್ರಿಪುಟಗಳಲ್ಲಿ ಆ ವಸ್ತುವಿನಲ್ಲಿ (ವಸ್ತುವಿನ ಬಗ್ಗೆ) ದೈನ್ಯ ವೃತ್ತಿಯಿಂದ ಪ್ರಾರ್ಥನೆ, ಅಟ್ಟ ಮತ್ತು ಆದಿಯಲ್ಲಿ ಆ ವಸ್ತುವಿನ ಸ್ತೋತ್ರ ಹೀಗೆ ಕಂಡುಬರುವದು. ಜತೆಯಲ್ಲಿ ಮಾತ್ರ ಈ ಮೇಲಿನ ಏಳು ತಾಳಗಳಲ್ಲಿದ್ದ ಸಾರಾರ್ಥ ಕಂಡುಬರುವದು. ಪ್ರತಿ ಯೊಂದು ತಾಳದಲ್ಲಿ ಇಷ್ಟೇ ನುಡಿಗಳಿರಬೇಕೆಂಬ ಬಂಧನವಿಲ್ಲ. ಮತ್ತು ಇಷ್ಟೇ ಪಾದಗಳಿರಬೇಕೆಂಬ ನಿಯಮವಿಲ್ಲ. ಈ ವಿಷಯದಲ್ಲಿ ಇದು ರಗಳೆಗೆ ಸರಿ ಹೋಗುತ್ತದೆ. ಆದರೆ ಪ್ರತಿಯೊಂದು ತಾಳದಲ್ಲಿದ್ದ ಭಾವವು ಪೂರ್ಣವಾಗಿರ ಬೇಕು. ಜೊತೆ (ಜತೆ) ಮಾತ್ರ ಹೆಸರಿಗೆ ಸರಿಯಾಗಿ ಎರಡು ಪಾದಗಳುಳ್ಳದು ಇರುವದು. ಎಲ್ಲ ತಾಳಗಳಲ್ಲಿ ಆದಿ ಪ್ರಾಸವು ಇರುವುದು. ಒಂದು ತಾಳದ ಲ್ಲಿಯ ಮೊದಲನೆಯ ಪಾದದ ಮೊದಲನೆಯ ಸ್ವರವು ಗುರುವಾದರೆ, ಆ ತಾಳ ದಲ್ಲಿಯ ಎಲ್ಲ ಸ್ವರಗಳು ಗುರುವಾಗಿರುವವು. ಇಲ್ಲವೆ ಲಘುವಿದ್ದರೆ ಲಘುವಾಗಿರು ವವು.

ಸುಳಾದಿಯಲ್ಲಿ ಹೆಚ್ಚಾಗಿ ದಾಸರು ದೇವರಸ್ತೋತ್ರಗಳನ್ನು ಮಾಡಿದ್ದಾರೆ. ದಾಸರು ಧ್ಯಾನಸ್ಥರಾಗಿ ಕುಳಿತು, ಇಷ್ಟ ದೇವತೆಯನ್ನು ಕಣ್ಣಮುಂದೆ ತಂದು ನೋಡಿ, ನಲಿದಾಡಿ ಗುಣಗಾನ ಮಾಡಲು ಪ್ರಾರಂಭ ಮಾಡಿದರೆ ರಗಳೆಯಲ್ಲಿ ಕಂಡುಬರುವಂತೆ ಭಾವನೆಗಳು ಸಂತತವಾಗಿ ಹರಿಯುತ್ತಿವೆ, ರಸವು ಸುರಿಯು ತ್ತಿದೆ. ಪ್ರಸನ್ನ ವೆಂಕಟರು ಬರೆದವುಗಳಲ್ಲಿ ದೊರೆತ ಎರಡು ಸುಳಾದಿಗಳಲ್ಲಿ ಈ ಬಗೆಯ ಸ್ತೋತ್ರವು ಕಂಡುಬರುತ್ತದೆ. ಒಂದರಲ್ಲಿ ಹರಿಯ ಸ್ತೋತ್ರವನ್ನು ಮಾಡಿದ್ದು, ಇನ್ನೊಂದರಲ್ಲಿ ಮೂಲ ರಾಮದೇವರ ಮಹಿಮೆಯನ್ನು ಹೊಗಳಿ ದ್ದಾರೆ. ಕೆಲವುದರಲ್ಲಿ ಯಾವದಾದರೊಂದು ಮಹನೀಯ ವ್ಯಕ್ತಿಯ ಸ್ತೋತ್ರವು ಕಂಡುಬರುವದು. ವಿಜಯದಾಸರು "ವ್ಯಾಸರಾಯರ ಸ್ತೋತ್ರ" ವನ್ನು ಮಾಡಿದ್ದಾರೆ. ಒಂದು ವಿಷಯದ ಇಲ್ಲವೆ ಪ್ರಮೇಯದ ಮೇಲೆ ಬರೆಯುವ ದುಂಟು. ಜಗನ್ನಾಥದಾಸರು "ಭಯ ಪರಿಹಾರ" ಸುಳಾದಿಯನ್ನು, ಗೋಪಾಲ

ದಾಸರು "ವಿರಕ್ತಿ" ಸುಳಾದಿಯನ್ನು, ವಿಜಯದಾಸರು "ಭೋಜನ" ಸುಳಾದಿಯನ್ನು ಬರೆದಿದ್ದಾರೆ.

ಎಲ್ಲ ತಾಳಗಳನ್ನು ಉಪಯೋಗಿಸಬೇಕೆಂಬ ನಿಯಮವಿದ್ದರೂ ಎಲ್ಲ ದಾಸರೂ ಎಲ್ಲ ತಾಳಗಳನ್ನು ಬಳಸಿಲ್ಲ. ಪುರಂದರದಾಸರು ಎಲ್ಲ ತಾಳಗಳನ್ನು ಬಳಸಿದ್ದಾರೆ.[೧] ಪ್ರಸನ್ನ ವೆಂಕಟರ ಸಮಕಾಲೀನರಾದ ಜಗನ್ನಾಥದಾಸರು "ಭಯ ಪರಿಹಾರ" ವೆಂಬ ಸುಳಾದಿಯಲ್ಲಿ ಎಲ್ಲ ತಾಳಗಳನ್ನು ಉಪಯೋಗಿಸಿದ್ದಾರೆ.[೨] ಇನ್ನೊಂದು ಸುಳಾದಿಯಲ್ಲಿ ಐದು ತಾಳಗಳನ್ನು ಈ ದಾಸರು ಬಳಸಿದ್ದಾರೆ.[೩] ಅದೇ ಪ್ರಕಾರ ವಿಜಯದಾಸರು "ನರಸಿಂಹ ಸುಳಾದಿ" ಯಲ್ಲಿ ಎಲ್ಲ ತಾಳಗಳನ್ನು ಉಪಯೋಗಿಸಿದ್ದಾರೆ.[೪] ಆದರೆ "ಶ್ರೀ ಪ್ರಾಣದೇವರ ಚರಣ ಮಹಿಮಾ" ಸುಳಾದಿಯಲ್ಲಿ ಇವರು ಐದು ತಾಳಗಳನ್ನು ಬಳಸಿದ್ದಾರೆ.[೫]

ಇನ್ನು ಪ್ರಸನ್ನ ವೆಂಕಟರು ಎರಡು ಸುಳಾದಿಯಲ್ಲಿ ಐದು ತಾಳಗಳನ್ನು ಉಪಯೋಗಿಸಿದ್ದಾರೆ.[೬] ಜೊತೆ ಮಾತ್ರ ಎಲ್ಲ ಸುಳಾದಿಯಲ್ಲಿ ಇದ್ದೇ ತೀರಬೇಕು. ಇನ್ನೊಂದು ವಿಶೇಷ ಸಂಗತಿಯೆಂದರೆ ಐದು ತಾಳಗಳನ್ನು ಬಳಸುವಾಗ್ಗೆ ತಾವೊಂದು ಬಂಧನವನ್ನು ಇಟ್ಟುಕೊಂಡಂತೆ ಕಾಣುತ್ತದೆ. ಅದೇನೆಂದರೆ ಎಲ್ಲರೂ ಧ್ರುವದಿಂದ ಆರಂಭ ಮಾಡತಕ್ಕದ್ದು. ಆ ಪ್ರಕಾರ ಆರಂಭಿಸಿ ಉಳಿದ ಮಟ್ಟ, ತ್ರಿವಿಡಿ (ತ್ರಿಪುಟ), ಅಟ್ಟ ಮತ್ತು ಆದಿ ಇವೇ ತಾಳಗಳನ್ನು ಬಳಸಿದ್ದಾರೆ.

ಭಕ್ತನು ದೇವರಲ್ಲಿ ಮಗ್ನನಾಗಿ, ಆತನಲ್ಲಿ ಮನವಿಟ್ಟು ಆತನನ್ನು ತಿಳಿದುಕೊಳ್ಳಲು ಧ್ಯಾನಸ್ಥನಾಗುವನು. ಆ ಕಾಲಕ್ಕೆ ಪರಮಾತ್ಮನ ರೂಪವನ್ನು ಕಂಡಂತಾಗಿ ಆತನನ್ನು ಸ್ತುತಿಸಲು ಪ್ರಾರಂಭಿಸುವನು. ಈ ಕಾಲಕ್ಕೆ ಆ

---

೧. ಕ. ಹ. ಕೀ. ತ. ಸಂಪುಟ ೧ ಸಂಚಿಕೆ ೭ ಪುಟ ೮೭

೨. ಕ. ಹ. ಕೀ. ತ. ಸಂಪುಟ ೨ ಪುಟ ೨೩೪.

೩. ಕ. ಹ. ಕೀ. ತ, ಸಂಪುಟ ೨ ಪುಟ ೨೩೯

೪. ಕ. ಹ. ಕೀ. ತ. ಸಂಪುಟ ೨ ಸಂಚಿಕೆ ೪ ಪುಟ ೯೬

೫. ಕ. ಹ. ಕೀ. ತ. ಸಂಪುಟ ೨ ವಿಜಯದಾಸರು ಪುಟ ೧೬

೬. ಪ್ರಬಂಧ ಪದ ಸಂಖ್ಯೆ ೧೯೬, ೧೯೭.

ಭಕ್ತನು ಅನುಭಾವಿಯಾಗುವನು. ಇಂಥ ಸ್ಥಿತಿಯಲ್ಲಿ ಒಮ್ಮೊಂದೊಮ್ಮೆ ಸ್ತೋತ್ರರೂಪವಾಗಿ ಹೊರಹೊಮ್ಮಿದ ಕಾವ್ಯವು ತನ್ನಿಂದ ತಾನೇ ತಾಳ ಮೇಳದಿಂದ ಕೂಡಿಕೊಂಡು ರಸಭರಿತವಾಗಿ ಕಿವಿಗಿಂಪಾಗಿ ಕೇಳುವುದು. ಇದೇ ಅನುಭಾವಿಯ ಅನುಭವದ ಪದ. ಶ್ರೀಪ್ರಸನ್ನ ವೆಂಕಟದಾಸರು ಸುಳಾದಿ ಗಳನ್ನು ಬರೆದು ತಾವು ಅನುಭಾವಿಗಳೆಂಬುದನ್ನು ಅವುಗಳಲ್ಲಿ ತೋರಿಸಿ ದ್ದಾರೆ.

೩. **ಉಗಾಭೋಗ:**- ಇವರ ಬಗ್ಗೆ ಶಾರ್ಙ್ಗದೇವನು ಬರೆದ 'ಸಂಗೀತ ರತ್ನಾಕರ'ದ ನಾಲ್ಕನೆ ಪ್ರಬಂಧದ ಎಂಟನೆಯ ಶ್ಲೋಕದಲ್ಲಿ ಆಧಾರವಿದೆ—

"ಉದ್ಗ್ರಾಹಃ ಪ್ರಥಮೋ ಭಾಗಃ ತತೋ ಮೇಲಾಪಕಃ ಸ್ಮೃತಃ ।
ಧ್ರುವತ್ವಾಚ್ಚ ಧ್ರುವಃ ಪಶ್ಚಾದಾಭೋಗಸ್ತ್ವಂತಿಮೋ ಮತಃ ।
ಧ್ರುವಾಭೋಗಾಂತರೇ ಜಾತಃ ಧಾತುರನ್ಯೋಂತರಾಭಿಧಃ ॥

ಉಗಾಭೋಗ ರಾಗಾಲಾಪನಕ್ಕೆ ಅವಶ್ಯವಾಗಿ ಬೇಕಾದ ಐದು ಲಾಕ್ಷ ಣಿಕ ತರಗತಿಗಳಲ್ಲಿ ಎಣಿಸಲ್ಪಟ್ಟ ವಾಗ್ಗೇಯಕಾರರ ಕೃತಿಗೆ ಉಗಾಭೋಗ ವೆನ್ನಬಹುದು. ಉಗಾಭೋಗದ ಐದು ಅಂಗಗಳೆಂದರೆ— ಉದ್ಗ್ರಾಹ, ಮೇಲಾಪಕ, ಧ್ರುವ, ಅಂತರಾ ಮತ್ತು ಆಭೋಗ. ಉದ್ಗ್ರಾಹ— ರಾಗಾ ಲಾಪನ ಆರಂಭ ಮಾಡುವನು. ಮೇಲಾಪಕ— ವಿಷಯಕ್ಕನುಸಾರವಾಗಿ ರಾಗವನ್ನು ಮೇಳೈಸುವದು. ಧ್ರುವ— ಆಲಾಪನೆಯಿಂದ ಹೊರಟು ಒಂದು ಮಟ್ಟಕ್ಕೆ ಬಂದು ಅಂತರಾಳದಲ್ಲಿ ಅದನ್ನು ಮುಂದೆ ಸಾಗಿಸಿ, ಕೊನೆಯ ಮೆಟ್ಟ ಲನ್ನು ಏರಿ, ಆಭೋಗದಲ್ಲಿ ಅದರಲ್ಲಿದ್ದಂಥ ಆನಂದವನ್ನು ಸವಿಯುವದು. ಈ ಹೆಚ್ಚಿನ ಆನಂದವೇ ಉಗಾಭೋಗ. ಉದ್ಗ್ರಾಹದಿಂದ ಆಭೋಗದ ವರೆಗಿನ ಪದ್ಧತಿಗೆ ಅನುಸರಿಸಿ ಮಾಡುವ ರಾಗಾಲಾಪಕ್ಕೆ "ಉದ್ಗ್ರಾಹಾ ಭೋಗ" ವೆಂಬ ಸಮಾಸ ಹೊಂದಿದ ಒಂದು ಪದದಲ್ಲಿ ಸಂಗೀತ ಭಾಷೆಗೆ ತಕ್ಕಂತೆ ಲಾಲಿತ್ಯಕ್ಕಾಗಿ ದ್, ರ್, ಹ್ ಈ ಮೂರು ವ್ಯಂಜನ ವರ್ಣಗಳನ್ನು ಲೋಪ ಮಾಡಿದ ರೂಪವೇ "ಉಗಾಭೋಗ" ವಾಗಿದೆ.[೧] ಇಲ್ಲವೆ ಪದ್ಯಗಳಿಗಿದ್ದ

---

೧, ಆಸ್ಥಾನ ವಿದ್ವಾನ್ ಕೃಷ್ಣಾಚಾರ್ಯ ಹುಲಗೂರವರ ಕ. ಸಂ. ಶಾ. ವಿಮರ್ಶೆ ಪುಟ ೧೬.

ಲಯ ತಾಳಗಳ ನಿಬದ್ಧತೆಯನ್ನು ಸಿಥಿಲಿಸಿ ಸ್ವರ ರಾಗ ಪ್ರಧಾನವಾಗಿ ನಾಮೋಪಾಸನೆಯ ಮುಖಾಂತರ ಮೋಕ್ಷವನ್ನು ಪಡೆಯಲಿಕ್ಕೆ ಹೊರಟ ಶೈಲಿಯೇ ಉಗಾಭೋಗ ಅಥವಾ ರಾಯಿ ಪದ್ಧತಿಯು.[೧]

ಈ ಮೇಲಿನ ವಿಸ್ತಾರವನ್ನು ನೋಡಿದರೆ ಕವಿಗೆ, ಭಕ್ತನಿಗೆ ಇಲ್ಲವೆ ವ್ಯಕ್ತಿಗೆ ಸ್ಫೂರ್ತಿಯುಂಟಾಗಿ ಒಮ್ಮೆಲೇ ಅಂತಃಕರಣದಿಂದ ಹೊರಹೊಮ್ಮುವ ನುಡಿಯೇ ಉಗಾಭೋಗವೆಂದೆನ್ನಬಹುದು. ಇದು ಸ್ತುತಿಯ ರೂಪದಲ್ಲಿರಬಹುದು. ನೀತಿಯ ಮರ್ಮವನ್ನು ತಿಳಿಸುತ್ತಿರಬಹುದು. ಹಿತೋಪದೇಶವನ್ನು ಮಾಡಿರಬಹುದು. ಇಲ್ಲವೆ ತಿಳಿವಳಿಕೆಯ ತಿರುಳನ್ನು ಹೇಳಿರಬಹುದು. ಈ ನಾನಾ ರೂಪದಿಂದ ಹೆಚ್ಚಾಗಿ ಉಪದೇಶ ರೂಪದಿಂದ ಎಲ್ಲ ದಾಸರಲ್ಲಿಯೂ ಇದು ಕಂಡುಬರುವದು.

**ಲಕ್ಷಣ:—** ದಾಸರು ಸಾಹಿತ್ಯದಲ್ಲಿ ಎರಡು ಭೇದಗಳನ್ನು ಕಲ್ಪಿಸಿರುವರು. ಕೀರ್ತನೆ, ಸುಳಾದಿಗಳು ತಾಳ ಪ್ರಧಾನವಾದವು. ಮತ್ತು ಉಗಾಭೋಗವು ರಾಗಪ್ರಧಾನವಾದುದು. ಉಗಾಭೋಗದಲ್ಲಿ ಲಾಲಿತ್ಯಕ್ಕೆ ಮತ್ತು ರಂಜನೆಗೆ ಹೆಚ್ಚು ಲಕ್ಷ ಕೊಡುವದುಂಟು. ಇದರಲ್ಲಿ ತಾಳಮೇಳಗಳ ತಿಕ್ಕಾಟವಿಲ್ಲ. ಪಾದಗಳ ಬಂಧನವಿಲ್ಲ. ನುಡಿಗಳ ಕಟ್ಟಿಲ್ಲ. ಆದಿ ಮಧ್ಯ ಅಂತ್ಯ ಪ್ರಾಸಗಳ ಭಯವಿಲ್ಲ. ಸ್ಫೂರ್ತಿ ಬಂದಾಗ ಎತ್ತಿದ್ದೇ ವಿಷಯ, ಹಾಡಿದ್ದೇ ಹಾಡು, ಆದರೆ ಯಾವದಾದರೊಂದು ವಿಷಯದ ಬಗ್ಗೆ ಪೂರ್ಣ ವಿಚಾರ ಮಾಡಿರಬೇಕು. ಇಲ್ಲವೆ ಆಳವಾದ ಭಾವನೆಯನ್ನೊಳಗೊಂಡಿರಬೇಕು. ಇದೇ ಇದರ ಮುಖ್ಯ ಲಕ್ಷಣ. ಪುರಂದರ ದಾಸರಲ್ಲಿ ೨ ಪಾದದ ಉಗಾಭೋಗವಿದ್ದು ಆದ್ಯ ಪ್ರಾಸ ಕಂಡುಬರುವದು.[೨] ಇದೊಂದು ಅಪವಾದ ಮಾತ್ರ. ಅದೇ ಪುಟದಲ್ಲಿ ಇನ್ನೊಂದು ಒಂದೂವರೆ ಪಾದದ ಉಗಾಭೋಗವಿದ್ದು ಕೇವಲ ಸ್ತೋತ್ರವಿದೆ. ವಿಜಯದಾಸರಲ್ಲಿ ನಾಲ್ಕು ಎಂಟು ಪಾದದ ಉಗಾಭೋಗಗಳಿದ್ದು ಅಲ್ಲಿ ಉಪದೇಶವಿದೆ.[೩] ಶ್ರೀಪಾದರಾಜ ಸ್ವಾಮಿಗಳವರ ಉಗಾಭೋಗದಲ್ಲಿ ಆರು ಪಾದ

---

೧. ಆಸ್ಥಾನ ವಿದ್ವಾನ್ ಕೃಷ್ಣಾಚಾರ್ಯ ಹುಲಗೂರರವರ ಕ. ಸಂ. ಶಾ. ವಿಮರ್ಶೆ ಪುಟ ೧೫.

೨. ಕ. ಹ. ಕೀ. ತ. ಸಂ. ೧ ಪುಟ ೧೭

೩. ಕ. ಹ. ಕೀ. ತ. ಸಂ. ೨ ಪುಟ ೨೩೯

ಗಳಿದ್ದು ಆದ್ಯ ಪ್ರಾಸವಿದೆ. ಇದರಲ್ಲಿ ಯಾರಿಗೆ ಯಾವ ರೀತಿಯಿಂದ ಸಂತೋಷ ವಾಗುವದೆಂಬುದನ್ನು ಹೇಳಿದೆ.೧ ಇನ್ನೊಂದು ಉಗಾಭೋಗದಲ್ಲಿ ಐದು ಪಾದಗಳಿದ್ದು ಯಾವ ಪ್ರಾಸವೂ ಕಂಡುಬರುವದಿಲ್ಲ. ಇದರಲ್ಲಿ ಯಾವ ಯುಗದಲ್ಲಿ ದೇವರನ್ನು ಯಾವ ಪ್ರಕಾರವಾಗಿ ಒಲಿಸಿಕೊಳ್ಳಬೇಕೆಂಬುದನ್ನು ಹೇಳಿದೆ.೨ ಶ್ರೀ ವ್ಯಾಸರಾಯರ ಉಗಾಭೋಗವು ನಾಲ್ಕು ಪಾದಗಳುಳ್ಳದ್ದಾಗಿದೆ. ಆದ್ಯ ಪ್ರಾಸವು ಕಂಡುಬರುವದು.೩ ಈ ದಾಸರ ಇನ್ನೂ ಕೆಲವು ಉಗಾಭೋಗಗಳಿದ್ದು ಕೆಲವುದರಲ್ಲಿ ಎಂಟು ಪಾದಗಳೂ ಮತ್ತೆ ಕೆಲವುಗಳಲ್ಲಿ ಒಂಬತ್ತು ಪಾದಗಳಿವೆ.೪ ಆದರೆ ಪ್ರಸನ್ನ ವೆಂಕಟರು ಉಗಾಭೋಗಕ್ಕೆ ಒಂದು ಹೊಸ ಚೈತನ್ಯವನ್ನು ತಂದುಕೊಟ್ಟಿದ್ದಾರೆ. ಈಗ ಸದ್ಯಕ್ಕೆ ದೊರೆತ ಅವರ ಮೂರು ಉಗಾಭೋಗಗಳಲ್ಲಿ ಒಂದು ಉಗಾಭೋಗವು ಉಳಿದ ದಾಸರ ಉಗಾಭೋಗದಂತಿದೆ.೫ ಆದರೆ ಉಳಿದೆರಡು ಮಾತ್ರ ಬೇರೆಯಾಗಿವೆ. ಒಂದು "ನವ ಭಕ್ತಿ ಉಗಾಭೋಗ"೬ ಇನ್ನೊಂದು "ನೀತಿಯ ಉಗಾಭೋಗ"೭ ಹೀಗೆ ಎರಡು ಉಗಾಭೋಗಗಳಿದ್ದು, ಮೊದಲಿನದರಲ್ಲಿ ಹನ್ನೊಂದು ನುಡಿಗಳಿದ್ದು, ಪ್ರತಿಯೊಂದು ನುಡಿಯಲ್ಲಿ ಆರು ಪಾದಗಳಿವೆ. ಎರಡನೆಯ ಉಗಾಭೋಗದಲ್ಲಿ ನಾಲ್ಕು ನುಡಿಗಳಿದ್ದು, ಮೊದಲೆರಡು ನುಡಿಗಳಲ್ಲಿ ನಾಲ್ಕು ಪಾದಗಳಿದ್ದು, ಕೊನೆಯ ಎರಡು ನುಡಿಗಳಲ್ಲಿ ಆರು ಪಾದಗಳಿವೆ. ಮತ್ತು ಎರಡೂ ಉಗಾಭೋಗಗಳಲ್ಲಿ ಆದ್ಯ ಪ್ರಾಸವನ್ನು ಇಟ್ಟಿದ್ದಾರೆ. ಇದೆಲ್ಲದರಲ್ಲಿ ಶ್ರೀ ಪ್ರಸನ್ನ ವೆಂಕಟದಾಸರ ವೈಶಿಷ್ಟ್ಯವಿದೆ. ಎಲ್ಲ ದಾಸರಂತೆ ಕೀರ್ತನೆಗಳನ್ನೂ ಮತ್ತು ಸುಳಾದಿ ಉಗಾಭೋಗಗಳನ್ನೂ ಪ್ರಸನ್ನ ವೆಂಕಟರು ಬರೆದರು. ಆದರೆ ಉಗಾಭೋಗಗಳಲ್ಲಿ ನುಡಿಯನ್ನು ಕಲ್ಪಿಸಿ, ಪ್ರತಿಯೊಂದು ನುಡಿಯಲ್ಲಿ ನಾಲ್ಕು, ಆರು

---

೧. ಕ. ಹ. ಕೀ. ತ. ಸಂ. ೩ ಶ್ರೀಪಾದರಾಜರು ಪುಟ ೮೪

೨. ಕ. ಹ. ಕೀ. ತ. ಸಂ. ೩ ಪುಟ ೧೧೦

೩. ಕ. ಹ. ಕೀ. ತ. ಸಂ. ೩ ಶ್ರೀವ್ಯಾಸರಾಯರು ಪುಟ ೨೨೭

೪. ಕ. ಹ. ಕೀ. ತ. ಸಂ. ೩ ಶ್ರೀವ್ಯಾಸರಾಯರು ಪುಟ ೨೨೪

೫. ಪ್ರಬಂಧ ಪದಸಂಖ್ಯೆ ೧೯೪

೬. ಪ್ರಬಂಧ ಪದಸಂಖ್ಯೆ ೧೯೫

೭. ಪ್ರಬಂಧ ಪದಸಂಖ್ಯೆ ೧೯೬

ಇಲ್ಲವೆ ಎಂಟು ಹೀಗೆ ಸಮಾನ ಪಾದಗಳನ್ನಿರಿಸಿ ಪ್ರಾಸದಿಂದ ಉಗಾಭೋಗ ವನ್ನು ಅಲಂಕರಿಸಿ ಅದಕ್ಕೆ ತಮ್ಮದೇ ಆದ ಒಂದು ದಾರಿಯನ್ನು ಹಾಕಿ ಕೊಟ್ಟರು.

**(ಡ) ಅಲಂಕಾರ:—**

ಅಲಂಕಾರಗಳು ಬಾಹ್ಯ ಆಭರಣಗಳಂತಿದ್ದರೂ ಒಂದು ರೀತಿಯಿಂದ ಅವು ಅರ್ಥದಲ್ಲಿ ಸೊಬಗನ್ನುಂಟು ಮಾಡುತ್ತವೆ. ಇಂಥ ಈ ಸೊಬಗು ಪ್ರಸನ್ನ ವೆಂಕಟರ ಕೃತಿಗಳಲ್ಲಿ ಸಹಜವಾಗಿ ಬಂದಿವೆ. ಇನ್ನು ಈ ಸೊಬಗಿನಲ್ಲಿ ವಾಡಿಕೆಯಂತೆ ಶಬ್ದಾಲಂಕಾರ, ಅರ್ಥಾಲಂಕಾರವೆಂದು ಎರಡು ವಿಧ.

೧. ಶಬ್ದಾಲಂಕಾರಗಳು:— ಈ ಅಲಂಕಾರಗಳಲ್ಲಿಯ ಎಲ್ಲ ಅಲಂಕಾರ ಗಳನ್ನು ಉಪಯೋಗಿಸದೆ ಛೇಕ, ವೃತ್ತಿ, ಯಮಕ, ಅನುಪ್ರಾಸಗಳನ್ನು ಪ್ರಸನ್ನ ವೆಂಕಟರು ವಿಶೇಷವಾಗಿ ಉಪಯೋಗಿಸಿದ್ದಾರೆ.

(i) **ಛೇಕಾನುಪ್ರಾಸ:** — "ಅನ್ನಮಯನು ಬೊಮ್ಮಾದ್ಯರಿಗೆ । ಅನ್ನ ಕಲ್ಪಂಗೆ ಪರ । ಮಾನ್ನ ಬೆಣ್ಣೆಪಾಲ್ಗುಡಿಸಿ । ಅನ್ನಪ್ರಾಶನೆ ಮಾಡಿಸುವಾ ‖ ತನ್ನ ಮಗನ ನಡಿಯ ನುಡಿಯ । ತನ್ನ ಪತಿಗೆ ಹೇಳಿ ಹಿಗ್ಗಿ । ತನ್ನ ಭಾಗ್ಯ ಲಕ್ಷ್ಮೀಶ ಪ್ರ । ಸನ್ನ ವೆಂಕಟನಾಡಿಸುವಾ ‖"೧

ಈಮೇಲಿನ ನುಡಿಯನ್ನು ನೋಡಿದರೆ ಒಂದೇ ವಿಧವಾದ ಎರಡನೆಯ ಅಕ್ಷರವನ್ನು ಎಷ್ಟು ಅನಾಯಾಸವಾಗಿ ಹೆಣೆದಿದ್ದಾರೆನ್ನುವದು ಕಂಡುಬರುವದು. ಇಂಥ ಅನೇಕ ಪದಗಳನ್ನು ಉದಾಹರಣೆ ಕೊಡಬಹುದು. ಕೆಳಗಿನ ಇನ್ನೊಂದು ಪದವನ್ನು ನೋಡಿರಿ—

"ಸುರರ ಸಂಪದ ಪರಮ ಪದಕೆ ಕಾರಣವಾಗಿರೆ ಸುರೇತರ್ರ್ಯರೆಲ್ಲ
ಇರುಳೆ ಹಗಲೆ ಸೈರಿಸಲಾರದೆ ಕರಗಿಹೋದ ವಿವರವ ಕೇಳಿ
ದುರುಳ ಕೌರವ ಪಾಂಡವರ ಶಿರಿಯು ತಮ್ಮದೆಂದರಿದು ಹೋಗಿರೆ
ಪರರ ದ್ರವ್ಯಕೆ ಮರುಗಿ ಬಯಸಿ ನರರು ಕೆಡುವ ಪರಿಯ ನೋಡಿ ‖೨

೧. ಪ್ರಬಂಧ ಪದಸಂಖ್ಯೆ ೧೩೮ ನುಡಿ ೪—೯
೨. ಪ್ರಬಂಧ ಪದಸಂಖ್ಯೆ ೮೭ ನುಡಿ ೪

" ಎಷ್ಟು ಸುಖಿಗಳೊ ಗೋವು ಗೊಲ್ಲತೆ ಗೋಪರು ಶ್ರೀ । ಕೃಷ್ಣನೊಡನೆ ಹಗಲಿರುಳೆ ಕ್ರೀಡಿಲಿ ಕಾಲ ಕಳೆವಾರೆಷ್ಟು ॥ "೧ ಮೊದಲನೆಯ ಪದದಲ್ಲಿ ಥೇಕಾನು ಪ್ರಾಸವು ಸಹಜವಾಗಿ ಬಂದಿದೆ. ಆದರೆ ಎರಡನೆಯದರಲ್ಲಿ ಪ್ರಾಸಕೆ " ಷ್ಟು " ಮತ್ತು " ಷ್ಣ " ಹೀಗೆ ಇಟ್ಟುಕೊಂಡಿದ್ದಾರೆ.

( ii ) **ವ್ಯತ್ಯಯಪ್ರಾಸ:—**

" ಸೃಷ್ಟ್ಯಾದಿಕಾರಣ । ಶಿಷ್ಟಸಂರಕ್ಷಣ । ದುಷ್ಟಮಥನ ಪೂರ್ಣ
ಇಷ್ಟ । ಕಷ್ಟಜನರ ಪ್ರುತ್ಯ್ಯ ನಷ್ಟತರ ಏಕೋ
ವಿಷ್ಣು ವರಿಷ್ಠ ವಿಶಿಷ್ಟ ಸುಖದನೆಂದು ।೨ ಕೋಮಲಗಾತ್ರನಾ ತಾಮರಸ
ದಳ ನೇತ್ರನಾ ಸ್ವಾಮಿ ಶಿರಿವಾಸನಾ ಕಂಡೆ ಹೇಮಗಿರಿವರಧೀಶನಾ॥"೩

( iii ) **ಯಮಕ :—**

ಇದರಲ್ಲಿ ಪ್ರಸನ್ನ ವೆಂಕಟರು ತಮ್ಮ ಹಿರಿಮೆಯನ್ನು ತೋರಿಸಿದ್ದಾರೆ. ಯಮಕವೆಂದರೆ ಅವರಿಗೆ ಹುಚ್ಚು. ದಾಸರು ಮನ ಬಂದಷ್ಟು ಇವನ್ನು ಬಳಸಿದ್ದಾರೆ. ಒಂದೆರಡನ್ನು ನೋಡಿದರೆ ಇದರಲ್ಲಿಯ ದಾಸರ ಕೈಚಳಕವು ಕಂಡು ಬರುವದು.

" ವರಿದು ಪರಿದು ಭಾರತವರ್ಷವ । ಅರಿದು ಅರಿದು ವರಭಾಗವತ ।
ಪರಿಯು ಪರಿಯು ಪುರಾಣಕೃತಿಯಾ।
ಪಾರಾಣ ಮಾಡಿ ಕುರುಡ ಬಧಿರಾ । ನರ ತೆರದಿ ಅರಹು ಮರವು ।
ಬೆರೆತು ಬೆರೆತು ತಾರತಮ್ಯಲ್ಲದೆ ॥ "೪

ಇಲ್ಲಿ ದಾಸರು ಆಚರಣೆಯ ಬಗ್ಗೆ ಹೇಳಿದ್ದಾರೆ. ಶ್ರೇಷ್ಠತರವಾದ ಭಾಗವತವನ್ನು ಪುರಾಣಗಳನ್ನು ಕೇಳಿ ಇಲ್ಲವೆ ಪಾರಾಯಣ ಮಾಡಿ ಕೊನೆಗೂ ತಾರತಮ್ಯದ ಬಗ್ಗೆ ವಿಚಾರ ಮಾಡದಿರುವ ಪಾಮರರಿಗೆ ಏನೆನ್ನಬೇಕು ? ಎಂಬ ಭಾವವು ಇಲ್ಲಿ ಮೂಡಿದೆ.

---

೧. ಪ್ರಬಂಧಪದ ಸಂಖ್ಯೆ ೧೬೫
೨. ,, ,, ೫೩ ನುಡಿ ೧
೩. ,, ,, ೨೭ ಪಲ್ಲ
೪. ,, ,, ೮೭ ನುಡಿ ೧

**೨. ಅರ್ಥಾಲಂಕಾರಗಳು**:–ಇದರಲ್ಲಿ ೧ ವ್ಯಾಜಸ್ತುತಿ, ೨ ಉಪಮೆ, ೩ ದೀಪಕಜಾತಿ ಈ ಪ್ರಕಾರ ಮೂರು ವಿಧ. ಅವುಗಳನ್ನು ಕೆಳಗಿನಂತೆ ನೋಡುವಾ–

(i) ವ್ಯಾಜಸ್ತುತಿ :— ಈ ಅಲಂಕಾರದಲ್ಲಿ ದೇವರನ್ನು ಕೊಂಡಾಡುವದು ಎಲ್ಲ ದಾಸರಲ್ಲಿದ್ದ ವಾಡಿಕೆ. ಅದೇ ಪ್ರಕಾರ ಪ್ರಸನ್ನ ವೆಂಕಟರ ಕೃತಿಗಳಲ್ಲಿ ಅದನ್ನು ಕಾಣಬಹುದು.

"ಆವ ಕುಲವ ನೋಡಿ ಮರುಳಾವೆ ಶ್ರೀ । ದೇವಿ ರಂಗಾಗೆ ಮಾಲೆ ಹಾಕಿದೆ ॥ "೧ ಇಲ್ಲಿ ದೇವರ ಬಗ್ಗೆ ಕೊಂಕು ಮಾತು ಕಂಡುಬರುವದು.

(ii) ಉಪಮೆ:—

"ಉಂಡುಂಡು ತುಡುಗ ಕೋಣನ ಪರಿ ಸೊಕ್ಕಿದೆ । ಕಂಡಲ್ಲಿ
ಕುಳಿತೆ ನೊಣನ ತೆರದಿ ॥ "೨

"ದೇವರ ಧ್ಯಾನದಲ್ಲಿ ಮಗ್ನನಾಗದೆ, ಆ ದೇವರ ಬಗ್ಗೆ ಜ್ಞಾನವನ್ನು ಗಳಿಸದೆ, ವ್ಯರ್ಥವಾಗಿ ಕಾಲ ಕಳೆಯುತ್ತಿದ್ದೇನೆ, ಕೋಣನಂತೆ ಮೆದ್ದು, ಕೇವಲ ಕೊಬ್ಬಿದ್ದೇನೆ. ನೊಣವು ಮನಬಂದಂತೆ ಅಲೆದಾಡುವದು. ಅದೇ ಪ್ರಕಾರ ನಾನೂ ಅಲೆಯುತ್ತಿದ್ದೇನೆ. ಯಾವ ಬಂಧನವನ್ನೂ ಇಟ್ಟುಕೊಂಡಿಲ್ಲ." ಎಂಬ ಮಾತನ್ನು ಉಪಮೆ ಕೊಟ್ಟು ಹೇಳಿದ್ದಾರೆ. ಈ ಉಪಮೆಗಳು ಎಷ್ಟು ಸಹಜವಾಗಿ ಬಂದಿವೆಯೆಂಬುದನ್ನು ಗಮನಿಸಬಹುದು.

"ಹೆತ್ತ ತಾಯಿ ಕುತ್ತಿಗೊತ್ತಿದರಾರೊ । ಮತ್ತೆ ತಂದೆ
ಮಾರಲಿತ್ತರಿನ್ಯಾರೊ ॥ "೩

ದೇವರೇ ತಂದೆ, ತಾಯಿ, ಬಂಧು, ಬಳಗ, ಆಪ್ತ ಎಲ್ಲವೂ ನೀನೆ. ಎಲ್ಲ ಭಾರವು ನಿನ್ನ ಮೇಲೆ. ಹೀಗಿದ್ದು ನೀನೆ ಪಾಲಿಸದಿದ್ದರೆ ಇನ್ನಾರು ಪಾಲಿಸುವರು? ಹೆತ್ತ ತಾಯಿಯೇ ಮಗನ ಕುತ್ತಿಗೆಯನ್ನು ಒತ್ತಿದರೆ ಆ ಮಗುವು ಏನನು ಮಾಡಲು ಸಾಧ್ಯ! ಜನ್ಮದಾತನು ಮಗುವನ್ನು ಮಾರಲು ಮನಸ್ಸು ಮಾಡಿದರೆ, ಇಲ್ಲವೆ

---

೧. ಪ್ರಕಾಶಕ : ಅ. ರಾ. ಸಾ. ದಾಸರ, ಪ. ಸಂ. ಭಾಗ ೩ ಪುಟ ೯೦ ಪದ ೫

೨. ಪ್ರಬಂಧಪದ ಸಂಖ್ಯೆ ೧೬೬ ನುಡಿ ೧

೩. ,, ,, ೩೮ ನುಡಿ ೪

ಮಗುವನ್ನು ರಕ್ಷಿಸಲಿಲ್ಲವಾದರೆ ಆ ಮಗುವಿನ ಗತಿಯೇನು? ಎಂಬ ಮಾತನ್ನು ಬಹು ಮಾರ್ಮಿಕವಾಗಿ ಹೇಳಿದ್ದಾರೆ.

( iii ) **ದೀಪಕ ಜಾತಿ:** — ಹರಿಯನ್ನು ಬಿಟ್ಟು ಉಳಿದವರು ಮೋಕ್ಷವನ್ನು ಕೊಡಲಾರರು. ಹರಿಯ ಸಮಾನರಾರೂ ಇಲ್ಲ. ಆತನಿಂದಲೇ ಅದು ಸಾಧ್ಯ. ಎಂಬ ಮಾತನ್ನು ಸ್ಪಷ್ಟವಾಗಿ ಹೇಳಿದ್ದಾರೆ.

"ಹಳುವಾದ ಬಿದರ ಪ್ರತದ ಮೆಳೆಯಲಿ ಇಕ್ಷುವಾಹದೇನೈ । ಹಲಕಾಲ ವರಿಯಾ ಬೇಯಿಸಿದಾರೆ ಮೃದು ರುಚಿ ಇಹದೇನೈ ॥ ಕೆಸರು ಮಳಲು ಮೆದ್ದರೊಡಲಾಗ್ನಿ ತಣ್ಣಿಸವಾಹುದೇನೈ । ಬಿಸಿಲಮೊರೆಗೆ ಮಂಜುವನಿಗೆ ಡಗೆಯ ತೃಷಿ ಹೋಹದೇನೈ । ಎಳೆಗರು ಮಣ್ಣಾವಿನ ಮೊಲೆಯುಂಡು ಜೀವಿಪದೇನೈ । ಹರಿಯಲ್ಲದನ್ಯ ದೈವಂಗಳು ಕೈವಲ್ಯಾನೀವವೇನೈ ॥" "ಶ್ರೀಹರಿಯ ಕರುಣ ಸಾಗರಕೆ ಕೂಪವಾಪಿಯು ಹೋಲ್ವವೇನೈ"೧ ಕರುಣ ಸಾಗರಕ್ಕೆ ಕೂಪ, ವಾಪಿಗಳನ್ನು ಹೇಗೆ ಹೋಲಿಸಲು ಸಾಧ್ಯ? ಎಳೆಗರು ಮಣ್ಣಾವಿನ ಮೊಲೆಯನ್ನು ಉಂಡು ಜೀವಿಸಲಾರದು. ಅಂದರೆ ಯಾವ ವಸ್ತುವಿನಿಂದ ಏನು ಮಾಡಲು ಸಾಧ್ಯವೋ ಅದು ಅದರಿಂದಲೇ ಸಾಧ್ಯ. ಅನ್ಯರ ಕಡೆಯಿಂದ ಸಾಧ್ಯವಿಲ್ಲ. ಮುಕ್ತಿಯನ್ನು ಕೊಡುವವನು ಹರಿಯಲ್ಲದೆ ಅನ್ಯ ದೈವಂಗಳಿಗೆ ಸಾಧ್ಯವಿಲ್ಲ. ಕಾರಣ ಹರಿಯನ್ನು ಭಜಿಸಿರಿ. ಎಂದು ದಾಸರು ಹೇಳಿದ್ದಾರೆ.

ಹರಿಯನ್ನು ಬಿಟ್ಟು ವಂಚಕರ ಕಡೆಗೆ ಹೋದರೆ, ಏನೂ ದೊರೆಯುವದಿಲ್ಲ ಎಂಬ ಮಾತನ್ನು ಹೇಳಬೇಕಾದರೆ "ಹಂಚಿನಿದಿರಿಲಿ ಹಲ್ಲು ತೆರೆದರೆ ಮಿಂಚುಗನ್ನಡಿಯಾಗಬಲ್ಲುದೆ"೨ ಎಂದು ಹೇಳಿ ಔಚಿತ್ಯವನ್ನು ತೋರಿಸಿದ್ದಾರೆ. ಅನೇಕ ಜನ್ಮ ಅಲೆದಾಡಿದರೂ ಹರಿಯು ಪ್ರಸನ್ನನಾಗದಿದ್ದರೆ ಜನ್ಮ ವ್ಯರ್ಥವೆಂಬುದಕ್ಕೆ— "ಕುನ್ನಿ ಸಂತಿಗೆ ಹೋದಂತೆ । ಮಣ್ಣಿನೊಳು ಹಾಲ ಕೊಡ ಒಡೆದಂತೆ ॥"೩ ಎಂದು ಹೇಳಿದ್ದಾರೆ. ಇಲ್ಲಿಯ ಮಾತು ಎಷ್ಟು ಸಹಜವಾಗಿದೆ ನೋಡಬೇಕು.

---

೧. ಪ್ರಬಂಧ ಪದ ಸಂಖ್ಯೆ ೨೧ ನುಡಿ ೧-೫

೨. ,, ,, ೧೫೬ ನುಡಿ ೧

೩. ,, ,, ೧೦೮ ನುಡಿ ೩

ತನ್ನ ಮನಸ್ಸು ತನ್ನನ್ನೇ ಕೆಡಿಸುತ್ತದೆಂಬ ಮಾತನ್ನು ಕೆಳಗಿನ ಪದದಲ್ಲಿ ಬಹು ಮಾರ್ಮಿಕವಾಗಿ ಹೇಳಿದ್ದಾರೆ—

"ಸಾಲಂಕೃತ ಬಾಲನೊಯಿದಡವಿಲಿ ಕೊಲ್ವ । ಆಲಯದ ಕಳ್ಳನಂತೆ ।
ಬಾಲೆಯನ್ನಾಳದೆ ಷಂಢ
ಘನಕೂಪದೊಳು ನೂಕಿಸುವಂತೆ । ದು । ರ್ಬಲರನು ಅರಸು ತಾ
ಶೂಲಕಿಕ್ಕಿಸುವಂತೆ ॥ "೧

ಇಲ್ಲಿ ಹೋಲಿಕೆಗಳು ಸರಿಯಾಗಿವೆ. ಯಾವ ಪ್ರಕಾರ ಅಲಂಕಾರ ವನ್ನು ಧರಿಸಿದ ಬಾಲಕನನ್ನು ಮನೆಯ ಕಳ್ಳನೇ ಅಡವಿಯಲ್ಲಿ ತೆಗೆದುಕೊಂಡು ಹೋಗಿ ಅವನನ್ನು ಕೊಲ್ಲಬೇಕೋ, ಷಂಢನು ತನ್ನ ಹೆಂಡತಿಯನ್ನು ಆಳದೆ ಅವಳನ್ನು ಕೂಪದಲ್ಲಿ ತಾನೇ ನೂಕಬೇಕೋ, ದುರ್ಬಲರಾದ (ಅಸಹಾಯ್ಯ ಸ್ಥಿತಿ ಯಲ್ಲಿದ್ದ) ತನ್ನ ಜನರನ್ನೇ ಒಬ್ಬ ಅರಸನು ಶೂಲಕ್ಕೇರಿಸಬೇಕೋ. ಅದೇ ಪ್ರಕಾರ ತನ್ನ ಮನಸ್ಸು ತನ್ನನ್ನು ಕೆಡಿಸುತ್ತದೆ ಎಂದು ಹೇಳುವ ರೀತಿಯಿದು.

"ಬಾಣವನೆಚಿದು ಬಿಲ್ಲ ನಡುಗಿಸುವಂತೆ "೨ ದುರ್ಜನರು ಹೇಗೆ ಇರುತ್ತಾ ರೆಂದರೆ, ಅವರು ತಾವು ಮೊದಲು ಕೆಟ್ಟ ಕೃತಿಯನ್ನು ಮಾಡಿ, ಆಮೇಲೆ ತಾವು ಆ ಕೃತಿಯನ್ನು ಮಾಡಿಲ್ಲವೆಂದು ಹೇಳುತ್ತಾರೆ. ಇದೇ ಪ್ರಕಾರ ಮೊದಲು ಬೇಟೆಗಾರನು ಬಾಣವನ್ನು ಬಿಟ್ಟು, ಆಮೇಲೆ ತಾನು ಬಿಟ್ಟಿಲ್ಲ ಎಂದು ತೋರಿಸು ವದರ ಸಲುವಾಗಿ ತನ್ನ ಬಿಲ್ಲನ್ನು ನಡುಗಿಸುವನು.

"ಪತಂಗವುರೆ ಕೆಡುವ ಪರಿಲಿ । ಸಲ್ಲಾಪವೆ ಪರಸತಿಯರೊಡನೆ ॥೩ " ಎಂಬ ಮಾತಿನಲ್ಲಿ ದಾಸರು ಹೇಳುವದೇನಂದರೆ ಯಾವ ಪ್ರಕಾರ ತಿಳಿಯೂ ತಿಳಿದೂ ತನ್ನ ನಾಶವಾಗುತ್ತಿದ್ದರೂ ದೀಪದ ಹುಳವು ದೀಪದ ಮೇಲೆ ಹೋಗಿ ಬೀಳುವದೋ ಜನರು ಪರಸತಿಯರಲ್ಲಿ ಮನಸ್ಸು ಮಾಡಿ ತಾವು ಹಾಳಾಗುವರು.

"ಮಂಡೂಕಹಿ ಮುಖದಿ ಕಂಡು ಮಕ್ಷಿಕವ ತಾ । ನುಂಡೆನೆಂಬುವ

---

೧. ಪ್ರಬಂಧ ಪದಸಂಖ್ಯೆ ೧೦೦ ನುಡಿ ೨

೨. ಕೌಜಲಗಿ ಬಂಡೇರಾಯರು : ಪ್ರ. ವೆಂ. ಕೀ. ಭಾಗ ೧ ಪುಟ ೯ ಪದ ೬ ನುಡಿ ೨

೩. ಕೌಜಲಗಿ ಬಂಡೇರಾಯರು : ಪ್ರ. ವೆಂ. ಕೀ. ಭಾಗ ೧ ಪುಟ ೫೧ ಪದ ೪೮ ನುಡಿ ೬

ಪರಿ || "೧ ಯಾವ ಪ್ರಕಾರ ಸರ್ಪದ ಮುಖದಲ್ಲಿದ್ದ ಕಪ್ಪೆಯು ತನ್ನ ನಾಶ ವಾಗುತ್ತಿದೆಯೆಂದು ತಿಳಿದರೂ ತಾನು ನೊಣವನ್ನು ತಿನ್ನುವ ಬಯಕೆಯನ್ನು ಬಿಡುವದಿಲ್ಲವೋ ಹಾಗೆಯೇ ತನ್ನ ನಾಶವಾಗುತ್ತ ನಡೆದಿದೆ ಎಂಬ ಮಾತು ಮನುಷ್ಯನಿಗೆ ತಿಳಿದರೂ ಆತನು ವಿಷಯದ ಮೇಲಿನ ಮೋಹವನ್ನು ಬಿಡುವದಿಲ್ಲ ವೆಂಬುದನ್ನು ಅರ್ಥವತ್ತಾಗಿ ದಾಸರು ಹೇಳಿದ್ದಾರೆ.

ಈ ಮೇಲಿನ ಹೋಲಿಕೆಗಳ ಮಾಲಿಕೆಯನ್ನು ನೋಡಿದರೆ ಪ್ರತಿಯೊಂದು ವಿಷಯದಲ್ಲಿ ಪ್ರಸನ್ನ ವೆಂಕಟರ ಅನುಭವ, ಹರಿತವಾದ ನೋಟ, ಜನರು ದಾರಿ ತಪ್ಪುವರಲ್ಲ ಎಂಬ ಸಂಕಟ ಮತ್ತು ಇದರಿಂದ ಸಮಾಜವನ್ನು ಉದ್ಧರಿಸಿ ಅವರಿಗೆ ಮುಕ್ತಿಪಥವನ್ನು ಸುಲಭಮಾಡಿಕೊಡಬೇಕೆಂಬ ಬಲವಾದ ಬಯಕೆ, ಇವು ಪ್ರಸನ್ನ ವೆಂಕಟರಲ್ಲಿ ಕಂಡುಬರುವವು. ಅಲ್ಲದೆ ಅವರು ತಮ್ಮ ಭಾವ ಗಳಿಗೆ ಸಾಹಿತ್ಯದ ಸುವರ್ಣರೇಖೆಯನ್ನು ಲೇಪಿಸಿ, ಲೌಕಿಕ ದೃಷ್ಟಾಂತ ಗಳಿಂದಲೂ ದೇಶೀ ನುಡಿಗಳಿಂದಲೂ ಅವನ್ನು ಸಹಜ ಸುಂದರಗೊಳಿಸಿ ಹೇಳ ಬಲ್ಲರೆಂಬುದನ್ನು ಇವುಗಳಿಂದ ಅರಿಯಬಹುದು.

( ಇ ) **ಪ್ರಾಸ:**—ಎಲ್ಲ ದಾಸರು ಪ್ರಾಸವನ್ನು ತಮ್ಮ ಕೃತಿಗಳಲ್ಲಿ ಉಪ ಯೋಗಿಸಿದ್ದಾರೆ. ಇದರಲ್ಲಿ ಆದಿ, ಅಂತ್ಯ, ಮಧ್ಯಗಳೆಂದು ಮೂರು ವಿಧ. ಪ್ರಸನ್ನ ವೆಂಕಟರಲ್ಲಿಯೂ ಆದಿ, ಮಧ್ಯ ಮತ್ತು ಅಂತ್ಯಪ್ರಾಸಗಳನ್ನು ಕಾಣಬಹುದು.
೧. **ಆದಿಪ್ರಾಸ** :— ಆದಿಪ್ರಾಸ ನುಡಿಯ ಪ್ರತಿಪಾದದ ಎರಡನೇ ಅಕ್ಷರವು ಒಂದೇ ವಿಧವಾದದ್ದು ಇರುವದು, ಇದರಲ್ಲಿ ಅನೇಕ ಪ್ರಭೇದಗಳಿವೆ—

( i ) **ಸಿಂಹಪ್ರಾಸ:**—"ನರಕಚತುರ್ದಶಿಯ ಪರ್ವದಾ। ಹರಿ ಹರುಷದಿ ಪ್ರಕಟಿಸಿದನು ದೇವಾ। ಶರಣಾಗತಜನವತ್ಸಲಾ। ರಂಗ ಪರಮಭಾಗವತರ ಪ್ರತಿಪಾಲಾ ||"೨ ( ii ) **ಗಜಪ್ರಾಸ** :—" ಸ್ನಾನ ಸಂಧ್ಯಾವಂದನೆ ಸುಚ್ಛೈಲದಿ ಧ್ಯಾನಮೌನವ ಹಿಡಿಸಿ। ದಾನಧರ್ಮ ಕೈವಲ್ಯದಾರೆಂದು ನಿದಾನ ತುಷ್ಟಿಯ ಬಡಿಸೀ। ತಾನರಕ್ಷಣ ಸ್ವಸ್ತವಿರವೆಲ್ಲಾ........ಹಾನಿಮಾಡಿತು ಚಿತ್ತ ಕೆಡಿಸಿ ||"೩

---

೧. ಕೌಜಲಗಿ ಬಂಡೇರಾಯರು : ಪ್ರ.ವೆ.ಕೀ. ಭಾಗ ೧ ಪದ ೬೫ ಪುಟ ೭೩ ನುಡಿ ೪
೨. ಪ್ರಬಂಧಪದ ಸಂಖ್ಯೆ ೧೬೪ ನುಡಿ ೪
೩. ,, ,, ೧೦೦ ನುಡಿ ೧

(೩) **ವೃಷಭಪ್ರಾಸ**— "ಮಂದರಧರ ನಿಜ ಸುಂದರ ಚಿನ್ಮಯ । ಮಂದಿರ ನಿತ್ಯಾನಂದಾ ಜಯ ಜಯ । ವೃಂದಾವನಚರ ವೃಂದಾರಕ ಮುನಿ । ವೃಂದ ನೃಪಾನ್ವಯ ವಂದ್ಯಾ ರಾಮಾ ||"೧

(೪) **ಶರಭಪ್ರಾಸ**— ಭಕ್ತಿಯುಂಟೆಂಬಿಯಾ ರಂಗಾ । ಮಿಶ್ರ । ಭಕ್ತಿಯೆ ತುಂಬಿಪೆ ರಂಗಾ । ಶಕ್ತಿಯ ನೋಡುವೆ ರಂಗಾ । ವಿಷಯಾ। ಸಕ್ತಿಯೆ ಶಕ್ತಿಯು ರಂಗಾ ||"೨

ಇವೆಲ್ಲವೂ ನಿಯಮಕ್ಕನುಸಾರವಾಗಿ ಬಂದಿವೆ.

ಇನ್ನು ಕೆಳಗಿನ ಪದ್ಯ.........ದಲ್ಲಿ ನೋಡಿದರೆ,

"ವ್ಯಾಘ್ರೇಶ್ವರಾ ಜಿತ.........ಅಗ್ರಸೂಯಜ್ಞಾದಿ ಕರ್ತಾ............ಉಗ್ರ ಕೌರವ ಜನ.........ತಾಗ್ರಣಿ ಭೀಮ ||"೩ ಮೊದಲಿನ ಸಾಲಿನಲ್ಲಿ 'ಘ್ರೆ' ಎಂಬ ದನ್ನು 'ಗ್ರ' ಈ ಸ್ಥಾನವಲ್ಲಿಟ್ಟಿದೆ. ಹೀಗೆ ಹಿಂದಿನವರೂ ಉಪಯೋಗಿಸಿದ್ದಾರೆ.

(೪) **ಹಯಪ್ರಾಸ**— "ಮುನ್ನಾರು ಅನ್ಯ ದೇವರ ಭಜಿಸಿ ಭವ ಗೆದ್ದ। ರಿನ್ನಾರು ಹರಿಯೊಲುಮೆಯಲ್ಲಿ ದಣಿವರು । ನಿನ್ನ ಹಿತಕರ ಗುರುಗಳಿಂದರಿತು ನೆರೆನಂಬಿ ಪ್ರ । ಸನ್ನ ವೆಂಕಟಪತಿಯೆ ಪದವನ್ನು ಈವಾ ||"೪

೨. **ಮಧ್ಯಪ್ರಾಸ**— ಆದ್ಯ ಪ್ರಾಸದಷ್ಟು ಕೈಚಳಕವು ಮಧ್ಯಪ್ರಾಸ ದಲ್ಲಿಲ್ಲ. ಆದರೂ ಉದಾಹರಣೆಗಾಗಿ ದೊರೆಯುತ್ತಿವೆ. "ಮಾರಜನ ಪೆತ್ತಾಗೆ ಕು । ಮಾರನೆಂದು ಕರೆದು ತನ್ನ । ಮಾರು ಬೀಸಿ ಬಿಗಿದಪ್ಪಿ । ಮೋರೆ ನೋಡಿ ಮುದ್ದು ಕೊಡುವುದು ||"೫

೩. **ಅಂತ್ಯಪ್ರಾಸ**— ಆದ್ಯ ಪ್ರಾಸದಷ್ಟು ಅಂತ್ಯ ಪ್ರಾಸವನ್ನು ಬಳಸ ದಿದ್ದರೂ ಮಧ್ಯಪ್ರಾಸಕ್ಕಿಂತಲೂ ಹೆಚ್ಚಾಗಿ ಉಪಯೋಗಿಸಿದ್ದಾರೆ. "ವೈಮನ ವಾಸನಾವಿಧಿ ಭವೇಂದ್ರಾಸನಾ । ಕಾಮಪಿತನ್ನಾ ಕಲಿಭಯ ಭೀತನ್ನಾ ||"೬

---

೧. ಪ್ರಬಂಧ ಪದಸಂಖ್ಯೆ ೪೩ ನುಡಿ ೩
೨. ,, ೧೮೨ ನುಡಿ ೧
೩. ,, ೨ ನುಡಿ ೨
೪. ,, ೭೦ ನುಡಿ ೩
೫. ,, ೧೩೮ ನುಡಿ ೧
೬. ,, ೧೬೭ ನುಡಿ ೪

"ಬಾಲನ ಮ್ಯಾಲಿ ನಿನ್ನ ಮೋಹವವ್ವಾ । ನಾವು ಹೇಳಿದ ಮಾತು ನೀ ಕೇಳೆಯವ್ವಾ ॥"೧ "ಜೆಣ್ಣೆ ಗಿಣ್ಣೆವೆಂಬುವನಲ್ಲ ಎನ್ನ ಬ್ಯಾಡೆ । ನಮ್ಮ । ಬೆಣ್ಣೆ ಕದ್ದು ಮೆದ್ದ ಕಟವಾಯಿ ನೋಡೆ ॥"೨

(ಈ) ನಾದಗುಣ—

ಶ್ರೀಪ್ರಸನ್ನ ವೆಂಕಟದಾಸರ ಕೀರ್ತನೆಗಳು, ಸುಳಾದಿ, ಉಗಾಭೋಗ ಇವುಗಳನ್ನು ನೋಡಿದರೆ, ಅವರಲ್ಲಿದ್ದ ಶಬ್ದಸಾಮರ್ಥ್ಯವು ಕಂಡುಬರುವದು. ಇದರಿಂದ ಅವರ ಭಾಷೆಗೆ ಒಂದು ತರಹದ ಬಿಗುವುಂಟಾಗಿದೆ. ಅಂಥ ಭಾಷೆಯಲ್ಲಿ ಅಲಂಕಾರ, ಪ್ರಾಸ, ಛಂದಸ್ಸು, ರಾಗ, ತಾಳ, ಲಯಗಳು ಹಾಸುಹೊಕ್ಕಾಗಿ ಬಂದದ್ದರಿಂದ ಅಲ್ಲಿ ನಾದವುಂಟಾಗಿದೆ. ಈ ನಾದವನ್ನು ಕೆಳಗಿನ ಉದಾಹರಣೆಗಳಲ್ಲಿ ಕೇಳಬಹುದು—

"ಧಂ, ಧಾಂ, ಧಂಧಣ ಧಾಂ । ಧಿಮಿಕಿಟಿಧಂ ಧಣಧಾಂ ॥"೩ "ಅವ್ಮಾ ಬಾರೋ ರಂ । ಗವ್ಮಾ ಬಾರೋ ಪುಟ್ಟ । ತವ್ಮಾ ಬಾರೋ ಮುದ್ದಿ । ನುವ್ಮಾ ತಾರೋ ॥"೪

ಇಂಥ ಈ ಸುಂದರವಾದ ಪದವನ್ನು ಒಮ್ಮೆ ಮೊದಲಿನಿಂದ ಕೊನೆಯವರೆಗೆ ಓದಿ ನೋಡಿದರೆ ವೃತ್ಯನುಪ್ರಾಸವು ಎಷ್ಟು ಸಹಜವಾಗಿ ಬಂದಿದೆ. ತಾಳ, ಲಯಗಳು ಹೇಗೆ ಮೇಳವಿಸಿಕೊಂಡು ಬಂದಿವೆ. ಮೃದು ಹಾಸ್ಯ ಹೇಗೆ ತೇಲಿ ಬರುತ್ತಿದೆ. ಈ ಹಾಸ್ಯನಾದ ಕರ್ಣಪಟಲದ ಮೇಲೆ ಹೇಗೆ ಮೂಡುತ್ತಿದೆ ಎಂಬುದು ಸಹಜವಾಗಿ ಹೊಳೆಯುವದು.

"ರಂಗ ಕೊಳಲೂದಲಾಗಿ ರಂಗಯ್ಯಾ ಕೊಳಲನೂದಲು । ಮಂಗಳಮಯವಾಯಿತು ಧರೆಯ ಜ । ನಂಗಳು ಜೀವನಚೇತನ ಮರೆದು ।ರಂಗಧ್ಯಾನ ಪರರಾದರೊ ॥ಪಲ್ಲ॥೫

---

೧. ಪ್ರಬಂಧ ಪದಸಂಖ್ಯೆ ೧೪೮ ಪಲ್ಲ
೨. ,, ೧೪೮ ನುಡಿ ೧
೩. ,, ೫೦ ನುಡಿ ೯
೪. ,, ೧೩೫ ಎಲ್ಲ ಪದ
೫. ,, ೧೯೨ ಎಲ್ಲ ಪದ

ಈ ಪಲ್ಲವಿಯು 'ರಂಗನ ಕೊಳಲ ವರ್ಣನೆ' ಯಲ್ಲಿ ಇದೆ. ಈ ಪದದಲ್ಲಿ ಐದು ನುಡಿಗಳಿವೆ. ಪಲ್ಲವಿಯಿಂದ ಆರಂಭ ಮಾಡಿ ಕೊನೆಯ ವರೆಗಿನ ಪ್ರತಿಯೊಂದು ಪದದ ಕೊನೆಯ ಅಕ್ಷರವು ಕೊಳಲಿನಲ್ಲಿಯ ದೀರ್ಘ ಸ್ವರವನ್ನು ಉಂಟು ಮಾಡುತ್ತದೆ. ಈ ಪದವನ್ನು ಓದಿದರೆ, ಕೊಳಲ ಸ್ವರದಂತೆ ಹೊರಡುವ ಇನಿದನಿಯು ಎಷ್ಟು ರಮ್ಯವಾಗಿದೆಯೆಂದು ಓದುಗನು ಅನ್ನದಿರಲಾರನು.

"ಶ್ರುತಿ ಪಂಚರಾತ್ರಾಗಮವು ಸಾರುತಿವೆ ||"೧ ಇಲ್ಲಿ 'ಸಾರುತಿವೆ' ಎಂಬುದರಲ್ಲಿಯ "ಸಾ" ಅಕ್ಷರದಲ್ಲಿಯ "ಆ" ಸ್ವರದಿಂದ ಹೊರಟ ನಿನಾದವು ಡಿಂಗರಿಗನ ಡಂಗುರದ ನಿನಾದದಂತೆ "ಭೂ ವ್ಯೋಮ ಪಾತಾಳ ಲೋಕಂಗಳಲ್ಲಿ" ತುಂಬುತ್ತದೆ. "ವೃಂದಾರಕ ವಂದ್ಯಾ ಯದುಕುಲಾಂಬುಧಿ ಚಂದ್ರಾ||"೨ ಎಂಬ ನುಡಿಯಲ್ಲಿ ಕೊನೆಯ ಶಬ್ದಗಳಾದ "ಚಂದ್ರಾ" "ವಿಶಾಲಾ" "ನಗೇಶಾ" "ಅನಂತಾ" ಇದೇ ಪ್ರಕಾರ "ಮಾಧವಾ" "ಮುಕುಂದಾ" "ಪೂರ್ಣಾ ಗುಣಾಂಕಾ"೩ ಮತ್ತು "ಒಂದು ಬ್ರಹ್ಮಾಂಡ ತುಂಬೊ ರೂಪಾ||"೪ ಈ ಪದಗಳನ್ನು ನೋಡಿದರೆ ಕೊನೆಯ 'ಆ' ಸ್ವರದಿಂದ ಹೊರಡುವ ನಾದವು ಹರಿ ಸರ್ವೋತ್ತಮನ ಸರ್ವ ವ್ಯಾಪ್ತಿಯನ್ನೂ ವಿರಾಟ ರೂಪವನ್ನೂ ತೋರುವವು. "ರಂಗಾ ಕುಣಿದಾ ಮುದ್ದು ರಂಗ ಕುಣಿದಾ"೫ ಎಂದು ಪಲ್ಲವಿಯಿಂದ ಆರಂಭ ಮಾಡಿದ ಈ ಪದದಲ್ಲಿ ಕಿರುಗೆಜ್ಜೆಯ ನಾದವು ತುಂಬಿ ತುಳುಕುತ್ತದೆ. ಪಲ್ಲವಿಯು ಪದದ ಸಾರವನ್ನು ಕೊಡುತ್ತದೆ. ಇದೇ ಪದದಲ್ಲಿ "ಬಳಕುತಬಾಗುತ ನಲಿನಲಿದಾಡಿ" ಎನ್ನುವದರಿಂದ ನಯ ವಿನಯದಿಂದ ತುಂಬಿದ ಅಂದವಾಗಿ ಕುಣಿಯುವ ರೀತಿಯು ಕಂಡುಬರುವದು. "ಕಳಕಳಿಸಿ ನಕ್ಕು ನಗಿಸಿ ಬಿದ್ದೆದ್ದು" ಎಂಬ ಇದೇ ಪದದಲ್ಲಿಯ ನುಡಿಯಿಂದ ಕುಣಿಯುವವರು ನಗುವರೇನೋ ಸರಿ, ಆದರೆ ನೋಟಕರು ಕೂಡ ನಗುವಿನಲ್ಲಿ ನಲಿದಾಡುವರೆಂದು

---

೧. ಪ್ರಬಂಧ ಪದ ಸಂಖ್ಯೆ ೭೯ ನುಡಿ ೯

೨. ,, ೫೧ ನುಡಿ ಎಲ್ಲ ಪದ

೩. ,, ೧೬ ಎಲ್ಲ ಪದ

೪. ,, ,,

೫. ,, ೫೬ ಎಲ್ಲ ಪದ

ತೋರಿಸುವದಕ್ಕೆ ಸಾಮೀಪ್ಯತೆಯಿಂದ ತುಂಬಿದ ಈ ನುಡಿಯು ಎಷ್ಟು ನಾದ ಮಯವಾಗಿದೆ ಎಂಬುದನ್ನು ನೋಡಬಹುದು. "ಹರಿ ಹರಿ | ಹರಿಯೆಂದು | ಹರಣವಾ | ಜರಿವಾಗ |"೧ ಇಲ್ಲಿ ಅನುಪ್ರಾಸ ನೋಡಬೇಕು. ಇಲ್ಲಿ ದಾಸರ ಪ್ರಭುತ್ವ ಕಂಡುಬರುವದು. ಪ್ರಾಸಕ್ಕೆ ಸರಿಯಾಗಿ ಶಬ್ದ "ವಾಚಮ ರ್ಥೋನುಧಾವತಿ" ಎನ್ನುವಂತೆ ಶಬ್ದಕ್ಕೆ ಸರಿಯಾಗಿ ಅರ್ಥ, ಅರ್ಥಕ್ಕೆ ಸರಿ ಯಾಗಿ ನಾದವು ಹೊರಡುತ್ತದೆ. ಎಂಬುದನ್ನು ವಿಚಾರ ಮಾಡಿದರೆ ಕವಿ ಲಕ್ಷ್ಮೀಶನಂತೆ ಪ್ರಸನ್ನ ವೆಂಕಟರೂ ಕೂಡ ನಾದಪ್ರಿಯರು ಎಂಬ ಮಾತು ಸಿದ್ಧವಾಗುವದು.

(ಉ) ಶೈಲಿ—

"ನುಡಿದಂತೆ ನಡೆ" ಎಂದು ನಮ್ಮ ಪೂರ್ವಜರು ಹೇಳಿ, ಅದೇ ಪ್ರಕಾರ ತಾವು ಆಡಿ, ಮಾಡಿ, ತೋರಿಸಿ, ಈ ಗಾದೆಯ ಮಾತನ್ನು ಮುಂದಿನವರಿಗೆ ಕೈದೀವಟಿಗೆಯಂತೆ ಮಾಡಿಕೊಟ್ಟರು. ಅಂಥ ಮಾತು ಇನ್ನೂ ಪ್ರಚಾರದಲ್ಲಿದೆ. ಇದೇ ಮಾತನ್ನು ಶೈಲಿಯ ಬಗ್ಗೆ ಹೇಳಬಹುದು. ಏಕೆಂದರೆ ತನಗೆ ಸರಿ ದೋರಿದ ಮಾತುಗಳನ್ನೋ, ನುಡಿಯನ್ನೋ, ಸಮಾಜದ ಸ್ಥಿತಿಯನ್ನೋ, ನೈಜವಾದ ಅನುಭವವನ್ನೋ ತನ್ನ ಕೃತಿಗಳಲ್ಲಿ ಲೇಖಕನು ವ್ಯಕ್ತಗೊಳಿಸು ತ್ತಾನೆ. ಅಂದಬಳಿಕ ತನಗೆ ಸರಿದೋರಿದ ರೀತಿ ನಡತೆಗಳನ್ನು ತಾನು ಪಾಲಿ ಸುವದು ಉಚಿತವಾಗುವದು. ಇದರಿಂದ ಓದುಗರಿಗೆ ಆ ವ್ಯಕ್ತಿಯ ಬಗ್ಗೆ ಪೂರ್ಣ ಜ್ಞಾನವುಂಟಾಗುವದು. ಅಂದರೆ ವ್ಯಕ್ತಿಯ ಇಲ್ಲವೆ ಲೇಖಕನ ಬಗ್ಗೆ ಜ್ಞಾನವನ್ನು ಮಾಡಿಕೊಡುವದೇ ಶೈಲಿ. ಆದ್ದರಿಂದ ಶಾಸ್ತ್ರಜ್ಞರು ವ್ಯಕ್ತಿಯೇ ಶೈಲಿ 'Style is the man' ಎಂದು ಹೇಳುವದುಂಟು. ಈ ದೃಷ್ಟಿಯಿಂದ ಪ್ರಸನ್ನ ವೆಂಕಟರನ್ನು ನೋಡಿದರೆ ಕೆಳಗಿನ ವಿಷಯಗಳು ತಿಳಿದುಬರುವವು.

ಪ್ರಸನ್ನ ವೆಂಕಟದಾಸರು ಹರಿದಾಸರು. ಹರಿಭಕ್ತರು. ಭಕ್ತಿಯೇ ಅವರ ಜೀವನದ ಜೀವಾಳ. ಇದೇ ಅವರ ಕೃತಿಗಳಲ್ಲಿ ಕಂಡುಬರುವದು. ಭಕ್ತನು ಆರ್ತಭಾವದಿಂದ, ವ್ಯಾಕುಲಚಿತ್ತನಾಗಿ ಭಕ್ತರ ಒಡೆಯನಾದ ಹರಿ ಯನ್ನು ಬೇಡಿಕೊಳ್ಳುವಾಗ್ಗೆ— 'ಹರಿಯೆ ನನಗ್ಯಾರು ಗತಿಯೊ | ನೀನಲ್ಲದೆ

೧. ಪ್ರಬಂಧ ಪದ ಸಂಖ್ಯೆ ೩೩ ನುಡಿ ೧

ಇನ್ಯಾರು ಗತಿಯೊ ।"೧ "ಅಂತ್ಯ ಯಾತ್ರೆಯ ಅವಸರಕೊದಗು । ಕಾಂತ ಪ್ರಸನ್ನ ವೆಂಕಟಪ್ಪ ಎನ್ನಪ್ಪ ॥"೨ ಎಂಬ ನುಡಿಗಳು ಹೊರಹೊಮ್ಮುತ್ತವೆ. 'ನನಗ್ಯಾರು' 'ಇನ್ಯಾರು', 'ವೆಂಕಟಪ್ಪ, ಎನ್ನಪ್ಪ' ಎಂಬ ಪದಗಳನ್ನು ನೋಡಿದರೆ, ಮನೆಯಲ್ಲಿ ಮಾತನಾಡುವಂತೆ ದೇವರ ಮುಂದೆ ಕುಳಿತು, ದಾಸರು ತಮ್ಮ ಮನವನ್ನು ಬಿಚ್ಚಿ ಹೇಳಿಕೊಳ್ಳುತ್ತಿದ್ದರೆಂದು ಭಾಸವಾಗುತ್ತದೆ. ಇಲ್ಲಿ ಭಾಷೆಯ ಆಡಂಬರವಿಲ್ಲ, ಶಬ್ದಗಳಲ್ಲಿ ಕಾಠಿಣ್ಯವಿಲ್ಲ. ಕರ್ಕಶ ವರ್ಣಗಳಿಲ್ಲ. ದಾಸರ ಮೃದು ಮಧುರವಾದ ಹೃದಯಕ್ಕೆ ತಕ್ಕಂತೆ ಕಿರಿದಾದ ಮತ್ತು ನಯವಾದ ನುಡಿ, ನುಡಿದಂತೆ ನಡೆ, ಅಂತೆಯೇ ಅವರ ಕೃತಿಗಳ ತುಂಬ ಮಾತನಾಡುವ ಮೃದು ಭಾಷೆಯು ಕಂಡುಬರುತ್ತದೆ. ಮಾದರಿಗಾಗಿ ಕೆಲವನ್ನು ಇಲ್ಲಿ ಕೊಟ್ಟಿದೆ.

"ಎಂದಿಘರಿ ಭಟರು ಕೆಡರು । ಇದಕೆ ಮತ್ತೆಂದಿಗಿಲ್ಲೆಡರು ತೊಡರು ॥"೩ "ನಲ್ಲೆ ಬಾರೆ ಮುಂದಕವ್ವಾ"೪ ಎಂಬಲ್ಲಿ 'ನಲ್ಲೆ' ಎಂಬ ಶಬ್ದ ಪ್ರಯೋಗದಲ್ಲಿ ಎಷ್ಟು ನಯವಿದೆ ಎಂಬುದನ್ನು ನೋಡಬೇಕು. "ನಿನ್ನ ಮನದಾ ಮಾಥೇಳ್ವೆ॥"೫ 'ಮಾತು ಹೇಳ್ವೆ' ಎಂಬುದನ್ನು ಆಡುವ ಭಾಷೆಯಲ್ಲಿ ಹೇಗೆ ಉಪಯೋಗಿಸುತ್ತಿದ್ದರು ಎಂಬುದನ್ನು ತಿಳಿಯಬಹುದು. "ಮಕ್ಕಳಾ ಬಲವಾ ನೋಡ್ವೆ ॥"೬ ಸುತ್ತಲಿಹ ಗೋವರ ಬೇಡ್ವೆ । ಇಲ್ಲಿ 'ನೋಡ್ವೆ', 'ಬೇಡ್ವೆ' ಎಂಬುದನ್ನು ಸಹಜವಾಗಿ ಆಡಿದ್ದಾರೆ. "ಹೆಚ್ಚಿಹೆಚ್ಚಿ ಘುಚ್ಚು ಮಾಡಿದೆಲ್ಲಾ ।"೭ 'ಹೆಚ್ಚಿಗೆ ಹುಚ್ಚು ಎಂಬುದನ್ನು ಹೆಚ್ಚಿ ಘುಚ್ಚುಮಾಡಿದ್ದಾರೆ. "ಸಿಟ್ಟಿಗಿಟ್ಟಿಗೆ ಕೃಷ್ಣನಳಕನಮ್ಮಾ॥"೮

---

೧. ಪ್ರಬಂಧ ಪದಸಂಖ್ಯೆ ೧೬೩ ಪಲ್ಲ

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಪದ ೩೪ ಪುಟ ೩೬ ನುಡಿ ೩

೩. ಪ್ರಬಂಧ ಪದ ಸಂಖ್ಯೆ ೯೦ ಪಲ್ಲ

೪. ,, ,, ೧೪೯ ಭಾಗ ೧೦ ನುಡಿ ೩

೫. ,, ,, ೧೪೯ ಭಾಗ ೨೧ ನುಡಿ ೧

೬. ,, ,, ೧೩೩ ನುಡಿ ೩, ೪

೭. ,, ,, ೧೩೨ ನುಡಿ ೨

೮. ,, ,, ೧೪೪ ನುಡಿ ೨

"ಚಿಕ್ಕಗಿಕ್ಕನೆಂಬರೆ"[೧] "ಅಕ್ಕೊಗಿಕ್ಕೊ ಎಂಬುವ "[೨] "ಕೂಸುಗೀಸು ಇನ್ನೆಸ್ನ ಬಾರದವಗೆ"[೩] ಇವುಗಳಲ್ಲಿಯ "ಸಿಟ್ಟುಗಿಟ್ಟು" "ಚಿಕ್ಕಗಿಕ್ಕ" ಅಕ್ಕೊಗಿಕ್ಕೊ "ಕೂಸುಗೀಸು" ಎಂಬ ಪದಗಳನ್ನು ದೈನಂದಿನ ವ್ಯವಹಾರದಲ್ಲಿ ಹಳ್ಳಿಪಳ್ಳಿಯ ಜನರೂ ಪಟ್ಟಣಗಿಟ್ಟಣ ಜನರೂ ಉಪಯೋಗಿಸಿದ್ದು ದಾಸರು ಸಹಜವಾಗಿ ಅವುಗಳನ್ನು ತಮ್ಮ ಕೃತಿಗಳಲ್ಲಿ ಬಳಿಸಿದ್ದಾರೆ.

"ಕೈಯ ಕಡ್ತಿ ಕೊಟ್ಟೆ"[೪] ಎಂಬುದನ್ನು "ತಿಳುಹಿಸಿ ಮಾಡಬೇಡ" ಎಂಬ ಅರ್ಥದಲ್ಲಿ ಉಪಯೋಗಿಸಿದೆ. "ಹೆಗಲಮ್ಯಾಲೆ"[೫] "ಎಲ್ಲಿಗೆ ಹೋಗಿದ್ಯೊ"[೬] "ಮಾಡಿದೇಕೊ ಕಪನಾ "[೭] "ಕಸಕಡ್ಯಲ್ಲಾ"[೮] "ಚಡಪಡಿಸುವೆ ಮೂರುರಿಯಲಿ"[೯] "ಒಮ್ಯಾರೆ"[೧೦] "ಬಹಳ್ಗಸಿಗೆಟ್ಟಿತಲ್ಲ"[೧೧] ಇಂಥ ನುಡಿಗಳು ಇನ್ನೂ ಹೇರಳವಾಗಿ ದೊರೆಯುವವು. ಇಂಥ ಮಾತುಗಳನ್ನು ಆಡುವಾಗ್ಗೆ ಹೊಸ ಶಬ್ದಗಳು ಸಿದ್ಧವಾಗುತ್ತವೆ. ಈ ಪ್ರಕಾರ ಸಿದ್ಧವಾಗಿ ಭಾಷೆಯಲ್ಲಿ ಉಪಯೋಗಿಸಲ್ಪಡುತ್ತವೆ. ಈ ಶಬ್ದಜೋಡಣೆಯು ಶ್ರೀಪ್ರಸನ್ನ ವೆಂಕಟ ದಾಸರಲ್ಲಿ ಸಹಜವಾಗಿ ಬಂದಿವೆ. ಇದೊಂದು ದಾಸರಲ್ಲಿ ನಾವಿನ್ಯ. ಈ ಶಬ್ದ ಪ್ರಯೋಗವನ್ನು ನೋಡಬಹುದು.

(೧) ಬೆಣ್ಣೆಗಳ್ಳ ಗೋರಸ ಚೋರಾ—ಕೃಷ್ಣ ಈ ಅರ್ಥದಲ್ಲಿ ಉಪಯೋಗಿಸಿವೆ. (೨) ಸಾವಿರ ಹೆಸರ ದೇವ, ಸಾವಿರ ಅಭಿಧಾನದ ದೇವ,

---

೧. ಪ್ರಬಂಧ ಪದ ಸಂಖ್ಯೆ ೧೪೮ ನುಡಿ ೩
೨. ,, ,, ೧೪೮ ನುಡಿ ೩
೩. ,, ,, ೧೪೮ ನುಡಿ ೫
೪. ,, ,, ೧೩೯ ನುಡಿ ೧
೫. ,, ,, ೧೬೫ ನುಡಿ ೧
೬. ,, ,, ೧೪೭ ನುಡಿ ೧
೭. ,, ,, ೧೪೭ ನುಡಿ ೨
೮. ,, ,, ೧೦ ನುಡಿ ೫
೯. ,, ,, ೧೨೩ ನುಡಿ ೩
೧೦. ....................................
೧೧. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ, ಭಾಗ ೧ ಪುಟ ೮೯ ಪದ ೮೦ ನುಡಿ ೧

ನಾಗಾರಿ ಗಮನ, ಅಂಬುಜಜಸ್ಮರರಯ್ಯಾ—ವಿಷ್ಣು ಈ ಅರ್ಥದಲ್ಲಿ ದಾಸರು ಉಪಯೋಗಿಸಿದ್ದಾರೆ. (೩) ಮರಣ ಹೊಂದದ ಅರಮನೆ--ವೈಕುಂಠ. (೪) ಪವನ ಮತದವರು—ವೈಷ್ಣವರು. (೫) ಮೂರೇಳರಿಬಲ—ಇಪ್ಪತ್ತೊಂದು ಮತದವರು. ಇವರನ್ನು ಶ್ರೀಮಧ್ವಾಚಾರ್ಯರು ವಾದದಲ್ಲಿ ಸೋಲಿಸಿದರು. (೬) ಅಡವಿ ಪ್ರಾಣಿಗಳನಾಳುವವ—ಶ್ರೀರಾಮದೇವರು. (೭) ಹತ್ತು ಹೆಡಕಿನವ, ಆನನ ದಶದಾನವ—ರಾವಣ. (೮) ಆವಪಳ್ಳಿ—ಗೋಕುಲ. (೯) ಏಳೆರಡು ಜಗ—ಹದಿನಾಲ್ಕು ಲೋಕಗಳು. ಈ ಪ್ರಕಾರ ಕಂಡುಬರುವ ಶಬ್ದ ಜೋಡಣೆಯಿಂದ ಪ್ರಸನ್ನ ವೆಂಕಟರಲ್ಲಿದ್ದಂಥ ಗುಣಗಳು ವ್ಯಕ್ತವಾಗುತ್ತವೆ. ಒಂದು, ಅವರ ಕನ್ನಡ ಪಾಂಡಿತ್ಯ, ಇಲ್ಲವೆ ಹೊಸ ಶಬ್ದಗಳನ್ನು ಮಾಡುವ ಜಾಣ್ಮೆ, ಇನ್ನೊಂದು ದಾಸರ ಅಚ್ಚಗನ್ನಡದ ಮೇಲಿನ ಪ್ರೇಮ. ಹೀಗೆಂದ ಮಾತ್ರಕ್ಕೆ ಅವರಿಗೆ ಸಂಸ್ಕೃತ ಮತ್ತು ಇತರ ಭಾಷೆಗಳ ಜ್ಞಾನವಿದ್ದಿಲ್ಲವೆಂತಲ್ಲ. ಸಂಸ್ಕೃತದ ಬಗ್ಗೆ ಹೇಳಬೇಕಾದರೆ, ದಶಮಸ್ಕಂದ ಭಾಗವತ ಪೂರ್ವಾರ್ಧ ಕನ್ನಡದಲ್ಲಿ ನುಡಿಗಳನ್ನು ಬರೆದಿದ್ದಾರೆ. ಮೇಲಾಗಿ ಎಷ್ಟೋ ಸಂಸ್ಕೃತ ಶಬ್ದಗಳನ್ನು ಸಂಸ್ಕೃತ ರೂಪದಲ್ಲಿಯೇ ತಮ್ಮ ಕೀರ್ತನೆಗಳಲ್ಲಿ ಬಳಸಿದ್ದಾರೆ. "ಪಾಹಿ ಮಾಂ ಸೀತಾಪತೆ । ಪಾಹಿ ಮಾಂ ಕೃಷ್ಣ ಪಾಹಿ ।" ನವನೀತ ಚೋರ, ಶತಪತ್ರಾಯತ ನೇತ್ರಾ, ದಾರಾಪತ್ಯ, ಅಸ್ಮತ ಪಾಪ ಪಂಕಶೋಷಾ, ಪುನಃ ಪುನಃ ಕಮನೀಯತರ ಗಾತ್ರನಾ, ಅರುಣ ಕಮಲಾಯತ ನೇತ್ರ, ಪಾಥೇಯ, ಕ್ಲಿಷ್ಟ, ಸ್ಮಿತವದನ ಈ ಪ್ರಯೋಗಗಳನ್ನು ನೋಡಬಹುದು.

ಮರಾಠಿ ಭಾಷೆಯ ಜ್ಞಾನವಾದರೂ ಪ್ರಸನ್ನ ವೆಂಕಟರಿಗೆ ಸ್ವಲ್ಪಮಟ್ಟಿಗೆ ಇತ್ತೆಂಬುದು ಅವರು ತಮ್ಮ ಕೃತಿಗಳಲ್ಲಿ ಫುಕಟೆ, ಛಪ್ಪನ್ನದೇಶ, ಪಾಳತಿ ಮುಂತಾದ ಶಬ್ದಗಳನ್ನು ಬಳಸಿದ್ದರ ಮೇಲಿಂದ ಕಂಡುಬರುತ್ತದೆ. ಹಾಗೆಯೇ ತಮಿಳು ಭಾಷೆಯ ಜ್ಞಾನವೂ ದಾಸರಿಗೆ ಇರಬೇಕೆಂದು ಕಾಣುತ್ತವೆ. ಏಕೆಂದರೆ "ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ"[೧] ಯಲ್ಲಿ ದ್ರಾವಿಡ ಶಬ್ದಗಳು ಉಪಯೋಗಿಸಲ್ಪಟ್ಟಿವೆ. "ಬುಡುಕ್ಕಾನೆ ಪದಕಾನು ಚಿಂತಿಸ ಮಾಣಮ್ಮಾ[೨]"

೧. ಪ್ರಬಂಧ ಪದ ಸಂಖ್ಯೆ ೧೮೫ ೨. ಪ್ರಬಂಧ ಪದ ಸಂಖ್ಯೆ ೧೮೯ ೧೭ನೇ ಭಾಗ

ಮತ್ತು "ಕಾರ್ಯಂ ಕೈಗೂಡೆ ನಾಲು ಎನಕೆ। ಎನ ಸಂತೋಷ ಪಣ್ಣೆರಾಯಿ।........ಇವಂ ಪಾರ್ತಿಮಯ್ಯಂ ಪಣ್ಣಿಕೊ ಅಮ್ಮಾ।"[೧] ಮುಂತಾದ ಪದಗಳು ಕಂಡುಬರುತ್ತವೆ. ಕನ್ನಡಿಗರಿಗೆ ಇವುಗಳ ಅರ್ಥವಾಗದಿದ್ದರೂ ಅಡ್ಡಿಯಿಲ್ಲ. ಪ್ರಸನ್ನ ವೆಂಕಟರಿಗೆ ಮಾತ್ರ ತಮಿಳು ನುಡಿಗಳು ತಿಳಿಯುತ್ತಿದ್ದುವು. ಆದರೆ ಇಂಥ ಒಂದು ನುಡಿಯಿಂದ ಅವರ ಬರವಣಿಗೆಯಲ್ಲಿ ಸಮತೆ ಮತ್ತು ಸ್ಪಷ್ಟತೆಯಿಲ್ಲ ಎಂದು ತಿಳಿದುಕೊಳ್ಳುವ ಕಾರಣವಿಲ್ಲ.

ಕೊರವಂಜಿಯರು ದ್ರಾವಿಡರು. ಆದ್ದರಿಂದ ಅವರು ತಮ್ಮ ಭಾಷೆಯನ್ನಾಡುವದು ಸ್ವಾಭಾವಿಕ. ದಾಸರು ಅದೇ ಭಾಷೆಯನ್ನೇ ಆಡಿ ತೋರಿಸಿದ್ದಾರೆ. (ಟೀಪು ೨ ಪುಟ ೧೩೯, ೧೪೦-೧ನೋಡಬಹುದು.)

**ತದ್ಭವಗಳು :—**

ಇವುಗಳ ಬಗ್ಗೆ ಹೇಳಬೇಕಾದರೆ, ಅವು ಮಾತನಾಡುವ ಭಾಷೆಗೆ ಸರಿಹೋಗುತ್ತವೆ. 'ತುತಿಯ ಕೇಳ್ದ', 'ಸಪತ ಧಾತುಗಳ ಶರೀರಾ', 'ರತುನ ಮುತ್ತಿನಾ', 'ನಮ್ಮ ಪಕ್ಕನಾ', 'ನಿನಗ್ಯುಕತವಲ್ಲವೆ', 'ಪ್ರತುಮೆ', 'ವಿರಕತೆ' ಮುಂತಾದ ಶಬ್ದಗಳ ಪ್ರಯೋಗಗಳಲ್ಲಿ ಪ್ರಸನ್ನ ವೆಂಕಟರ ಚಾಣಾಕ್ಷತನವು ಕಂಡುಬರುವದು. ಏಕೆಂದರೆ ಹಳ್ಳಿಗರಿಗೂ ಕೂಡ ತಮ್ಮ ಕೀರ್ತನೆಗಳು ಸುಲಭವಾಗಬೇಕೆಂದೂ ಮತ್ತು ಅವರು ಸನ್ಮಾರ್ಗಕ್ಕೆ ಬರಬೇಕೆಂದೂ ಶ್ರೀಪ್ರಸನ್ನ ವೆಂಕಟದಾಸರ ಉದ್ದೇಶವಿತ್ತೆಂದು ಕಾಣುತ್ತದೆ.

**ಗಾದೆಯ ಮಾತು :—**

ಅರಸು ಮುಟ್ಟಿದ ನಾರಿ ಮಾನ್ಯಳು. ಪರಸು ಮುಟ್ಟಿದ ಲೋಹ ಚಿನ್ನ ಕುನ್ನಿ ಕಚ್ಚಿದರಾನೆ ಅಳುಕುವುದೆ.[೨]

ಬಡಿಯೊ ಬೆನ್ನಿಲಿ ಶ್ರೀನಿವಾಸಾ. ಅರಸ ಒಲಿದ ಮೇಲೆ ಪಿಸುಣರ ಭಯವುಂಟೆ. ಕರಿಗಂಜಿ ಹರಿ ಗುಹೆಯ ಪೋಗುವದುಂಟೆ. ಖಗಮಂತ್ರವಿರಲಹಿಯ ವಿಷತಂತುಂಟೆ. ಘನ್ನ ಪರಸು ಕೈಸೇರಿದಗೆ ದಾರಿದ್ರ್ಯ ಉಂಟೆ? ಇವೇ

---

೧. ಪ್ರಬಂಧಪದ ಸಂಖ್ಯೆ ೧೪೯ ಭಾಗ ೨೩

೨. " " ೧೩೧ ನುಡಿ ೧

ಮೊದಲಾದ "ಕಿರಿದರೊಳ್ ಪಿರಿದರ್ಥಮುಂ" ಕೊಡುವ ಪ್ರಸನ್ನ ವೆಂಕಟ ದಾಸರ ಈ ಮಾತುಗಳು ಹಿಂದೆ ನಮ್ಮ ಹಿರಿಯರು ಬರೆದಿಟ್ಟ ಗಾದೆಯ ಮಾತಿನ ಮಾಲಿಕೆಯಲ್ಲಿ ಪೋಣಿಸಲರ್ಹವಾಗಿವೆ.

ಒಟ್ಟಿನಲ್ಲಿ ಪ್ರಸನ್ನ ವೆಂಕಟ ದಾಸರ ಕೃತಿಗಳನ್ನು ನೋಡಿದರೆ, ಅವರಲ್ಲಿದ್ದ ನಯ, ವಿನಯ, ದಾರ್ಢ್ಯಗಳು ಅವರ ಕೃತಿಗಳಲ್ಲಿ ಹರಿಯುವ ಆರ್ತ, ವ್ಯಾಕುಲ ಭಾವಗಳಲ್ಲಿ ಬೆರೆತು, ಕೃತಿಗಳಲ್ಲಿಯ ಕರುಣ, ಶಾಂತ, ಶೃಂಗಾರ ರಸಗಳನ್ನು ಉಕ್ಕಿಸುತ್ತವೆ. ಈ ಪಾಕವನ್ನು ಒದಗಿಸಲಿಕ್ಕೆ ಅವಕ್ಕೆ ಅನುಗುಣವಾದ ಶಬ್ದಸೌಷ್ಟವ, ಸಮಯಕ್ಕೆ ತಕ್ಕ ಅಲಂಕಾರ, ರಸಗಳು ಮೇಳವಿರಿಕೊಂಡು ಬಂದಿವೆ. ಮೃದುಮಧುರ ಮಾತುಗಳು ಅದಕ್ಕೆ ಅಡಿಗಲ್ಲಾಗಿವೆ. ಇವುಗಳನ್ನು ಒಳ್ಳೇ ಜಾಣ್ಮೆಯಿಂದ ಹಾಸುಹೊಕ್ಕಾಗಿ ಪ್ರಸನ್ನ ವೆಂಕಟರು ಹೆಣೆದಿದ್ದಾರೆ. ಮತ್ತು ನುಡಿಯಂತೆ ನಡೆದು, ನಡೆವಂತೆ ನುಡಿದು, ಅವರು ತಮ್ಮ ವ್ಯಕ್ತಿತ್ವವನ್ನು ಪ್ರಕಟಗೊಳಿಸಿದ್ದಾರೆ.

———

## ಭಾಗ ೬.

# ಉಪದೇಶ

ದಾಸರ ಮತ್ತು ಶಿವಶರಣರ ಗುರಿಯು ತಾವಷ್ಟೇ ಮೋಕ್ಷ ಮತ್ತು ಚಿರಂತನ ಸುಖ ದೊರಕಿಸುವದಾಗಿರದೆ, ಇಡೀ ಸಮಾಜವನ್ನು ಸನ್ಮಾರ್ಗಕ್ಕೆ ಹಚ್ಚಿ, ಸುಖ, ಶಾಂತಿಸಾಗರದಲ್ಲಿ ಇಡುವದಾಗಿತ್ತು. ಧರ್ಮರಾಯನು ಪರಲೋಕಕ್ಕೆ ಹೋಗುವಾಗ್ಗೆ, ತನ್ನ ಬೆನ್ನನ್ನು ಹತ್ತಿದ ನಾಯಿಯನ್ನು ಕೂಡ ಸಂಗಡ ಕರೆದುಕೊಂಡು ಸ್ವರ್ಗಕ್ಕೆ ಹೋದನಂತೆ. ಅಂದಬಳಿಕ ನರರು ನರರನ್ನು ಕರೆದುಕೊಂಡು ಹೋಗುವದೇನಾಶ್ಚರ್ಯ! ಮೋಕ್ಷವು ಎಲ್ಲರಿಗೂ ಸುಲಭವಲ್ಲ. ಸನ್ಮಾರ್ಗಿಗಳು ಹಾಗೂ ಸದಾಚಾರಿಗಳೇ ಅದಕ್ಕೆ ಅರ್ಹರು. ಸದಾಚಾರದಲ್ಲಿ ಪರಿಣತಿ ಹೊಂದದೆ ಉಳಿದ ಬಹುಜನ ಸಮಾಜವು ಸದಾಚರಣೆಯಿಂದ ನಡೆಯಬೇಕು. 'ನಡೆನುಡಿಯೊಂದಾಗಿರಬೇಕು' ಎಂದು ಪ್ರಸನ್ನ ವೆಂಕಟದಾಸರು ಜನರಿಗೆ ಉಪದೇಶ ಮಾಡಿದರು. ಅವರ ಆ ಉಪದೇಶದ ಹಲವು ಅಂಗಗಳನ್ನು ಇಲ್ಲಿ ಕೊಡಲಾಗಿದೆ.

೧. **ನಾಮಸ್ಮರಣೆ :—**

"ಸತತ ಸ್ಮರಿಸಿರಿ ಮಧ್ವಯತಿ ಸಂತತಿ ಗುರುಗಳಾ ।
ಗತಿಯುಂಟು ಸಂತತ ಸಂಪತ್ತುಂಟು ।"[೧]

ದ್ವೈತ ಮತದ ಶಿರೋಮಣಿಗಳಾದ ಶ್ರೀಮಧ್ವಾಚಾರ್ಯರನ್ನು ನೆನದರೆ ಇಲ್ಲವೆ ಹರಿಭಕ್ತರನ್ನು ನೆನೆಸಿದರೆ ಮೋಕ್ಷ ದೊರೆಯುವದು, ಸಂತತಿ ಲಭಿಸುವದು ಮತ್ತು ಸಂಪತ್ತು ದೊರೆಯುವದು. "ನಾಗಶಯನನ ನಾಮ ಕೂಗುವುದೆ ಮಹಾಯೋಗ....ಧ್ಯಾನವೆ ಮಹಾಯೋಗ ॥"[೨] ಯೋಗದಲ್ಲಿ ನಾಮಸ್ಮರಣೆಗೆ ಪ್ರಸನ್ನ ವೆಂಕಟರು ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದಾರೆ. ಮೂಗಿನ

---

೧. ಪ್ರಬಂಧದ ಸಂಖ್ಯೆ ೭ ಪಲ್ಲವಿ
೨. " " ೬೩ ಪಲ್ಲ ಮತ್ತು ನುಡಿ ೧

ಉಸಿರನ್ನು ಕಟ್ಟಿ, ಕುಂಭಕ ರೇಚಕ ಮಾಡುವದಕ್ಕಿಂತಲೂ ಹೆಣ್ಣಿನ, ಹೊನ್ನಿನ ತ್ಯಾಗ ಮಾಡುವದೇ ಮಹಾಯೋಗ. ಭಗವದ್ಭಕ್ತರ ಸೇವೆ ಮಾಡುವದೇ ಮಹಾಯೋಗವೆಂದು ದಾಸರು ಹೇಳಿದ್ದಾರೆ. "ಎಂಟು ಕಾಡಾನೆ ಎಂಟು ಕಡೆಯಲಿ ನಿಂತಿವೆ."[೧] ಮನುಷ್ಯನಿಗೆ ಎಲ್ಲ ಕಡೆಗೂ ದುಃಖಗಳು ಒದಗುತ್ತಿರುವಾಗ, ಆತನು ಸಂಕಟದಲ್ಲಿ ಸಿಲುಕಿ ಗೋಳಾಡುತ್ತಾನೆ. ಆಗ ಸರಿಯಾದ ದಾರಿಯು ತೋರುವದಿಲ್ಲ. ಅಂಥ ಪ್ರಸಂಗದಿಂದ ಮುಕ್ತನಾಗಬೇಕಾದರೆ ದೇವರ ನಾಮಸ್ಮರಣೆಯೊಂದೇ ಮಾರ್ಗ.

## ೨. ಗುರುವಿನ ಅಗತ್ಯ :—

"ಗುರುಪಾದಪದ್ಮದಿ ಬಲಿದ ವಿಶ್ವಾಸಾ। ಗುರುಕೃಪೆ ಇಲ್ಲದ ಪುಣ್ಯ ನಿಶ್ಶೇಷಾ॥"[೨] ಗುರುಗಳಾದರೂ ಕೂಡ ಮೋಕ್ಷ ಸಾಧನೆಯ ಒಂದು ಅಂಗ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" ಎಂಬ ಪುರಂದರದಾಸರ ನುಡಿಯು ಈ ಮೇಲಿನ ಮಾತನ್ನೇ ಹೇಳುತ್ತದೆ. ಗುರುಗಳಿಗೆ ನಂಬಿಗೆ ಬೇಕು. ಅವರಿಂದಲೇ ಪುಣ್ಯ ಲಭಿಸುವದು, ಇಲ್ಲವಾದರೆ ಎಂಥ ಪುಣ್ಯ ಗಳಿಸಿದರೂ ನಿರರ್ಥಕ. "ಮೃಗಪಕ್ಷಿ ನಾಯಿ ನರಿ ಗಿಡ ಹುಲ್ಲು ಕಲ್ಲಂ। ಗಳ ಜನ್ಮನಂತು ಬಳಲೀದೆ ರಂಗ॥"[೩] ಮೃಗ ಪಕ್ಷಿ, ಮುಂತಾದ ಎಂಭತ್ತುನಾಲ್ಕು ಲಕ್ಷ ಯೋನಿಗಳಲ್ಲಿ ಜೀವವು ಅಲೆದಾಡಿ, ಕಷ್ಟಪಟ್ಟು ಕೊನೆಗೆ ಮನುಷ್ಯ ಜನ್ಮವನ್ನು ತಾಳುವುದು. ನರಜನ್ಮವೆಂದರೆ ಶ್ರೇಷ್ಠ ಜನ್ಮ. ಜೀವವು ಈ ನರಜನ್ಮದಲ್ಲಿ ತನ್ನ ಗುರಿಯನ್ನು ಸಾಧಿಸುವುದು. ಆದಕಾರಣವೇ "ಇದೇ ಜನ್ಮದಲ್ಲಿ ಹರಿನಾಮವನ್ನು ಉಚ್ಚರಿಸಿರಿ; ಗುರುಸೇವೆ ಮಾಡಿರಿ, ಅಂದರೆ ನಿಮ್ಮ ದುಷ್ಕೃತಿಗಳು ನಾಶವಾಗುವವು." ಎಂದು ದಾಸರು ಉಪದೇಶಿಸಿದ್ದಾರೆ. "ಹಲವು ದುಷ್ಕೃತ ನಿನ್ನ ನಾಮ ಘೋಷಣೆಯಲ್ಲಿ। ನಿಲಬಲ್ಲವೇ ಪ್ರಸನ್ವೆಂಕಟ ರಂಗಾ॥"[೪] ತಾನು ಮಾಡಿದ ನಾನಾ ಬಗೆಯ

---

೧. ಪ್ರಬಂಧಪದ ಸಂಖ್ಯೆ ೮೪ ನುಡಿ ೧
೨. " " ೮೬ ನುಡಿ ೪
೩. " " ೯೮ ನುಡಿ ೧
೪. " " ೯೮ ನುಡಿ ೩

ದುಷ್ಕೃತ್ಯಗಳನ್ನು ಹೋಗಲಾಡಿಸಬೇಕಾದರೆ ತಾನೇ ಪ್ರಯತ್ನ ಮಾಡಬೇಕಲ್ಲದೆ ಅನ್ಯರು ಮಾಡಿದರೆ ನಡೆಯದು. "ನನ್ನಯ ಸಂಚಿತಾರಬ್ಧಾಗಮವ ನೂಕುವರು ದಾರುಂಟೈ ರಂಗಾ||"[೧] ತಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ತಾನೇ ಹೊಣೆ. ಅದನ್ನು ತಾನೇ ಅನುಭವಿಸಿ ಹೋಗಲಾಡಿಸಬೇಕು. ಇದಕ್ಕೆ ಹರಿನಾಮವೇ ಗುರಿ, ಹರಿನಾಮವೆಂದರೆ– "ಮಹತಿಂಗೆ ಮಹತು ಹರಿನಾಮ। ಹಿಂದೊದಗಿದ ಘರಾಸಿ ಜೇಯಿಸಿ ಬಿಸುಟುವ ನಾಮಾ||"[೨] ಹಿಂದಿನ ಪಾಪಗಳನ್ನು ಕಳೆದು ಹರಿನಾಮವು ಮೋಕ್ಷ ಸಾಧನ ಮಾಡಿ ಕೊಡುವದು.

### ೩. ಸಜ್ಜನರಸೇವೆ :—

ಹಿಂದೆ ಹೇಳಿದ ಪ್ರಕಾರ ಸಜ್ಜನರ ಸೇವೆಯನ್ನು ಮಾಡಿ ಅವರ ಕೃಪೆ ದೊರಕಿಸಿದರೆ, ನಿಶ್ಚಿತವಾಗಿ ಮುಕ್ತಿ ಲಭಿಸುವದು. ಆದರೆ ಸಜ್ಜನರಿಗೆ ಎರಡು ಬಗೆದರೆ ಮಾತ್ರ ದೇವರು ದಯೆ ತೋರುವದಿಲ್ಲ. ತಪ್ಪಿದರೆ ದೇಹಾಂತ ಶಾಸನ ದೆರೆಯುವದು. "ಸಂತರಾ ದುಶಿತ್ತಾ। ದೇಹಾಂತ ಪ್ರಾಯಶ್ಚಿತ್ತಾ। ಸಂತರಾಧೀನನಾದರೆ ಹರಿ ತಾನು। ಸಂತೋಷದಿಂದ ಒಲಿವನು ತಾನು||"[೩] ಆದರೆ ಸಂತರ ಆಧೀನನಾದರೆ ಮಾತ್ರ ಹರಿಯು ಕೂಡ ಸಂತೋಷದಿಂದ ಪ್ರಸನ್ನನಾಗುವನು.

### ೪. ಸದಾಚಾರ :—

ಇನ್ನು ಕೇವಲ ಬಾಹ್ಯೋಪಚಾರಕ್ಕೆ ಸ್ಥಾನವಿಲ್ಲೆಂದು ಹೇಳುವ ಕಾಲದಲ್ಲಿ "ಮಜ್ಜಮಾಂಸ ರುಧಿರಾ ಮಲಮೂತ್ರಾ। ಮಜ್ಜನ ಮಾಡು ಬಸಿರೊಳಗೆ||"[೪] ಹೊಟ್ಟೆಯಲ್ಲಿ ಮಜ್ಜ, ಮಾಂಸ, ರುಧಿರ, ಮಲ, ಮೂತ್ರ ತುಂಬಿದ್ದರೂ ಸ್ನಾನಮಾಡಿ ದೇಹವನ್ನು ಸ್ವಚ್ಛ ಮಾಡುವುದು ಉಚಿತವಲ್ಲ, ಆದರೆ ಸದಾಚಾರ ಬೇಕು. ಎಂದು ದಾಸರು ಹೇಳಿದ್ದಾರೆ. "ಸಕಳಾಗಮ

---

೧. ಪ್ರಬಂಧಪದ ಸಂಖ್ಯೆ ೧೫೮ ನುಡಿ ೧
೨. ,, ,, ೧೫ ಪಲ್ಲ ಮತ್ತು ನುಡಿ
೩. ,, ,, ೮೮ ನುಡಿ ೧
೪. ,, ,, ೧೩೦ ನುಡಿ ೧

ವೇದೋಕ್ತಿ ವಿಚಾರಕೆ ಮುಖ್ಯವೆನಿಸೊದಾಚಾರ। ಆ ಸುಖವೆ ಧರ್ಮದ ಸಾರಾ ॥ "೧ ಸಕಲ ಆಗಮ, ವೇದಗಳಲ್ಲಿ ನೋಡಿದರೂ ಸದಾಚಾರದಲ್ಲಿಯೇ ನಿಜವಾದ ಸುಖವಿದೆ ಎಂದು ಕಂಡುಬರುವುದು. ಮುಂದೆ ಹೇಳಿದ ಸಂಗತಿಗಳು ಸದಾಚರಣೆ ಎನಿಸಿಕೊಳ್ಳುವವು. "ಬೆಳಗಿನ ಜಾವದಲ್ಲಿ ಎದ್ದು, ಹರಿಸ್ಮರಣೆಯನ್ನು ಮಾಡಬೇಕು. ಮಲಮೂತ್ರ ವಿಸರ್ಜನೆಯಾದ ಕೂಡಲೆ, ಮೃತ್ತಿಕೆಯಲ್ಲಿ ಮಲಿನವನ್ನು ತೊಳೆಯಬೇಕು. ಉದಯಕಾಲದಲ್ಲಿ ಎದ್ದು, ಸ್ನಾನವನ್ನು ತೀರಿಸಿ, ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು. ವನಜಾಕ್ಷನ ಪಾದಕ್ಕೆರಗಬೇಕು. ಕೃಷ್ಣನ ಕಥಾಮೃತವನ್ನು ಆಲಿಸಬೇಕು. ಮುನಿಗಳ, ಗುರುಹಿರಿಯರ ಪಾದಕ್ಕೆರಗಿ, ಅವರ ಆರಾಧನೆಯನ್ನು ಮಾಡಬೇಕು. ಸತ್ಸಂಗದಲ್ಲಿರಬೇಕು. ದುರ್ಜನರ ಸಂಗವನ್ನು ಮಾಡಕೂಡದು. ಧನ ವಂಚನೆ ಮಾಡಬಾರದು. ಯಾವ ಕಣ್ಣಿನಿಂದ ಕೃಷ್ಣನ ರೂಪವನ್ನು ನೋಡುತ್ತೀರೋ ಅದೇ ಕಣ್ಣಿನಿಂದ ಪರಸ್ತ್ರೀಯರನ್ನು ಪಾಪಬುದ್ಧಿಯಿಂದ ನೋಡಿದರೆ ಅದು ತಪ್ಪು, ಮಹತ್ಪಾಪ. ಅನ್ನವನ್ನು ಮೊದಲು ಶ್ರೀಹರಿಗೆ ಸಮರ್ಪಿಸಿಯಾದ ಮೇಲೆ ಅತಿಥಿ ಅಭ್ಯಾಗತರಿಗೆ ಉಣ್ಣಿಸಿದ ನಂತರ ಶೇಷಾನ್ನವನ್ನು ತಾನು ಉಣ್ಣಬೇಕು. ತುಲಸಿಯ ದಳವನ್ನು ಸೇವಿಸಬೇಕು. ದೇವರ ನಿರ್ಮಾಲ್ಯದ ಹೂವನ್ನು ಆಘ್ರಾಣಿಸಬೇಕು. ಹರಟೆಯನ್ನು ಕೊಚ್ಚಕೂಡದು. ವಿನಾಕಾರಣವಾದ ವಿವಾದಗಳಲ್ಲಿ ಸೇರಕೂಡದು. ಯಾವ ಮನೆಯಲ್ಲಿ ಹರಿಪೂಜೆ ಇಲ್ಲವೋ ಅಲ್ಲಿ ಅನ್ನ ಸೇವನೆ ಮಾಡುವದು ಹೇಯವಾದದ್ದು. ಶ್ರೀಕೃಷ್ಣನ ಗುಡಿಗೆ ಹೋಗದೆ, ಮನಬಂದಂತೆ ಆಲೆದಾಡುವದು ತಪ್ಪು. ಹರಿದಿನವನ್ನು ತಪ್ಪದೆ ಆಚರಿಸಬೇಕು." ಇವೆಲ್ಲವೂ ಸದಾಚಾರದ ತಿರುಳುಗಳು.[೨]

### ೫. ದೇಹವು ಅನಿತ್ಯ:—

"ಸ್ಥಿರವಲ್ಲವೀ ಕಾಯ ಸ್ಥಿರವಲ್ಲಾ ಹೀ। ಗರುಹಿದ್ದು ಹರಿಪಾದ ಮರೆವರೆ ಪ್ರಾಣಿ ॥ "೩ "ಸುಕಾಲಕೆ ಧರ್ಮ ಮಾಡುವದೆ ಲೇಸು।"೪ ಈ ದೇಹ

೧. ಪ್ರಬಂಧ ಪದಸಂಖ್ಯೆ ೮೫ ನುಡಿ ೨
೨. ಪ್ರಬಂಧ ಪದಸಂಖ್ಯೆ ೬೫ ಎಲ್ಲ ನುಡಿಗಳು
೩. ಪ್ರಬಂಧ ಪದಸಂಖ್ಯೆ ೭೭ ಪಲ್ಲ
೪. ಪ್ರಬಂಧ ಪದ ಸಂಖ್ಯೆ ೭೮ ಪಲ್ಲ

ಸ್ಥಿರವಲ್ಲ, ಹರಿ ಸೇವೆಯನ್ನು ಮರೆಯದೆ ಸಕಾಲಕ್ಕೆ ದಾನ-ಧರ್ಮ ಮಾಡಿ ಪುಣ್ಯ ಗಳಿಸಬೇಕೆಂದು ಶ್ರೀಪ್ರಸನ್ನ ವೆಂಕಟದಾಸರು ಹೇಳುತ್ತಾರೆ.

## ೬. ಸಂಸಾರ ಸುಖದ ಗುಟ್ಟು :—

" ಸತಿ ಇದ್ದರೆ ಸಮಹಿತದವಳಾಗಿ । ಸುತನಿದ್ದರೆ ನಿಜಮತದವನಾಗಿ । ಧನವಿದ್ದರೆ ಸಜ್ಜನಕೆ ವಿಭಾಗ । ಮನೆಯಿದ್ದರೆ ಮಧ್ಯಾನ್ಹಕ್ಕನ್ನತ್ಯಾಗ ॥ "[೧] ಸತಿಸುತರು ತನ್ನ ಮತದವರಾಗಿ ತನ್ನ ಅಂಕಿತದಲ್ಲಿರುವವರಾಗಿದ್ದು, ತಾನು ಗಳಿಸಿದ ಧನವು ಸಜ್ಜನರ ಸಲುವಾಗಿ ಉಪಯೋಗವಾಗುತ್ತಿದ್ದು, ಮಧ್ಯಾನ್ಹಕ್ಕೆ ಮನೆಗೆ ಬಂದ ಅತಿಥಿಗಳಿಗೆ ಅನ್ನವಿಕ್ಕುವದರ ಸಲುವಾಗಿಯೂ ಹರಿಧ್ಯಾನಕ್ಕೆ ಅನುಕೂಲವಾಗಿಯೂ ಇರುವಂಥ ಮನೆ ಇದ್ದದ್ದಾದರೆ ಮಾತ್ರ ಈ ಸಂಸಾರದಲ್ಲಿ ಸುಖವು ಲಭಿಸುವದು ಎಂದು ದಾಸರು ಹೇಳಿದ್ದಾರೆ.

## ೭. ಸಾಧುಸಂಗ :—

ಸಾಧುಸಂತರ ಸಂಗವನ್ನು ಮಾಡಬೇಕು. ಆದರಿಂದ ಲಾಭವಾಗುವದು. ಸತ್ಸಂಗದಿಂದ "ಹರಿಯೇ ಸರ್ವೋತ್ತಮನು" ಎಂಬ ಜ್ಞಾನವು ದೊರೆಯುವದು. ಮುಂದೆ ಅದೇ ಮೋಕ್ಷಕ್ಕೆ ದಾರಿ ಮಾಡಿಕೊಡುವದು. "ಸತ್ಸಂಗ ವಿಡಿದು ಸರ್ವೋತ್ತಮನೆ ಗತಿಯೆಂನು ॥ ನೆಚ್ಚಿ ಅರ್ಚಿಸು ಗಾಢ ಮನುಜಾ ॥"[೨] "ಸಂಗವಾಗಲಿ, ಸಾಧು ಸಂಗವಾಗಲಿ । ಸಂಗದಿಂದ ಲಿಂಗದೇಹ ಭಂಗವಾಗಲಿ ॥"[೩] ಸಮಾಜದಲ್ಲಿ ಎಲ್ಲರೂ ಸಜ್ಜನರು ಇರುವದು ಸಾಧ್ಯವಿಲ್ಲ. ಅದರಲ್ಲಿ ಕೆಲವರು ಡಾಂಭಿಕತನದಿಂದ ನಡೆದು, ತಾವು ಸಜ್ಜನರು, ಸಮಾಜದಲ್ಲಿ ಶ್ರೇಷ್ಠರು ಎಂಪೆನಿಸಿಕೊಳ್ಳುವವರಿಗೆ 'ಇಂಥ ನಡತೆ ಸರಿಯಲ್ಲ, ಇದರಿಂದ ಲಾಭವಿಲ್ಲ, ಇದು ಮೋಕ್ಷಕ್ಕೆ ಸಾಧನದ ಮಾರ್ಗವಲ್ಲ.' ಎಂದು ದಾಸರು ಬಹು ಮಾರ್ಮಿಕವಾಗಿ ಹೇಳಿದ್ದಾರೆ. ಈಬಗ್ಗೆ ಕೆಳಗಿನ ಪದವನ್ನು ನೋಡಬಹುದು.

---

೧. ಪ್ರಬಂಧ ಪದ ಸಂಖ್ಯೆ ೮೧ ನುಡಿ ೧, ೨

೨. ಕೌಜಲಗಿ ಬಂಡೇರಾಯರು: ಪ್ರ. ವೆಂ. ಕೀ. ಭಾಗ ೧ ಪುಟ ೫೧ ಪದ ೪೮ ಪಲ್ಲ

೩. ಪ್ರಬಂಧ ಪದ ಸಂಖ್ಯೆ ೯೪ ಪಲ್ಲ

"ಹೆಣಗಿದರಾಗದು ಒಣತರ್ಕದಲಿ । ದಣಿವರೆ ಕೂಡಮು ಭಕುತಿ ॥
ವನಜಾಕ್ಷನ ಕೃಪೆ ಮನ ಸಾಕ್ಷಾತ್ತಾದರೆ ತನ್ನಿಂತಾನಾಗುವದೇ
ಮುಕುತಿ ॥
ಭಿಕ್ಷುಕ ಧ್ಯಾನದ ಲಕ್ಷಿಯಲಿ । ಪದು । ಮಾಕ್ಷನ ಪೊಗಳಿದರೇನು ॥
ಕುಕ್ಷಿಯ ಲಾಭವು ಅಕ್ಷಯ ತೋಷದ । ಮೋಕ್ಷೋಪಾಯ
ವಿದೇನು ॥ "೧

ಕೇವಲ ತರ್ಕದಲ್ಲಿ ಕಾಲ ಕಳೆಯದೆ "ವನಜಾಕ್ಷನ ಕೃಪೆ" ಗಳಿಸಿದರೆ, ತಾನಾಗಿಯೇ ಮುಕ್ತಿಯು ದೊರೆಯುವದು ಎಂದು ದಾಸರು ಹೇಳಿ, ಭಿಕ್ಷುಕನ ರೀತಿಯಲ್ಲಿ ಧ್ಯಾನ ಮಾಡಿದರೆ, ಮೋಕ್ಷವು ಅಸಾಧ್ಯವೆಂದು ಮನದಟ್ಟಾಗುವಂತೆ ಹೇಳಿದ್ದಾರೆ.

**೮. ವ್ರತಪಾಲನೆ :—**

ಎಲ್ಲರೂ ವ್ರತ, ನಿಯಮ, ದಾನ, ಧರ್ಮ ಮಾಡಬೇಕೆಂದು ಪ್ರಸನ್ನ ವೆಂಕಟರು ಹೇಳಿದ್ದಾರೆ. ವ್ರತದಲ್ಲಿ ಏಕಾದಶಿ ವ್ರತಕ್ಕೆ ಅವರು ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ಏಕೆಂದರೆ ಅದು "ದುರಿತ ದುಷ್ಕೃತ ಸರ್ವಕೆ ವಜ್ರವಾದಾ" ಮತ್ತು "ಸದ್ವ್ರತಕೆಲ್ಲ ಶಿರೋರತ್ನವಾದಾ" ಇಷ್ಟೇ ಅಲ್ಲ "ಸಕಲ ತಪದೊಳೆಲ್ಲಾ ಮೇಲೆನಿಸಿಕೊಂಬಾ । ಮಹಮುಖ ಕೋಟಿಗಧಿಕ ಫಲಾ" "ಸ್ತಂಭದಂಥಾ ಮುಕುತಿ ಸೋಪಾನಾ" ತ್ವಕ್, ಅಸ್ಥಿ, ಮಜ್ಜ, ರುಧಿರ, ಮಾಂಸ ಮುಂತಾದ ಸಪ್ತ ಧಾತುಗಳಿಂದ ಕೂಡಿದ ಶರೀರವನ್ನು ಈ ಏಕಾದಶಿಯ ನಿರಾಹಾರವು ಪಾವನ ಮಾಡುವದು.

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಯುವಕರು, ವೃದ್ಧರು, ನರರು, ನಾರಿಯರು, ಕಿರಾತರು, ಪುಲ್ಕಸರು, ಆಂಧ್ರರು, ಹೂಣರು ಇನ್ನೂ ಯಾರಾದರೂ ಸರಿ, ಈ ವ್ರತವನ್ನು ಆಚರಿಸಿದರೆ, ಅವರ ಪಾಪವೆಲ್ಲ ತೊಳೆದು ಹೋಗಿ ಪವಿತ್ರರಾಗುವರು. ಈ ವ್ರತವನ್ನು ಇಂಥಿಂಥ ಜಾತಿಯವರೇ ಇಂಥಿಂಥ ಮತದವರೇ ಆಚರಿಸಬೇಕೆಂಬ ಬಂಧನವಿರದೆ ಸರ್ವರೂ ಆಚರಿಸಲು ಮುಕ್ತ ದ್ವಾರವಿದೆ. ದ್ವಿಜ, ಗೋ, ನೃಪ ಇವರನ್ನು ವಧೆ ಮಾಡಿದ ಪಾಪವೂ "ನಿಜ

---

೧. ಪ್ರಬಂಧ ಪದ ಸಂಖ್ಯೆ ೨೦೦ ಪಲ್ಲವಿ

ಗುರು ಸತಿಯರೋಳ್ ಕೂಡಿದ ಪಾಪವೂ" ಈ ವ್ರತ ಮಾಡುವದರಿಂದ ಪರಿಹಾರವಾಗುವದು. ಹರಿದಿನಾಚರಣೆಯ ಮಹಾತ್ಮ್ಯವು ಈ ಪ್ರಕಾರವಿದೆಯೆಂದು ಶ್ರೀಪ್ರಸನ್ನ ವೆಂಕಟರು ಹೇಳಿದ್ದಾರೆ. ಈ ವ್ರತವನ್ನು ಆಚರಿಸುವ ಬಗೆಯೆಂದರೆ:— "ಯಾಮಿನಿಯಲಿ ಅನಿಮಿಷದ ಜಾಗರವು । ಶ್ರೀಮದ್ಭಾಗವತ ಶ್ರವಣ ಗೀತಾ ಪಠಣ । ಪ್ರೇಮವಾರಿಧಿ ಮುಳುಗಿ ಸಂಕೀರ್ತನೆಯು । ಧಾಮತ್ರಯದ ಸುಖಕಿದೇ ಕಾರಣವು ॥"೧ ಎಂದು ಹೇಳಿ, ಈ ಪ್ರಕಾರ ವ್ರತವನ್ನಾಚರಿಸಿದರೆ "ಅಜಸ್ರ ಕಾಶೀ ಪ್ರಯಾಗದ ಫಲವೂ, ಸಹಸ್ರ ಕೋಟಿ ಭೂಪ್ರದಕ್ಷಿಣೆಯ ಫಲವೂ" ಲಭಿಸುವದೆಂದು ದಾಸರು ಉಪದೇಶಿಸಿದ್ದಾರೆ.

ಇನ್ನು ಇದರ ಬಗ್ಗೆ ಇಷ್ಟೆಲ್ಲ ಮಹಾತ್ಮ್ಯೆಯನ್ನು ಎಲ್ಲಿ ಹೇಳಿದೆ ಎಂಬ ಬಗ್ಗೆ ದಾಸರು "ಶ್ರುತಿಪಂಚರಾತ್ರಾಗಮವು ಸಾರುತಿವೆ । ಯತಿ ಮಧ್ವರಾಯರ ಶ್ರುತಿ ಪೇಳುತಿವೆ ॥"೨ ಎಂದು ಆಧಾರಗಳನ್ನಿತ್ತಿದ್ದಾರೆ. ತುಳಸಿ ಪೂಜೆಯ ಬಗ್ಗೆ ದಾಸರು ಹೀಗೆ ಹೇಳುತ್ತಾರೆ. ಹರಿದಿನವನ್ನು ಆಚರಿಸುವುದು ಎಷ್ಟು ಮಹತ್ವದ್ದೋ ಅಷ್ಟೇ ಮಹತ್ವವು ತುಳಸಿ ಪೂಜೆಗೆ ಪ್ರಾಪ್ತವಾಗಿದೆ. ಕಾರಣವೇನೆಂದರೆ— "ಶ್ರೀನಾಥ ನಾರಾಯಣನ ಅರ್ಚನೆಗೆ ಸರ್ವದಾ ಪ್ರೀತಿಕರಳಾಗಿ ರಾಜಿಪಳು."೩ ಒಂದು ತುಳಸಿಯ ದಳವನ್ನು ತಂದು "ಶ್ರೀಮಾಧವನ ತಾಮರಸ ಚರಣಗಳಿಗರ್ಪಿಸಿದರೆ । ತಾ ಮುನ್ನ ಮಾಡಿದ ಅಘ ನಾಶವಾಗುವದು.॥"೩ "ತುಳಸಿಯಾ ನೆಳಲಲ್ಲಿ ಅಂಕುರಗಳಿದ್ದಲ್ಲಿ" ಪಿತೃಗಳಿಗೆ ಅನ್ನವನ್ನು ಕೊಟ್ಟರೆ, ಅಕ್ಷಯ ಫಲವು ದೊರಕುವದು. ತುಳಸಿಯ ತಳದ ಮೃತ್ತಿಕೆಯನ್ನು ಹಣೆಯ ಮೇಲಿಟ್ಟರೆ "ಕೋಟಿ ತೀರ್ಥಗಳ ಮುಳುಗಿದ ಫಲ ಸಿದ್ಧವು." ಮನೆಯಲ್ಲಿ ತುಳಸಿಯ ಪತ್ರವಿರಲಿ, ಮೃತ್ತಿಕೆಯಿರಲಿ, ಇಲ್ಲವೆ ಕಾಷ್ಠವಿರಲಿ, ಅಲ್ಲಿ ಕಲಿ ಬಾಧೆಯಿಲ್ಲ. "ಕಲಿ ಮುಟ್ಟಲಂಜಿ ತೊಲಗುವನು." ತುಳಸಿಯ ಮಣಿಗಳನ್ನು ಕೊರಳಲ್ಲಿ ಧರಿಸಿದರೆ "ಕಲುಷ ಸಂಹಾರವು." ಆದ್ದರಿಂದ ಪ್ರಸನ್ನ ವೆಂಕಟರು ನಿತ್ಯವೂ ತುಳಸಿಯನ್ನು ಪೂಜಿಸಿ, ಅದರ ಉಪಯೋಗವನ್ನು ಮಾಡಿಕೊಳ್ಳ

---

೧. ಪ್ರಬಂಧಪದ ಸಂಖ್ಯೆ ೭೯ ನುಡಿ ೫

೨. ಪ್ರಬಂಧ ಪದ ಸಂಖ್ಯೆ ೭೯ ನುಡಿ ೯

೩. ಪ್ರಬಂಧ ಪದ ಸಂಖ್ಯೆ ೭೪

ಬೇಕೆಂದು ಬೋಧ ಮಾಡುತ್ತಾರೆ.

ಇವರ ಉಪದೇಶದಲ್ಲಿ ಇನ್ನೊಂದುವಿಷಯುವು ಸ್ಪಷ್ಟವಾಗಿ ತೋರುವದು, ಅದಾವುದೆಂದರೆ ಹರಿ ನಾಮಸ್ಮರಣೆಯು. ನಾಮ ಸ್ಮರಣೆಯಿಂದ ಎಷ್ಟೋ ಜನರು, ದೇವತೆಗಳು, ಪ್ರಾಣಿಗಳು ಸಂಕಟದಿಂದ ಪಾರಾಗಿದ್ದಾರೆ. ಆದ್ದರಿಂದ "ಹರಿ ಹರಿ ಎನ್ನಿರಿ" ಎಂದು ದಾಸರು ಕೂಗಿಕೊಂಡಿದ್ದಾರೆ. ಅವರ ಈ ಹರಿ ನಾಮ ಸ್ಮರಣೆಯ ಮಹತಿಯನ್ನು ಕೆಳಗಿನ ಪದದಲ್ಲಿ ನೋಡಿರಿ.

"ಹರಿಯೆನ್ನ ಬಾರದೆ ಜಿಹ್ವೆ ವಾರಂ ವಾರಂ ||ಪಲ್ಲ||
ಪರಗತಿ ಮಾರ್ಗವು ದುರಿತವನಾಗ್ನಿಯು | ಪರಿಪರಿ ಭವರೋಗ
ಕೌಷಧವಾಗಿಹ ||ಅ. ಪ.||
ಉರಿವ ಕಾಳಕೂಟ ಕಂಠದಿ ದಹಿಸಲು | ಹರಿನಾಮ ಹರನ ಹಲ್ಲಣ
ಕಾಯ್ದಿತು |
ಕರಿ ಉರಗದ ವಿಷ ಗಿರಿ ಶಸ್ತ್ರ ಭಯದಿಂದ | ಹರಿನಾಮ ಬಾಲಕನ
ಕಾಯ್ದಿತು |
ಶರಧಿಲಿ ನೆಕ್ಕರ ಚರಣವ ಬಿಗಿ ಕಟ್ಟಿ | ಹರಿನಾಮ ಕರಿಯು
ಕಾಯ್ದಿತು |
ಸುರಋಷಿ ಮುಖದಿಂದ ಬರಲಾಗಿ | ಹರಿನಾಮ ನಿರಯ ನಿವಾಸರ
ಕಾಯ್ದಿತು ||"೧

ನಿತ್ಯವೂ ಹರಿನಾಮ ಸ್ಮರಣೆ ಮಾಡಿ ಪ್ರಸನ್ನ ವೆಂಕಟದಾಸರ ಉಪದೇಶದಂತೆ ತ್ರಿಕರಣಪೂರ್ವಕವಾಗಿ ನಡೆದರೆ "ಇಹದಲ್ಲಿ ಸೌಖ್ಯವುಂಟು, ಪರದಲ್ಲಿ ಮುಕ್ತಿಯುಂಟು" ಎಂದು ದಾಸರು ಉಪದೇಶಿಸಿದ್ದಾರೆ.

---

೧. ಪ್ರಬಂಧ ಪದ ಸಂಖ್ಯೆ ೧೯೯ ಪಲ್ಲ ಮತ್ತು ನುಡಿ ೧

ಭಾಗ ೭.

## ರಾಜಕೀಯ ಪರಿಸ್ಥಿತಿ.

**ಹಿನ್ನೆಲೆ:—** ಶ್ರೀಪ್ರಸನ್ನ ವೆಂಕಟದಾಸರು ಮುಖ್ಯವಾಗಿ ದಕ್ಷಿಣ ಹಿಂದುಸ್ಥಾನದಲ್ಲಿ, ಅದರಲ್ಲಿಯೂ ವಿಶೇಷವಾಗಿ ಕರ್ನಾಟಕದಲ್ಲಿ, ಅಲೆದಾಡಿದರೆಂದು ಅವರ ಚರಿತ್ರೆಯಿಂದ ತಿಳಿದು ಬರುತ್ತದೆ. ಈ ದಾಸರ ಕಾಲದಲ್ಲಿ ದಕ್ಷಿಣ ಹಿಂದುಸ್ಥಾನವು ಯಾವ ಪರಿಸ್ಥಿತಿಯಲ್ಲಿದ್ದಿತೆಂಬುದನ್ನು ಕೆಳಗಿನ ಐತಿಹಾಸಿಕ ಸಂಗತಿಗಳ ಮೇಲಿಂದ ತಿಳಿಯಬಹುದಾಗಿದೆ.

**೧. ವಿಜಯನಗರ ಸಾಮ್ರಾಜ್ಯ:—** ವಿಜಯನಗರದ ಸಾಮ್ರಾಜ್ಯವನ್ನು ಆಳಿದ ಅರವೀಡು ಮನೆತನದ ಆರ್ವಡಿ ಶ್ರೀರಂಗರಾಯನು ಇ. ಸ. ೧೬೮೧ ರಲ್ಲಿ ಮಡಿದನು. ಇಲ್ಲಿಗೆ ಈ ಸಾಮ್ರಾಜ್ಯವು ಮುಗಿಯಿತೆನ್ನಬಹುದು. ಮುಂದೆ ಈತನ ತರುವಾಯ ಇವನ ಅಣ್ಣನ ಮಗನಾದ ಕೋದಂಡರಾಮನು ಪೆನಗೊಂಡದಲ್ಲಿದ್ದುಕೊಂಡು ಇ ಸ. ೧೬೮೧ ರಿಂದ ೧೭೦೪ರ ವರೆಗೆ ಆಳಿದನು. ಪೆನಗೊಂಡವನ್ನುಳಿದು ದಕ್ಷಿಣ ಭಾಗವನ್ನು ಮೊಗಲರು, ಮರಾಟರು ಮತ್ತು ಮೈಸೂರವರು ಆಕ್ರಮಿಸಿದರು.೧ ವಿಜಾಪುರ, ಗೋವಳಕೊಂಡದ ರಾಜ್ಯಗಳು ಮೊಗಲರ ತುತ್ತಾದವು (ಇ. ಸ. ೧೬೮೬ ಮತ್ತು ೧೬೮೮.)೨ ಕೋದಂಡರಾಮನ ತರುವಾಯ ಆತನ ಮಗನಾದ ಪೆದ್ದವೆಂಕಟನು (ಆರ್ವಡಿ ವೆಂಕಟನು) ಇ. ಸ. ೧೭೦೪ ರಿಂದ ಇ. ಸ. ೧೭೧೭ರ ವರೆಗೆ ಆಳಿದನು. ಈತನ ಕಾಲಕ್ಕೆ ಮರಾಟರ ದಾಳಿಯಾಯಿತು. ಈತನ ತರುವಾಯ ಈತನ ಚಿಕ್ಕಪ್ಪನಾದ ಏಳ್ವಡಿ ಶ್ರೀರಂಗನು ಅರಸನಾದನು. (ಇ. ಸ. ೧೭೧೭ ರಿಂದ ೧೭೫೯) ಈತನ ಆಳಿಕೆಯಲ್ಲಿ ಹಿರಿಯ ಬಾಜೀರಾಯನು ಎರಡು ಸಲ ಇವನ ಮೇಲೆ ದಂಡೆತ್ತಿ ಬಂದನು.೩

---

೧ ಪಾಂ. ಭಿ. ದೇಸಾಯಿ: ವಿ. ಸಾ. ಪುಟ ೨೭೯—೨೮೦

೨. Bombay Gazetter Vol. 1 Part II P. P. 655

೩. ಪಾಂ. ಭಿ. ದೇಸಾಯಿ: ವಿ. ಸಾ. ಪುಟ ೨೭೯—೮೦

೨. **ಆನೆಗುಂದಿಯ ಅರಸರು:**— ಅರವೀಡು ಮನೆತನದ ಕೋ-ದಂಡರಾಮನ ಮಗ ಇಮ್ಮಡಿ ಕೋದಂಡರಾಮನು (ಆನ್ವಡಿ ರಾಮರಾಜನು) ಆನೇಗುಂದಿಯಲ್ಲಿ ಇ. ಸ. ೧೭೩೩ ರಿಂದ ೧೭೫೫ರ ವರೆಗೆ ಆಳಿದನು. ಇಲ್ಲಿ ಮರಾಟರು ಬಂದಾಗ್ಗೆ ಆತನು ಅವರಿಗೆ ಕಪ್ಪಕಾಣಿಕೆ ಕೊಟ್ಟಂತೆ ಕಾಣುತ್ತದೆ.[೧]

೩. **ಮದುರೆಯ ನಾಯಕರು:**— ಚೊಕ್ಕನಾಥ ನಾಯಕನ ಆಳಿಕೆಯು (ಇ. ಸ. ೧೬೫೯ ರಿಂದ ೧೬೮೨) ಸುಖಮಯವಾಗಿರಲಿಲ್ಲ. ಮಹಮ್ಮದೀಯರು ಆತನ ರಾಜ್ಯವನ್ನು ಹಾಳು ಮಾಡಿದರು. ಆತನ ಅಂಕಿತರಾದ ನಾಯಕರು ಅವನಿಗೆ ದ್ರೋಹಿಗಳಾದರು. ಆತನ ಪ್ರಜೆಗಳು ದೊಂಬಿಯನ್ನೆಬ್ಬಿಸಿದರು. ಇಂತು ಜರ್ಜರಿತವಾದ ರಾಜ್ಯವನ್ನು ಚೊಕ್ಕನಾಥನ ಮಗನಾದ ಮುತ್ತು ವೀರಪ್ಪನು ಆಳಿದನು (ಇ. ಸ. ೧೬೮೨ ರಿಂದ ೧೬೮೯). ತರುವಾಯ ಮಂಗಮ್ಮ ಇವಳು ರಾಜ್ಯದ ಪ್ರತಿನಿಧಿಯಾದಳು (೧೬೮೯ ರಿಂದ ೧೭೦೬). ಇವಳು ಮೊಗಲರ ರಾಜ್ಯಕ್ಕೆ ಅಂಕಿತಳಾಗಿದ್ದಳು. ಮುಂದೆ ರಾಜ್ಯದ ಸೂತ್ರಗಳು ಮುತ್ತು ವೀರಪ್ಪನ ಮಗನಾದ ವಿಜಯರಂಗನ ಕೈಯಲ್ಲಿ ಹೋದವು. (೧೭೦೬ ರಿಂದ ೧೭೩೨). ಆಮೇಲೆ ಈತನ ಹೆಂಡತಿಯಾದ ಮೀನಾಕ್ಷಿಯು ಅಧಿಕಾರವನ್ನು ವಹಿಸಿದಳು. ಈಕೆಯು ವಿರುದ್ಧವಾಗಿ ರಾಜ್ಯದಲ್ಲಿ ಬಣಗಳಾದವು. ಅಂತಃಕಲಹವು ಹೆಚ್ಚಿತು. ಈ ಪರಿಸ್ಥಿತಿಯನ್ನು ಅವಲೋಕಿಸಿ, ಅರ್ಕಾಟದ ನವಾಬನ ಅಳಿಯನಾದ ಚಾಂದಸಾಹೇಬನು ಮದುರೆಯ ರಾಜ್ಯವನ್ನು ಅಪಹರಿಸಿದನು (ಇ. ಸ. ೧೭೩೬).[೨]

೪. **ಕೆಳದಿಯ ಅರಸರು:**— ಅರ್ವಡಿ ಶ್ರೀರಂಗರಾಯನ ವಿಪತ್ಕಾಲದಲ್ಲಿ ಸಹಾಯವನ್ನು ನೀಡಿದ ಶಿವಪ್ಪನಾಯಕನು ಇ. ಸ. ೧೬೬೦ ರಲ್ಲಿ ಮಡಿದನು. ಮೈಸೂರವರೊಡನೆ ಮೇಲಿಂದ ಮೇಲೆ ಕದನಗಳು ಉಪಸ್ಥಿತವಾದವು. ಆದರಿಂದ ರಾಜ್ಯವು ಬಲಗುಂದಿತು. ವಿಜಾಪುರದವರು, ಮರಾಟರು, ಆಗಾಗ್ಗೆ ದಾಳಿಯನ್ನು ಮಾಡಿದರು. ಮುಂದೆ ಸೋಮಶೇಖರನು ಇ. ಸ.

---

೧. ಪಾಂ, ಭಿ. ದೇಸಾಯಿ: ವಿ. ಸಾ. ಪುಟ ೨೮೪

೨. ,, ,, ಪುಟ ೨೮೦—೨೮೧

೧೬೬೪ರಲ್ಲಿ ಪಟ್ಟವೇರಿದನು. ಅಂತಃಕಲಹಗಳ ಗಲಭೆಯಲ್ಲಿ ಈತನ ಕೊಲೆಯಾಯಿತು (೧೬೭೧). ಇವನ ಹೆಂಡತಿಯಾದ ಚನ್ನಮ್ಮಾಜಿಯು ಬಾಹುಬಲದಿಂದ ರಾಜ್ಯವಾಳಿದಳು (೧೭೭೧ ರಿಂದ ೧೬೯೭). ಮೊಗಲರ ಆಕ್ರಮಣದಿಂದ ದೇಶಭ್ರಷ್ಟನಾದ ಶಿವಾಜಿಯ ಮಗನಾದ ರಾಜಾರಾಮನು ಇಲ್ಲಿ ಆಶ್ರಯ ಹೊಂದಿದನು. ಚೆನ್ನಮ್ಮಾಜಿಯ ತರುವಾಯ ಸಂಕಟಗಳು ಹೆಚ್ಚಿದವು. ಬಸಪ್ಪನಾಯಕ (೧೬೯೭-೧೭೧೪) ಇಮ್ಮಡಿ ಸೋಮಶೇಖರ (೧೭೧೪-೧೭೩೯) ಇಮ್ಮಡಿ ಬಸಪ್ಪನಾಯಕ (೧೭೩೯ ರಿಂದ ೧೭೫೪) ಇವರು ರಾಜ್ಯವಾಳಿದರು. ಆದರೆ ಆಡಳಿತದ ದುರ್ಬಲತೆ, ಅಂತಃಕಲಹ, ಆಸ್ಮರ ದಾಳಿ ಮುಂತಾದವುಗಳು ರಾಜ್ಯವನ್ನು ನಿಸ್ಸತ್ವ ಮಾಡಿದವು. ಮುಂದೆ ಹೈದರನು ವೀರಮ್ಮಾಜಿಯ ಕೈಯಿಂದ ಬಿದನೂರು ರಾಜಧಾನಿಯನ್ನು ಕಿತ್ತುಕೊಂಡು ಈ ಅರಸೊತ್ತಿಗೆಯನ್ನು ಇ. ಸ. ೧೭೬೩ರಲ್ಲಿ ಮುಳುಗಿಸಿಬಿಟ್ಟನು.[೧]

**೫. ವಿಜಾಪುರದ ಆದಿಲಶಾಹಿ:—** ಶಿಕಂದರ ಆದಿಲಶಹನು ವಿಜಾಪುರವನ್ನು ಇ. ಸ. ೧೬೭೨ ರಿಂದ ೧೬೮೬ ರ ವರೆಗೆ ಆಳಿದನು. ಮರಾಟರೂ ಮೊಗಲರೂ ಇವನ ಮೇಲೆ ಮೇಲಿಂದ ಮೇಲೆ ದಾಳಿ ಮಾಡಿದರು. ಕೊನೆಗೆ ಔರಂಗಜೇಬನು ಇ. ಸ. ೧೬೮೬ರಲ್ಲಿ ಆದಿಲಶಾಹಿಯನ್ನು ನಾಶಮಾಡಿದನು.

**೬. ಮರಾಟರು :—** ಇಲ್ಲಿಯ ವರೆಗೆ ಕರ್ನಾಟಕದ ಸ್ಥಿತಿಯನ್ನು ವರ್ಣಿಸಿದ್ದಾಯಿತು. ಇನ್ನು ಮಹಾರಾಷ್ಟ್ರದ ಬಗ್ಗೆ ವಿಚಾರ ಮಾಡುವಾ. ಇ. ಸ. ೧೬೮೦ರಲ್ಲಿ ಶಿವಾಜಿಯು ಕಾಲವಶನಾದನು. ಮುಂದೆ ಸಂಭಾಜಿಯು ೧೬೮೦ರಿಂದ೧೬೮೯ರ ವರೆಗೆ ಆಳಿದನು. ಇವನ ಕಾಲದಲ್ಲಿ ಮೊಗಲರು ಮಹಾರಾಷ್ಟ್ರದ ಮೇಲೆ ದಾಳಿ ಮಾಡುತ್ತಿದ್ದರು. ಕೊನೆಗೆ ಔರಂಗಜೇಬನು ಇ. ಸ. ೧೬೮೯ರಲ್ಲಿ ಸಂಭಾಜಿಯನ್ನು ಕೊಲ್ಲಿಸಿದನು. ಆನಂತರ ರಾಜಾರಾಮನು ಪಟ್ಟವೇರಿದನು. (೧೬೮೯ರಿಂದ ೧೭೦೦) ಇವನ ಆಳಿಕೆಯಲ್ಲಿ ಮೊಗಲರು ಪ್ರಬಲವಾಗಿ ದಾಳಿ ಮಾಡಿದರು. ಅವರ ಕಾಟವನ್ನು ತಾಳಲಾರದೆ ರಾಜಾರಾಮನು ಕೆಳದಿಯ ಅರಸರ ಆಶ್ರಯವನ್ನು ಪಡೆದನು. ಮುಂದೆ ೨ನೇ ಶಿವಾಜಿಯು ಪಟ್ಟಕ್ಕೆ ಬಂದನು. (ಇ. ಸ. ೧೭೦೦ರಿಂದ ೧೭೦೭) ಆವನ ತರುವಾಯ ಶಾಹೂ ಮಹಾರಾಜನು ರಾಜ್ಯದ ಆಡಳಿತೆಯನ್ನು ವಹಿಸಿದನು.

---

೧. ಪಾಂ. ಭಿ. ದೇಸಾಯಿ: ವಿ. ಸಾ. ಪುಟ ೨೮೧—೨೮೨

( ಇ. ಸ. ೧೭೦೭ರಿಂದ ೧೭೪೯ ಡಿಸೆಂಬರ ) ಈತನ ಕಾಲದಲ್ಲಿ ಯುದ್ಧಗಳು, ದೊಂಬೆಗಳು ಹೇರಳವಾಗಿವೆ. ಇ. ಸ. ೧೭೨೦ರಲ್ಲಿ ಹಿರಿಯ ಬಾಜೀರಾಯನು ಪೇಶವೆ ಪದವನ್ನು ವಹಿಸಿದನು. ಇವನು ಶೂರನೂ ಧೀರನೂ ರಾಜ್ಯತಂತ್ರ ಪ್ರವೀಣನೂ ಆಗಿದ್ದನು. ಶಾಹು ಛತ್ರಪತಿಯು ಇ. ಸ. ೧೭೩೧ರಲ್ಲಿ ಕೊಲ್ಹಾಪುರದ ಸಂಭಾಜಿಯ ಕೂಡ ಒಪ್ಪಂದ ಮಾಡಿಕೊಂಡು ವಾರಣೆಯಿಂದ ತುಂಗಭದ್ರೆಯ ವರೆಗಿನ ಎಲ್ಲ ಭಾಗವನ್ನು ಸಂಭಾಜಿಗೆ ಕೊಟ್ಟನು.[೧] ಇದರ ಮೇಲೆ ಸಂತಾಜಿ ಮತ್ತು ಬಹಿರಜಿ ಘೋರಪಡೆ ಇವರ ಅಧಿಕಾರ, ಕೇಳುವದೇನು ? ಮೇಲಾಗಿ ಹಿರಿಯ ಬಾಜೀರಾಯನ ವರ್ಚಸ್ಸು. ಈತನು ಉತ್ತರದಿಂದ ದಕ್ಷಿಣದ ಕಡೆಗೆ ಎರಡು ಸಲ ಆಲೆದಾಡಿದನು.

೭. **ದಾಸರ ಕಾಲದ ಸ್ಥಿತಿ** :— ಈ ಮೇಲಿನ ರೀತಿಯಲ್ಲಿ ಇ. ಸ. ೧೬೮೦ರಿಂದ ೧೭೬೦ರ ವರೆಗೆ ಇದ್ದ ರಾಜಕೀಯ ಪರಿಸ್ಥಿತಿಯನ್ನು ನೋಡಿದರೆ ದೇಶದಲ್ಲಿ, ವಿಶೇಷವಾಗಿ ದಕ್ಷಿಣಭಾರತದಲ್ಲಿ ಶಾಂತತೆ ಇರಲಿಲ್ಲವೆಂದು ಕಾಣುತ್ತದೆ. ಇಂಥ ಪರಿಸ್ಥಿತಿಯಲ್ಲಿಯೇ ಶ್ರೀಪ್ರಸನ್ನ ವೆಂಕಟದಾಸರು ಜನ್ಮತಾಳಿದರು. ( ಸುಮಾರು ಇ. ಸ. ೧೬೮೦ ) ಅವರು ಹುಟ್ಟಿದಾರಭ್ಯ ಸಾಯುವ ವರೆಗೆ ( ಅಂದರೆ ಇ. ಸ. ೧೭೫೨ ) ಅದೇ ಪರಿಸ್ಥಿತಿಯಲ್ಲಿ ಬೆಳೆದು ಬಾಳಿದರು. ಅವರ ಕಣ್ಣಿಗೆ ಯಾವಾಗಲೂ ಯುದ್ಧ, ಬಂಟರ ಹಾವಳಿ, ಆಯುಧಗಳ ಟಂಕಾರ, ಹಡಗುಗಳ್ಳರ ಸುಲಿಗೆ ಇವೇ ಮೊದಲಾದವುಗಳು ಕಣ್ಣಿಗೆ ಬೀಳುತ್ತಿದ್ದವು. ಆದಕಾರಣವೇ ಹೊಸದಾಗಿ ಅವರ ಕೃತಿಗಳಲ್ಲಿ ಇಂಥ ಪರಿಸ್ಥಿತಿಯು ಸ್ಪಷ್ಟ ವರ್ಣಿತವಾದದ್ದು ಕಂಡುಬರುವದು. ಮುಂದಿನ ಪದವನ್ನು ನೋಡಿರಿ.

( i ) " ತಲ್ಲಿಕಾರರು ನಿನ್ನ ಬಂಟರು ರಂಗಾ । ನಿಲ್ಲಾಲೀಸರು ಸಂಸಾರಿಗಳನು ಕೃಷ್ಣಾ ॥ "[೨] ಈ ಪದವನ್ನೆಲ್ಲ ಓದಿದರೆ ದಾಸರ ಕಾಲದಲ್ಲಿ ಪುಂಡರ ಹಾವಳಿಯು ಯಾವ ರೀತಿಯಿಂದ ನಡೆಯುತ್ತಿತ್ತೆಂಬುದು ತಿಳಿಯು

---

೧. Wad Mawjee & Parasnis Kaiphiyat Yadi Vagaire Page 47.

೨. ಪ್ರಬಂಧಪದ ಸಂಖ್ಯೆ ೧೮೧ ಇಡಿ ಪದವನ್ನು ನೋಡಿರಿ.

ವದು. ‘ತಲ್ಲಿಕಾರರು’ ಎಂದರೆ ‘ತಳ್ಳಿಕಾರರು, ಕದನವನ್ನು ಹೂಡುವವರು’ ಎಂದರ್ಥವಾಗುವದು. “ಬಂಟರು ........... ನಿಲ್ಲಾಲೀಸರು ಸಂಸಾರಿಗಳನು” ಸಂಸಾರಿಗಳನ್ನು ಸುಖವಾಗಿ ಬಾಳಗೊಡುತ್ತಿದ್ದಿಲ್ಲವೆಂಬ ಮಾತು ಸ್ಪಷ್ಟವಾಗಿದೆ. ಬಂಟರು ಮೊದಲು “ಒಳ್ಳಿದರಾಗಿ ಬಂದು ಮಾತಾಡಿ ಬಲು ಉಂಡುಟ್ಟು” ಜನರ ಮೇಲೆ “ಇಲ್ಲದ ತಪ್ಪನೆಣಿಸಿ ಹೊರಸುತ್ತಿ”ದ್ದರು. “ನರಪಶು”ಗಳಂತೆ “ಬಣವಿಗೆ ಕಿಚ್ಚಿಕ್ಕಿ ಹುಡಿದೂರಿ” ತಾವಾಗಿಯೇ “ಪಂಚಾನನಂತೆ ಖೋ ಇಟ್ಟು ಕೂಗುವರು” ಇಷ್ಟಕ್ಕೇ ಸಾಲದೆ, “ಕಬ್ಬು ಬಾಳೆ ನೆಲ್ಲು” ಮುಂತಾದವುಗಳನ್ನು ನಾಶಗೊಳಿಸುತ್ತಿದ್ದರು. “ಛಲದಿ” ಮಂದಿರಗಳನ್ನು ಹೊಕ್ಕು, ಹರಿಸೇವೆಯಲ್ಲಿ ಮಗ್ನರಾದವರನ್ನು ಹೊಡೆದೋಡಿಸುತ್ತಿದ್ದರು. ಹೊಲ-ಮನೆಗಳನ್ನು ಹೊಕ್ಕು ಅಲ್ಲಿರುವವರನ್ನು ತಂದು ಕಾದ ಕಬ್ಬಿಣದಿಂದ “ಮುದ್ರೆಯೊತ್ತದೆ ಬಿಡರು” ಇದೂ ಸಾಲದೆ ಜನರನ್ನು “ಶೆರೆಯನಿಕ್ಕುವರು” ಇಂಥ ಪರಿಸ್ಥಿತಿಯಲ್ಲಿ ಸಂಸಾರಿಗಳಿಗೆ ಸುಖವೆಲ್ಲಿಯದು” ಇನ್ನೊಂದು ಪದದಲ್ಲಿ ಪ್ರಸನ್ನ ವೆಂಕಟರು ಪರಿಸ್ಥಿತಿಯನ್ನು ವರ್ಣಿಸಿದ್ದಾರೆ:—

( ii ) “ಒಡೆಯ ದವ್ಮಯ್ಯ ನವ್ಮಯ್ಯನೆಂದರೆ ಕಾಲ್ ।
ಪಿಡಿದರೆ ಕೊಡಹಿದರಲ್ಲೊ ॥
ಸುಡುವ ಮಳಲು ಹುಡಿ ಕಲ್ಮುಳ್ಳೊಳೆಳೆವಾಗ ।
ಹಿಡಿದೇಜಿ ಕಂಚುಕವೆಲ್ಲೊ ॥ ”೧

ಇಲ್ಲಿ “ಹಿಡಿದೇಜಿ ಕಂಚುಕ” ಎಂದರೆ ಕಂಚುಕ (ಚಿಲಕತ್ತು)ವನ್ನು ಧರಿಸಿ, ತೇಜಿಯನ್ನು (ಕುದುರೆಯನ್ನು) ಏರಿಬರುವ ರಾವುತರ ವರ್ಣನೆಯು ಕಂಡುಬರುವದು. ಆವರು ಬಂದು ಜನರಿಗೆ ತೊಂದರೆ ಕೊಡುತ್ತಿದ್ದರೆಂದು ತಿಳಿಯುತ್ತದೆ. ಈ ರಾವುತರು ಯಮುನ ಕಡೆಗೆ ಹೋದರೆಂದರೆ (ಮಡಿದರೆ) ಯಮುನ ಸೈನಿಕರು ಇವರನ್ನು ಸುಡುವ ಮಳಲಿನಲ್ಲಿ, ಕಲ್ಲು-ಮುಳ್ಳುಗಳಲ್ಲಿ ಎಳೆಯುವರು. ಯಮುನ ಸೈನಿಕರಿಗೆ ಎಷ್ಟು ಬೇಡಿಕೊಂಡರೂ ಆವರು ಇವರನ್ನು ಬಿಡರು. ಆದಕಾರಣ ದಾಸರು ಆವರಿಗೆ (ರಾವುತರಿಗೆ) “ಜನರಿಗೆ ತೊಂದರೆ ಕೊಡಬೇಡಿರಿ” ಎಂದು ಹೇಳಿದ್ದಾರೆ.

---

೧, ಕೌಜಲಗಿ ಬಂಡೇರಾಯರು: ಪ್ರ. ವೆಂ. ಕೀ, ಭಾಗ ೧ ಪುಟ ೮೩ ಪದ ೭೭ ನುಡಿ ೨

" ಕೀವು ರುಧಿರ ವಿಟ ಕುಂಡದಿ ಮುಣುಗುವಾಗ | ಹೇವದ
ಮಾತೇನಾಯ್ತಣ್ಣಾ |
ಸಾವುತೆನಮ್ಮಪ್ಪ ಮೊರೆಯ ಕೇಳೆಂದರೆ | ಆವಾಗ ಬಾಧೆ ಕಾಣಣ್ಣಾ ||
ಆವ್ಯೆವಸ್ಪತ ದಂಡಕೊಟ್ಟು ಬೊಗಳೆಂಬಾಗ | ಚಾವಡಿ
ತಾಣವೆಲ್ಲಂಣ || " ೧

ಆ ರಾವುತರು ಹಳ್ಳಿಯಲ್ಲಿಯ ಒಂದು ಚಾವಡಿಯಲ್ಲಿ ತಂಗಿ, ಜನರನ್ನು ( ಸಂಸಾರಿಗಳನ್ನು ) ಕರೆಯಿಸಿ ಹೆಮ್ಮೆಯ ಮಾತುಗಳನ್ನು ಆಡುತ್ತ " ದಂಡ ಕೊಟ್ಟು ಬೊಗಳಿರಿ " ಎಂದು ಮಾತನಾಡುತ್ತಿದ್ದರು. ಆದರೆ ಇಂಥ ಒರಟು ಮಾತುಗಳು ಯಮಧರ್ಮರಾಯನ ಮುಂದೆ ಅಷ್ಟೇಕೆ ಅವನ ದೂತರ ಮುಂದೆ ಕೂಡ ನಡೆಯುವದಿಲ್ಲ. ಇಲ್ಲಿ ದಾಳಿ ಮಾಡುವ ಸೈನಿಕರು ಹಳ್ಳಿಯಲ್ಲಿ ಬಂದು ಜನರಿಗೆ ಯಾವ ರೀತಿಯಿಂದ ತೊಂದರೆ ಕೊಡುತ್ತಿದ್ದರೆಂಬುದು ಚೆನ್ನಾಗಿ ತಿಳಿಯುವದು.

" ನಾಲಿಗೆಯೊಣಗಿ ನೀರು ಕೂಳೆಂದು ಅಳುವಾಗ |
ಹಾಲು ಶಾಲ್ಯೋದನವೆಲ್ಲೊ || "೨

ಸೈನಿಕರು ಹಳ್ಳಿ ಹಳ್ಳಿಗೆ ಬಂದು, ಜನರ ಕಡೆಯಿಂದ ಒತ್ತಾಯದಿಂದ ಹಾಲು-ಅನ್ನವನ್ನು ( ವೃಷ್ಟಾನ್ನ ) ಹಾಲು ಶಾಲ್ಯೋದನವನ್ನು ತರಿಸಿ ತಿನ್ನುವರು. ಆದರೆ ಯಮಪುರಿಯಲ್ಲಿ ನೀರು, ಕೂಳು ಅನ್ನುವ ಪ್ರಸಂಗದಲ್ಲಿ ಹಾಲು ಅನ್ನ ದೊರೆಯಲು ಹೇಗೆ ಸಾಧ್ಯ ? " ವಸುಮತಿಯು ಏಳು ಬಹಳ್ಳಸಗೆಟ್ಟಿತಲ್ಲ "೩ ಈ ಚರಣದಿಂದ ತಿಳಿಯುವದೇನಂದರೆ— ದೇಶದಲ್ಲಿ ಜನರಿಗೆ ಶಾಂತಿ ಲಭಿಸಿರಲಿಕ್ಕಿಲ್ಲ. ಅರಿರಾಯರ ಕಾಟ, ಪುಂಡರ ಹಾವಳಿಯು ದೇಶದ ತುಂಬೆಲ್ಲ ಹಬ್ಬಿ, ಜನರ ಸ್ಥಿತಿಯು ಅಲ್ಲೋಲ ಕಲ್ಲೋಲವಾಗಿರಬೇಕು. ಅಂತೆಯೇ ದಾಸರು " ಹೇ ಭೂಮಿತಾಯಿಯೇ, ಎದ್ದೇಳು ; ಚೇತನಗೊಳ್ಳು ಎಲ್ಲವೂ ಕೆಟ್ಟು ಹೋಗಿದೆ, ಜನರಲ್ಲಿ ಚೇತನವನ್ನು ಕೊಡು, ಅದರಿಂದ ಅವರು

೧. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಭಾಗ ೧ ಪುಟ ೮೩ ಪದ ೭೭ ನುಡಿ ೩
೨. ಕೌಜಲಗಿ ಬಂಡೇರಾಯದು ಪ್ರ. ವೆಂ. ಕೀ. ಭಾಗ ೧ ಪದ ೭೭ ಪುಟ ೮೪ ನು. ೪
೩, ಕೌಜಲಗಿ ಬಂಡೇರಾಯರು ಪ್ರ.ವೆಂ.ಕೀ. ಭಾಗ ೧ ಪುಟ ೮೯ ಪದ ೮೦ ನು. ೧

ಆತ್ಮರಕ್ಷಣೆಯನ್ನು ಮಾಡಿಕೊಂಡು ಸುಖದಿಂದ ಬಾಳುವರು." ಎಂದು ಪ್ರಾರ್ಥಿಸುತ್ತಾರೆ.

(iii) "ದುಷ್ಟ ಚೌರ್‍ಯ ಹಡಗದವರು ಬಿಡದೆ ಬೆ । ನ್ನಟ್ಟಿ
ಬಡಿದಂಜಿಸುವರು ಮನವಾಯುವಿ [
ನಟ್ಟುಳಿಗೆ ನೆಲೆಯಿಲ್ಲವೋ ಇಂದ್ರಿಯ ಜಂತು ।
ಕಟ್ಟಿಲ್ಲದೆಳದೊಯ್ವವೊ ರಂಗಾ ॥"೧

ಸಮುದ್ರದಲ್ಲಿ ಪ್ರವಾಸ ಮಾಡುವ ಕಾಲಕ್ಕೆ ಹಡಗುಗಳ್ಳರು (ದುಷ್ಟ ಚೌರ್‍ಯ ಹಡಗದವರು Sea Pirates) ಪ್ರವಾಸಿಕರನ್ನು ಜಡಿದು, ಬಡಿದು, ಅಂಜಿಸಿ, ಅವರಿಂದ ಹಣ ಮತ್ತು ವಸ್ತು-ಒಡವೆಗಳನ್ನು ಸುಲಿದುಕೊಳ್ಳುತ್ತಿದ್ದರು. ಎಲ್ಲಿ ನೋಡಿದಲ್ಲಿ ಸಂಸಾರಿಕರಿಗೆ ಸ್ವಾಸ್ಥ್ಯವಿರಲಿಲ್ಲ. ಸುಖವಿರಲಿಲ್ಲ, "ಅಡಿಗಡಿಗೆ ಸಂಸಾರವು ಕಷ್ಟಮಯವಾದುದು, ಮುಳ್ಳಿನ ಹಾಸಿಗೆ, ಚಿಂತೆಯ ಕಂತೆ" ಎಂದು ಜನರು ತಿಳಿದುಕೊಂಡಿದ್ದರೆ ತಪ್ಪಾಗಲಿಕ್ಕಿಲ್ಲವಷ್ಟೇ!

ಈ ಮೇಲಿನ ಚರಣಗಳ ಮೇಲಿಂದ ಇನ್ನೊಂದು ಸಂಗತಿಯು ಕಂಡು ಬರುವದು. ಅದೇನಂದರೆ ದಾಸರ ಕಾಲದಲ್ಲಿ ಹಡಗುಗಳ್ಳರು ಇದ್ದು, ಅವುಗಳ ಸಹಾಯದಿಂದ ಜನರು ಸಮುದ್ರ ಪ್ರವಾಸ ಕೈಕೊಳ್ಳುತ್ತಿದ್ದರು.

(iv) "ಶ್ರೀಲೋಲನಂಘ್ರಿ ಸಂಬಂಧ ಸೈನ್ಯ ಕೂಡಿ ।
ತಾಳದಂಡಿಗೆ ಗೀತಾಯುಧಗಳಿಂದ ॥
ಕಾಲಕಾಲಕೆ ನಿಮ್ಮ ಮೇಳವ ಮುರಿದಾಡಿ ।
ಹಾಳುಮಾಡುವೆ ಕೈಯಲ್ಲಿ ಕಡ್ಡಿ ಕೊಡುವೆ ॥"೨

ಮನುಷ್ಯನು ಯಾವ ಕಾಲದಲ್ಲಿ ಮತ್ತು ಯಾವ ಪರಿಸ್ಥಿತಿಯಲ್ಲಿ ತಾನಿರುವನೋ ಅದೇ ಪರಿಸ್ಥಿತಿಯನ್ನು ಅವನು ಬಣ್ಣಿಸುವನು. ಇನ್ನು ಈ ಮೇಲಿನ ಚರಣಗಳನ್ನು ನೋಡಿದರೆ-ಅಲ್ಲಿಯ ಹೋಲಿಕೆಗಳು ಯುದ್ಧದ ಆಯುಧ, ಸೈನ್ಯ ಮತ್ತು ಯುದ್ಧವು ನಡೆದ ಕಾಲದಲ್ಲಿ ಸೈನಿಕರು ಆಡುವ ಒರಟು ಮಾತುಗಳಿಂದ ಹೊಡೆ, ಬಡೆ, ಮುರಿ, ಹಾಳುಮಾಡು ಮುಂತಾದವುಗಳು ಬಂದದ್ದರಿಂದ

೧. ಪ್ರಬಂಧಪದ ಸಂಖ್ಯೆ ೧೮೦ ನು. ೨

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಭಾಗ ೧ ಪುಟ ೨೪ ಪದ ೨೧ ನುಡಿ ೨

ಶ್ರೀಪ್ರಸನ್ನ ವೆಂಕಟದಾಸರ ಕಾಲವಲ್ಲಿಯ ವಾತಾವರಣವು ಯುದ್ಧಮಯ ವಾಗಿತ್ತೆಂದು ಹೇಳಬಹುದು.

ಪ್ರಸನ್ನ ವೆಂಕಟರು ರಾಜಕೀಯ ಪರಿಸ್ಥಿತಿಯನ್ನು ಇಷ್ಟು ಸ್ಪಷ್ಟವಾಗಿ ವರ್ಣಿಸುವ ಕಾರಣವಿಷ್ಟೆ–ಅವರ ಕಾಲದಲ್ಲಿ ಬಂಟರ ಹಾವಳಿ, ಸೈನಿಕರ ಚಲ್ಲಾಟ, ರಾವುತರ ಓಡಾಟ, ಹಡಗುಗಳ್ಳರ ಸುಲಿಗೆ, ಇವು ಮಿತಿಮೀರಿರಬಹುದು. ಅದ ರಿಂದ ಜನರಲ್ಲಿ ಚೇತನೆ ಇಲ್ಲವಂತಾಗಿ ಜೀವನವು ಬೇಡನಾಗಿರಬೇಕು. "ಇಂತು ಬಳಲುವ ನೋಡಿ" ಜನರು ಬಳಲಿ ಬೆಂಡಾಗಿರಬೇಕು. ಆರಂಭದಲ್ಲಿ ವರ್ಣಿ ಸಿದ ರಾಜಕೀಯ ಹಿನ್ನೆಲೆಯನ್ನು ನೆನೆದರೆ ಇದು ಸತ್ಯವಾಗಿರಬೇಕೆಂದು ಅನಿಸುತ್ತದೆ.

ಶ್ರೀಕನಕದಾಸರು ತಮ್ಮ "ಮೋಹನ ತರಂಗಿಣಿ"ಯಲ್ಲಿ ಇಂಥ ಪರಿ ಸ್ಥಿತಿಯನ್ನು ವರ್ಣಿಸಿದ್ದಾರೆ. ಆದರೆ ಪ್ರಸನ್ನ ವೆಂಕಟರು ವರ್ಣಿಸಿದಷ್ಟು ಕನಕ ದಾಸರಲ್ಲಿ ಕಂಡುಬರುವದಿಲ್ಲ. ಈ ರಾಜಕೀಯ ಪರಿಸ್ಥಿತಿಯನ್ನು ವರ್ಣಿಸುವ ದರಲ್ಲಿ ಶ್ರೀಪ್ರಸನ್ನ ವೆಂಕಟದಾಸರು ಅಗ್ರಗಣ್ಯರು ಎಂದೆನ್ನಬಹುದು. ಏಕೆಂದರೆ ಮತ್ತಾವ ದಾಸರೂ ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಿಲ್ಲ. ಆದ್ದರಿಂದ ಪ್ರಸನ್ನ ವೆಂಕಟರ ಇದೊಂದು ವೈಶಿಷ್ಟ್ಯ ಎಂದು ಹೇಳಬಹುದು.

———

ಭಾಗ ೮.

# ಸಾಮಾಜಿಕ ಜೀವನ.

ದಾಸರಾಗಲಿ ವಚನಕಾರರಾಗಲಿ ಸಾಮಾಜಿಕ ಜೀವನವನ್ನು ವರ್ಣಿಸಲು ತಮ್ಮ ವಾಙ್ಮಯವನ್ನು ಮೀಸಲಾಗಿರಿಸಿಲ್ಲ. ದಾಸರ ಕೀರ್ತನೆಗಳೆಂದರೆ ಭಕ್ತಿಯ ಭಾವಗೀತೆಗಳು. ಅಲ್ಲಿ ಭಕ್ತಿರಸವು ತುಂಬಿ ತುಳುಕುವದು. ಸಾಮಾಜಿಕ ಜೀವನವು ಸ್ಪಷ್ಟವಾಗಿ ಇಲ್ಲವೇ ನೇರವಾಗಿ, ಯಾವ ದಾಸರ ಕೃತಿಗಳಲ್ಲಿಯೂ ಕಂಡುಬರುವದಿಲ್ಲ. ಶ್ರೀ ಕನಕದಾಸರು ಮಾತ್ರ ಶ್ರೀಕೃಷ್ಣಚರಿತ್ರೆಯನ್ನು ತಮ್ಮ ಕಾಲದ ಜನಜೀವನದೊಂದಿಗೆ ಹದಗೊಳಿಸಿ, ಮೋಹನತರಂಗಿಣಿಯನ್ನು ರಚಿಸಿರುವರು. ಅದರಷ್ಟು ಸಾಮಾಜಿಕ ವಿಷಯವನ್ನು ವಿಸ್ತರಿಸುವ ಕಾವ್ಯವೇ ವಿರಳ. ಉಳಿದ ದಾಸರಲ್ಲಿ ಸ್ಪಷ್ಟವಾಗಿರದಿದ್ದರೂ ಸಂದರ್ಭೋಚಿತವಾಗಿ ಸಾಮಾಜಿಕ ಜೀವನದ ಚಿತ್ರವು ಇಲ್ಲಿ ಬಂದಿದೆ. ಅದನ್ನು ಪರ್ಯಾಯವಾಗಿ ತಿಳಿದುಕೊಳ್ಳದ ವಿನಾ ಗತ್ಯಂತರವಿಲ್ಲ. ಶ್ರೀ ಪ್ರಸನ್ನ ವೆಂಕಟದಾಸರಲ್ಲಿಯೂ ಕೆಲವು ವಿಷಯಗಳನ್ನು ಈ ಬಗೆಯಾಗಿ ಕಾಣುತ್ತೇವೆ. ಅವುಗಳನ್ನು ಕೆಳಗೆ ವರ್ಣಿಸಲಾಗಿದೆ.

೧. **ದೇವರು ಮತ್ತು ಧರ್ಮ :—** ವಿಜಯನಗರ ಸಾಮ್ರಾಜ್ಯವು ಭಿನ್ನ ಭಿನ್ನ ಧರ್ಮ, ಮತಗಳ ಮಹಾಸಮ್ಮೇಳನವು. ಅಲ್ಲಿ ಜೈನ, ವೀರಶೈವ, ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಮಹಮ್ಮದೀಯ ಮುಂತಾದ ಮತಗಳಿಗೆ ಸೇರಿದವರು ವಿಜಯನಗರದ ಪ್ರಜೆಗಳಾಗಿದ್ದರು. ಅದರಂತೆ ಪ್ರತಿಯೊಂದು ಮತದ ಆಚಾರ್ಯರೂ ಉಪದೇಶಕರೂ ಆ ಕಾಲದಲ್ಲಿ ತಮ್ಮ ತಮ್ಮ ಮತ ಧರ್ಮಗಳನ್ನು ಪ್ರಚಾರಗೊಳಿಸಲು ಪ್ರಯತ್ನಿಸಿದರು. ಆದಕಾರಣ ಇವುಗಳಲ್ಲಿ ಪರಸ್ಪರ ಸ್ಪರ್ಧೆಯೂ ಸಂಘರ್ಷವೂ ಆಗಾಗ್ಗೆ ಉಂಟಾಗುತ್ತಿತ್ತು. ಆದರೆ ಅದು ವಿಕೋಪಕ್ಕೆ ಹೋಗಿ ಅದಕ್ಕೆ ಹೇಯವಾದ ಸ್ವರೂಪವು ಮಾತ್ರ ಎಂದಿಗೂ ಬರಲಿಲ್ಲ. ಏಕೆಂದರೆ ಆಗ ಎಲ್ಲ ಧರ್ಮಸಂಸ್ಥೆಗಳಲ್ಲಿ ಸಮನ್ವಯ ದೃಷ್ಟಿಯು ಇದ್ದುದು ಈ ಕೆಳಗಿನ ಪದ್ಯದಿಂದ ಕಂಡುಬರುವದು—

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹಶ್ಚೆತೀಹ ಜೈನಶಾಶನಮಿತಿ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವೇಶಸ್ಸದಾ ॥೧

ಆದರೆ ಈ ದೃಷ್ಟಿಯು ಪ್ರಸನ್ನ ವೆಂಕಟದಾಸರ ಕಾಲದಲ್ಲಿ ಉಳಿಯಲಿಲ್ಲ. ಸಮಾಜದಲ್ಲಿ, ಧರ್ಮದಲ್ಲಿ ಪಂಗಡಗಳು ಬೆಳೆದು ತಮ್ಮ ತಮ್ಮ ದೇವರನ್ನು ಬೇರೆ ಮಾಡಿಕೊಂಡವು. ದೇವರ ಸಂಖ್ಯೆಯು ಬೆಳೆಯಿತು. ಹಳ್ಳಿಗಳಲ್ಲಿ ಮೂಢ ನಂಬಿಕೆಗಳು ನೆಲೆಯೂರಿ ನಿಂತವು. ಅದಕ್ಕೇ "ಇದು ಸರಿಯಲ್ಲ; ಇದು ಅನರ್ಥಕ್ಕೆ ಕಾರಣ" ಎಂಬ ಮಾತನ್ನು ದಾಸರು "ಹಲವು ದೈವಕೆ ಹಲ್ಲಾ ತೆರಿಯಾದೆ ಹೊಗಳಾದೆ ॥೨ ಎಂದು ಹೇಳಿದ್ದಾರೆ. ಅಲ್ಲದೆ "ಲೆಕ್ಕವರಿಯದೆ ಜೀವೇಶರು ಸಮರೆಂದು । ಲೆಕ್ಕಿಸುವ ನರರೊಳು ಪಾಪಿ ॥"೩ ಈ ಚರಣದ ಮೇಲಿಂದ ನೋಡಲಾಗಿ ಹಿಂದಿನಿಂದಲೂ ಬಂದ ದ್ವೈತ, ಅದ್ವೈತವಾದವು ಪ್ರಸನ್ನ ವೆಂಕಟದಾಸರ ಕಾಲದಲ್ಲಿಯೂ ಇದ್ದಿತೆಂದು ತೋರುತ್ತದೆ. ಆದ ಕಾರಣ, ಪ್ರಸನ್ನ ವೆಂಕಟರು ಅದ್ವೈತರಿಗೆ "ಜೀವ ಬೇರೆ, ಈಶ ಬೇರೆ, ಜೀವನು ಈಶನ ದಾಸನು. ಜೀವೇಶರು ಸಮರೆಂದು ಅನ್ನುವವರು ಮೂರ್ಖರು, ಪಾಪಿಗಳು. ಇವನ್ನು ಸರಿಯಾಗಿ ವಿಚಾರಮಾಡಿ ತಿಳಿದುಕೊಳ್ಳಬೇಕು." ಎಂದು ಹೇಳಿದರು.

ಇನ್ನು ಈ ಕೆಳಗಿನ ನುಡಿಯಿಂದ ಕಾಣುವದೇನಂದರೆ—

"ನೇಮವೆನ್ನಲಿಲ್ಲಾ । ನಾಮುದರಿಕೆ ಇಲ್ಲಾ । ಸದ್ಧರ್ಮ ಸರಕಿಲ್ಲಾ ।
ಶುದ್ಧ ಬುದ್ಧಿ ಇಲ್ಲಾ ॥"೪

---

೧. Epigraphica Carnatika vol. v. Balur 3 ಮತ್ತು Prof. R. S. Mugali: Heritage of Karnatak II chap. viii page 129. (೨ನೇ ಹರಿಹರನ ಆಳಿಕೆಯಲ್ಲಿಯ ಸಂಗತಿಯು.)

೨. ಪ್ರಬಂಧ ಪದ ಸಂಖ್ಯೆ ೭೫ ನುಡಿ ೧

೩. " " ೮೩ ನುಡಿ ೪

೪. " " ೧೮೩ ನುಡಿ ೧—೨

ಜನರು ನೇಮಗಳನ್ನು ಆಚರಿಸುತ್ತಿದ್ದಿಲ್ಲ. ಹರಿ ನಾಮವನ್ನು ಪಠಿಸುತ್ತಿದ್ದಿಲ್ಲ. ಸನ್ಮಾರ್ಗದಲ್ಲಿ ಮನಸ್ಸು ಇಟ್ಟಿರಲಿಲ್ಲ. ಹೀಗಿದ್ದರೂ ಬುದ್ಧಿಯು ಶುದ್ಧವಿತ್ತೆಂದೆನ್ನಬೇಕೆ? ಅದು ಕೂಡ ಇದ್ದಿರಲಿಲ್ಲ. ಹೀಗಾಗಿ ಸಮಾಜದ ಕಟ್ಟು ಸಡಿಲಾಗಿ ಅದು ಮನಬಂದಂತೆ ನಡೆದಿತ್ತೆಂದು ಹೇಳಬಹುದು.

೨. **ಭಕ್ತಿ ಮತ್ತು ದಾನ:—** (i) ಭಕ್ತಿ:— ಮೋಕ್ಷದಾಯಕನಾದ ಹರಿಯನ್ನು ಒಲಿಸಿಕೊಳ್ಳಬೇಕಾದರೆ, ಹಾಗೂ ಮೋಕ್ಷವನ್ನು ಗಳಿಸಿಕೊಳ್ಳಬೇಕಾದರೆ—ಭಕ್ತಿ ಬೇಕು. "ಭಕ್ತಿರ್ಸ್ತ ತತ್ ಸಾಧನಮ್.||" ಎಲ್ಲಕ್ಕೂ ಭಕ್ತಿಯು ಮುಖ್ಯ ಕಾರಣನೆಂದು ಎಲ್ಲ ವೈದಿಕಮತಾಚಾರ್ಯರು ಎಂದಿನಿಂದಲೂ ಹೇಳಿದ್ದಾರೆ. ಆದರೆ ಜನರು ಇವನ್ನು ತಿಳಿದೂ ತಿಳಿದು ತಿರುಕರ ಹಾಗೆ ನಡೆಯುವದನ್ನು ನೋಡಿ ಪ್ರಸನ್ನ ವೆಂಕಟರು ಸಮಾಜದಲ್ಲಿ ಭಕ್ತಿಯು ಯಾವ ರೀತಿಯಿಂದ ನಡೆದಿದೆ ಎಂಬುದನ್ನು ಬಣ್ಣಿಸಿದ್ದಾರೆ. "ಹರಿಕಥೆಗೆ ಬೇಸತ್ತು ಹರಟೆಯನು ಕೇಳುವವ | ಹರಿಯ ಗುಣ ಹೊಗಳದೊಣ ತುಂಟು ಬಡಿವನ ||"೧ ಜನರು ಹರಿಕಥೆಯನ್ನು ಕೇಳಲು ಹೋಗುತ್ತಿದ್ದರು. ಆದರೆ ಅದರಲ್ಲಿ ಭಕ್ತಿಯಿರಲಿಲ್ಲ. ಹರಿಕಥೆಯಲ್ಲಿ ಅವರಿಗೆ ಬೇಸರವಾದ ಕಾರಣ ಅದನ್ನು ಬಿಟ್ಟು ಹರಟೆಯಲ್ಲಿ ಕಾಲಹರಣ ಮಾಡುತ್ತಿದ್ದರು. ಇಂಥವರಿಗೆ ಹರಿಗುಣಗಳನ್ನು ಹೊಗಳುವದು ಹೇಗೆ ಸಾಧ್ಯ? ಭಕ್ತಿಯಿಂದ ಹರಿನಾಮವನ್ನು ಜಪಿಸುವದನ್ನು ಬಿಟ್ಟು, ಒಣ ತುಂಟ ವಾದವನ್ನು ಹೂಡುತ್ತಿದ್ದರು. ತಮ್ಮ ಲಕ್ಷ್ಯವಂತೂ ಹರಿ ಕಥೆಯ ಕಡೆಗೆ ಇಲ್ಲವೇ ಇಲ್ಲ. ಅನ್ಯರು ಅದರಲ್ಲಿ ಮಗ್ನರಾಗಿದ್ದರೆ ಆದರಿಂದ ಅವರ ಮನಸ್ಸನ್ನು ತಿರುಗಿಸಿ, ದಾರಿ ತಪ್ಪಿಸುತ್ತಿದ್ದರು. ಅಂಥವರ ಬಗೆಗೆ ಮೇಲಿನ ಪದವನ್ನು ದಾಸರು ಹೇಳಿದ್ದಾರೆ.

(ii) ದಾನ:—ದಾನವು ಹರಿಸೇವೆಯ ಒಂದು ಸಾಧನ. ಇದರಿಂದಲೂ ದೇವರು ಪ್ರಸನ್ನನಾಗುವನು. ಹಣವುಳ್ಳವರು ಹೆಚ್ಚಾಗಿ ದಾನ ಮಾಡುವರು. ಇಲ್ಲದವರು ತಮ್ಮ ಯೋಗ್ಯತಾನುಸಾರವಾಗಿ ದಾನ ಮಾಡುವರು. "ಧನದಾಗಮದ ಸುಕಾಲಕೆ ಸತ್ಪಾತ್ರ | ರನು ಕರೆದು ಅರ್ಚಿಸಿ ಉಣಿಸಿ ಕೃಷ್ಣಾ- | ರ್ಪಣ ಬುದ್ಧಿಯಿಂದ ಸರ್ವಸ್ವವನ್ನೊಪ್ಪಿಸಬೇಕು ||"೨ ಈ ನುಡಿಯಲ್ಲಿ ದಾನದ ಬಗ್ಗೆ

---

೧. ಪ್ರಬಂಧಪದ ಸಂಖ್ಯೆ ೧೬೪ ನುಡಿ ೧ ೨. ಪ್ರಬಂ. ಪದ ಸಂಖ್ಯೆ ೯೩ ನುಡಿ ೨

ದಾಸರ ಉಪದೇಶವು ಕಂಡುಬರುವದೇನೋ ನಿಜ. ಆದರೆ ಮುಖ್ಯ ವಿಷಯ ಉಪದೇಶವಾಗಿರದೆ ಜನರು ದಾನದ ವಿಷಯದಲ್ಲಿ ಹೇಗೆ ನಡೆಯುತ್ತಿದ್ದರೆಂಬುದು. ಜನರು ಧನ ಗಳಿಸುವ ಕಾಲದಲ್ಲಿ ದಾನಧರ್ಮ ಮಾಡುತ್ತಿರಲಿಲ್ಲ. ಅವರಿಗೆ ದಾಸರು ಕೃಷ್ಣಾರ್ಪಣ ಬುದ್ಧಿಯಿಂದ ದಾನ ಮಾಡಬೇಕೆಂದು ಹೇಳಿದರು. ಇನ್ನು ಒಂದು ವೇಳೆ ಧನವುಳ್ಳವರು ದಾನ ಮಾಡಿದರೂ ಸತ್ಪಾತ್ರದಲ್ಲಿ ದಾನ ಮಾಡುತ್ತಿರಲಿಲ್ಲ. ಅಂಥವರಿಗೆ ಯೋಗ್ಯರಲ್ಲಿ ದಾನ ಮಾಡಬೇಕೆಂದು ಹೇಳಿದರು. ಇನ್ನು ಕೆಲವರು ಸರಿಯಾದ ರೀತಿಯಲ್ಲಿ ದಾನ ಮಾಡುತ್ತಿರಲಿಲ್ಲ. ಅಂಥವರಿಗೆ ಅತಿಥಿಗಳನ್ನು ಯಥಾವಿಧಿ ಅರ್ಚಿಸಿ, ಉಣಿಸಿ ಸರಿಯಾದ ರೀತಿಯಲ್ಲಿ ದಾನ ಮಾಡಬೇಕೆಂದು ಹೇಳಿದರು. ಈ ಮೇಲಿನ ಸಂಗತಿಯಿಂದ ದಾಸರ ಕಾಲದಲ್ಲಿ ದಾನವು ಧರ್ಮಕ್ಕನುಸಾರವಾಗಿಯೂ ಕಾಲೋಚಿತವಾಗಿಯೂ ಆಗುತ್ತಿರಲಿಲ್ಲವೆಂದು ತಿಳಿಯುವದು.

೩. **ನೀತಿ ಹಾಗೂ ರೀತಿನಡತೆಗಳು**:— ಪ್ರಪಂಚದಲ್ಲಿ ಮನುಷ್ಯನಿಗೆ ನಾನಾ ಪರಿಯಾಗಿ ಕಷ್ಟಗಳು ಬರುವವು. ಅದರಲ್ಲಿ ವಿಶೇಷವಾಗಿ ದೇವರನ್ನು ದೊರಕಿಸಿಕೊಳ್ಳುವದಕ್ಕಾಗಿ ಹೆಣಗುವಾಗ ಮತ್ತು ಮೋಕ್ಷಸಾಧನೆ ಮಾಡುವಾಗ್ಗೆ ಇಲ್ಲದ ಆಪತ್ತುಗಳು ಬರುತ್ತವೆ. ಇದಕ್ಕೆ ಕಾರಣವೇನಂದರೆ, ದೇವರು ಮನುಷ್ಯನನ್ನು ಪರಿಪರಿಯಾಗಿ ಪರೀಕ್ಷಿಸುವನು. ಇಂಥ ಪ್ರಸಂಗದಲ್ಲಿ ಮನುಷ್ಯನು ತೊಂದರೆಗಳಿಗೆ ಮನಸೋತು ಸತ್ಸಂಪ್ರದಾಯವನ್ನು ಬಿಡುವನು. ನೀತಿಯಿಂದ ದೂರಾಗುವನು. ಅವನ ನಡತೆ ತಪ್ಪುವದು. ಕಾಲು ಜಾರುವದು. ಹಾಗೂ ಇಲ್ಲಿಯ ವರೆಗೆ ಮಾಡಿದ ಶ್ರಮವು ವ್ಯರ್ಥವಾಗುವದು. ಆದ್ದರಿಂದ ಮನುಷ್ಯನ ರೀತಿ ನಡತೆಗಳು ಸರಿಯಾಗಿರಬೇಕೆಂದು ದಾಸರು ಮೇಲಿಂದ ಮೇಲೆ ಹೇಳಿದ್ದಾರೆ.

"ಪರದಾರ | ಪರಸಿರಿ | ಪರನಿಂದೆ | ನಿರುತದಿ | ಚಿರರತಿ | ಬೆರೆತೆಲ್ಲೊ||"೧ ಅನ್ಯರ ಸತಿಯ ಕೂಡ ಸಂಸಾರ ಹೂಡುವದು, ಪರರ ಸಂಪತ್ತಿನ ಬಗ್ಗೆ ಆಶೆ ಬಡುವದು, ಪರರ ನಿಂದೆಯಲ್ಲಿ ಕಾಲಹರಣ ಮಾಡುವದು, "ಅಶನ ದುರ್ವ್ಯಸನಕೆ ನಿಶಿದಿನ" ತಿನ್ನುವದು, ತಿರುಗುವದು, ದುರ್ವ್ಯಸನದಲ್ಲಿ ಕಾಲ ಕಳೆಯು

೧. ಪ್ರಬಂಧ ಪದ ಸಂಖ್ಯೆ ೭೬ ಮೊದಲಿನ ೩ ನುಡಿಗಳು

ವದು ಮುಂತಾದ ದುರಾಚಾರಗಳಲ್ಲಿ ಸಮಾಜವು ಸಿಲುಕಿ ತೊಳಲಾಡುತ್ತಿತ್ತು. “ಹರಿ ಸಂಕೀರ್ತನೆಯಾ | ನರನಾರಿಯರು ಆ | ದರದಲಿ ಮಾಡಿದ | ವರ ನಿಂದಿಪರ ತರಹೇಳಿದಾ || ಹರಿದಾಸರಿಗೆ ಋಣ | ಕರಿಯುವ ಜನ್ಮಾಂತರಾ | ಒರಟು ಮಾತಿನ ಲು | ಬ್ಧ ನರನ ತರಹೇಳಿದಾ || ಹರಿಕಥಾಮೃತ ಉಪ | ಚಾರಕಾಗಿ ಕೇಳುವಾ | ಪರನಾರೇರಾಳುವ | ದುರುಳನ ತರಹೇಳಿದಾ || ಗುರುಹಿರಿಯರೊಳು ಸೀ | ಚೋತ್ತರವನು ಕೊಡುವಾ ||”೧ ಸಮಾಜದಲ್ಲಿ ಹರಿಸಂಕೀರ್ತನೆಯನ್ನು ಸರಿಯಾಗಿ ಮಾಡುವವರನ್ನು ನಿಂದಿಸುವ ನಿಂದಕರಿದ್ದರು. ಒರಟು ಮಾತಿನ ಶಿಷ್ಟರು, ಹರಿಕಥಾಮೃತವನ್ನು ಉಪಚಾರಕ್ಕಾಗಿ ಕೇಳುವ ಪ್ರತಿಷ್ಠಿತರು, ಪರನಾರಿಯರನ್ನು ಆಳುವ ದುರುಳರು, ಗುರುಹಿರಿಯರಿಗೆ ಪ್ರತ್ಯುತ್ತರವನ್ನು ಕೊಡುವ ದುಷ್ಟರು ಇದ್ದ ಮೂಲಕ ಸಮಾಜಸ್ಥಿತಿಯು ಸರಿಯಾಗಿರಲಿಲ್ಲ. ಹರಿದಾಸರನ್ನೂ ಹರಿಭಕ್ತರನ್ನೂ ಆದರಪೂರ್ವಕವಾಗಿ ಕರೆದು ಅನ್ನದಾನ ಮಾಡುವ ರೀತಿಯಾದರೂ ಜನರಿಗೆ ತಿಳಿಯಬಾರದೇ !

ಜನರು ಸತ್ಸಂಗತಿಯಲ್ಲಿ ಕಾಲಕಳೆಯುತ್ತಿದ್ದಿಲ್ಲ ಎಂಬುದು ಕೆಳಗಿನ ನುಡಿಯಿಂದ ತಿಳಿದು ಬರುವದು. “ಸಾಧು ಸಮಾಗಮ ಸಚ್ಛಾಸ್ತ್ರ ಶ್ರವಣಾದಿಗಳಿಲ್ಲವೆ ಕೆಡುವೆ ||” “ಸಾಸಿರ ನಾಮದಿ ತುಲಸೀ ಕುಸುಮವ ಶ್ರೀಶನಿಗರ್ಪಿಸಲಿಲ್ಲಾ ||”೨ ಶಾಸ್ತ್ರಗಳನ್ನು ಕೇಳುವವರಿಲ್ಲ, ವಿಷ್ಣು ಸಹಸ್ರ ನಾಮವನ್ನು ಪಠಿಸುತ್ತ, ತುಲಸೀ ಕುಸುಮವನ್ನು ಹರಿಗೆ ಏರಿಸಲಿಲ್ಲ. ಇದರಿಂದ ಸದಾಚರಣೆಯು ಲಯವಾಗುತ್ತ ನಡೆದಿತ್ತು. ಇಂಥ ಅನೇಕ ಮಾತುಗಳನ್ನು ದಾಸರು ಹೇಳಿದ್ದಾರೆ. ಅವುಗಳಲ್ಲಿ ಕೆಲವನ್ನು ಕೆಳಗೆ ಕಾಣಬಹುದು—

“ಸ್ನಾನ ಸಂಧ್ಯಾವಂದನೆ ಸಚ್ಛೀಲಾದಿ | ಧ್ಯಾನ ಮೌನವ ಹಿಡಿಸೀ |
ದಾನಧರ್ಮ ಕೈವಲ್ಯದಾರೆಂದು ನಿ | ದಾನ ತುಷ್ಟಿಯ ಬಡಿಸೀ |
ತಾನರಕ್ಷಣ ಸ್ವಸ್ಥವಿರದೆಲ್ಲಾ | ಹಾನಿ ಮಾಡಿತು ಚಿತ್ತವ ಕೆಡಿಸೀ ||
ಸಾಲಂಕೃತ ಬಾಲನನೋಯಿದಡವಿಲಿ ಕೊಲ್ವ | ಆಲಯದ
ಕಳ್ಳನಂತೆ ||”೩

---

೧. ಪ್ರಬಂಧ ಪದ ಸಂಖ್ಯೆ ೧೬೯ ನುಡಿ ೧, ೨, ೩, ೪.
೨. ,, ,, ೧೪೪ ನುಡಿ ೮—೨
೩. ,, ,, ೧೦೦ ನುಡಿ ೧, ೨

ಜನರು ಮನಬಂದಂತೆ ನಡೆಯುತ್ತಿದ್ದರೆಂಬುದಕ್ಕೆ ಮೇಲಿನ ನುಡಿಯೇ ಆಧಾರವಾಗಿದೆ. ಸ್ನಾನ, ಸಂಧ್ಯಾವಂದನೆ, ಧ್ಯಾನ, ದಾನ, ಧರ್ಮವೆಲ್ಲವನ್ನು ಬಿಟ್ಟಿದ್ದರು. ಸಾಲಂಕೃತವಾದ ಬಾಲಕನನ್ನು ಮನೆಯ ಕಳ್ಳನೇ ಅಡವಿಗೆ ತೆಗೆದುಕೊಂಡು ಹೋಗಿ ಹೇಗೆ ಕೊಲ್ಲುವನೋ ಅದೇ ಪ್ರಕಾರವಾಗಿ, ಈ ಸುಂದರವಾದ ಹಾಗೂ ಹರಿಯ ಸೇವೆಯಲ್ಲಿ ನಿರತವಾಗಿರತಕ್ಕ ದೇಹವೆಂಬ ಮನೆಯಲ್ಲಿದ್ದ ಮನವೆಂಬ ಮನೆಗಳ್ಳನು ಬುದ್ಧಿರೂಪವಾದ ಬಾಲಕನನ್ನು ಕೊಲ್ಲುತ್ತಾನೆಂದು ದಾಸರ ಮತ.

"ಸಾಧ್ಯವಲ್ಲದುದನ್ನು ಹಂಬಲಿಸಿ । ಬುದ್ಧಿಭ್ರಾಂತಿಲಿ ಬಲು ಸುಖ ಬಯಸೀ॥"೧ ಅಸಾಧ್ಯವಾದ ವಸ್ತುವನ್ನು ಬಯಸಿ, ಅದನ್ನು ದೊರಕಿಸುವದಕ್ಕೆ ನಾನಾ ಪ್ರಕಾರವಾಗಿ ಕಷ್ಟಪಡುವದು, ಅದು ದೊರೆಯದಿದ್ದರೆ, ಬುದ್ಧಿ ಭ್ರಮಣವಾಗುವದು ಜನರಲ್ಲಿ ಕಂಡುಬರುವದು.

"ವಿತ್ತವಿದ್ದರೆ ಸಹೋದರರಿತ್ತ ಬನ್ನಿ ಉಣ್ಣೆಂಬರು ॥"೨ "ಹಣವಿದ್ದರೇ ಗುಣವಂತ" ಎಂಬ ನುಡಿಯು ಕೇವಲ ಮಾತಿನಲ್ಲಿರನೆ, ಪ್ರಸನ್ನ ವೆಂಕಟರ ಕಾಲದಲ್ಲಿಯೂ ಪ್ರತ್ಯಕ್ಷ ವ್ಯವಹಾರದಲ್ಲಿತ್ತೆಂದು ಕಾಣುತ್ತವೆ. "ದಶ ಜಪ ಮಾಡಲಾಗದವಗೆ ಮುಸುಕಿನ ಜಂಭವ್ಯಾಕೆ ।"೩ ಗಾಯತ್ರಿ ಜಪವನ್ನು ಕೂಡ ಮಾಡದವರು ಮುಸುಕು ಹಾಕಿಕೊಂಡು ಜಪಮಾಡುವ ಡಾಂಭಿಕರು ಸಮಾಜದಲ್ಲಿದ್ದರೆಂದು ತೋರುತ್ತದೆ. "ಕದ್ದು ಹೊಟ್ಟೆ ಹೊರೆವಗೆ ಸಿದ್ಧಶೀಲ ಕೃತ್ಯಾತಕೆ"೪ ಕದಿಯುವದು ಮತ್ತು ಮೇಲೆ ಮೇಲೆ ಶೀಲ ಶೀಲವೆಂದು ಜಂಭ ಕೊಚ್ಚಿಕೊಳ್ಳುವದು. ಇಂಥ ನಡತೆ ಎಡಬಿಡದೆ ನಡೆದಿತ್ತೆಂದು ಹೇಳಬಹುದು. "ಕಂಡ ನಾರಿಯರ ಬಯಸುವ ಲಂಡಗೆ ಪುರಾಣವ್ಯಾಕೆ"೫ ಕೆಲವು ಜನರು ಕಂಡ ಕಂಡ ನಾರಿಯರ ಸಹವಾಸ ಬೆಳೆಸಿ ಮತ್ತೆ ಪುರಾಣ ಕೇಳುವದಕ್ಕೋಸ್ಕರ

---

೧. ಪ್ರಬಂಧ ಪದಸಂಖ್ಯೆ ೧೦೭ ನುಡಿ ೧

೨. ಕೌಜಲಗಿ ಬಂಡೇರಾಯರು ಪ್ರ. ವೆಂ. ಕೀ. ಭಾಗ ೧ ಪುಟ ೯೫ ಪದ ೧೨ ನುಡಿ ೪

೩, ,, ,, ಭಾಗ ೧ ಪುಟ ೫೬ ಪದ ೫೧ ನುಡಿ ೩

೪. ,, ,, ,, ನುಡಿ ೪

೫. ,, ,, ಪುಟ ೫೧ ಪದ ೫೧ ನುಡಿ ೫

ಪುರಾಣಿಕರ ಸಾನ್ನಿಧ್ಯವನ್ನು ಬಯಸುತ್ತಿದ್ದರು. ಇಲ್ಲವೆ ನಾರಿಯರನ್ನು ಬಯಸಿ, ಪುರಾಣದ ನೆವದಲ್ಲಿ ಅವರನ್ನು ನೋಡಲು ಹೋಗುತ್ತಿದ್ದರು.

"ಇಂದುಮುಖಿಯಳ ಸಂಗ ಎನಗಿಂದು ಕೈಗೂಡ । ಲೆಂದೊಬ್ಬ
ಕುಂಟಣಿಗೆ ಧನವಿತ್ತು ॥"೧

ಪರಸ್ತ್ರೀ ಸಂಗವನ್ನು ಬಯಸಿ, ಅವಳನ್ನು ವಶಪಡಿಸಿಕೊಳ್ಳುವದಕ್ಕೋಸ್ಕರ ಕುಂಟಣಿಗೆ ಹಣ ಕೊಡುವುದು ಸಮಾಜದಲ್ಲಿ ರೂಢವಾಗಿತ್ತೆಂದು ದಾಸರು ಹೇಳುತ್ತಾರೆ.

"ಚಿಕ್ಕಬಲೆಯರ ಕಂಡು ಚಂಚಲಿತನಾಗ್ಯವರ । ವಕ್ರನೋಟದಿ ಹಲವು ಸನ್ನೆಯಿಂದ, ತಕ್ಕೈಸಬೇಕೆಂಬ ಲಂಪಟದಿ "೨ ಸ್ತ್ರೀವ್ಯಾಮೋಹವು ದಾಸರ ಕಾಲದಲ್ಲಿ ಯುವಕರಲ್ಲಿ ಹೆಚ್ಚಾಗಿತ್ತೆಂದು ಈ ನುಡಿಯಿಂದ ತಿಳಿದುಕೊಳ್ಳಬಹುದಾಗಿದೆ.

"ಹೊಲೆಯ ಹೊಲತಿ ಇವರವರಲ್ಲ । ಹೊಲಗೇರಿಯೊಳು ಹೊಲೆಯ
ಹೊಲತಿಲ್ಲ ॥"೩

ಶ್ರೀಪುರಂದರದಾಸರ, ಕನಕದಾಸರ ಕಾಲದಲ್ಲಿದ್ದಂತೆ ಪ್ರಸನ್ನ ವೆಂಕಟರ ಕಾಲದಲ್ಲಿಯೂ ಕೂಡ ಹೊಲತಿ ಹೊಲೆಯರಿಗೋಸ್ಕರ ಬೇರೆ ಕೇರಿಯೊಂದನ್ನು ಮಾಡಿಕೊಟ್ಟು, ಅವರನ್ನು ಸಮಾಜದಿಂದ ಬೇರೆಯಾಗಿಟ್ಟಿದ್ದರು. ಏಕೆಂದರೆ ಅವರು ಹೀನರು, ನೀಚವೃತ್ತಿಯವರು, ಮತ್ತು ಕಪ್ಪು ತಿನ್ನುವವರು. ಆದರೆ ಶ್ರೀ ಪ್ರಸನ್ನ ವೆಂಕಟದಾಸರ ಅಭಿಪ್ರಾಯದಲ್ಲಿ ಹೊಲಗೇರಿಯ ಹೊಲೆಯರಿಗಿಂತ ಸಮಾಜದಲ್ಲಿದ್ದ ದುರ್ಮಾರ್ಗಿಗಳೂ, ದುರಾಚಾರಿಗಳೂ ನಿಜವಾದ ಹೊಲೆಯ ಹೊಲತಿಯರು. ಇದೇ ಅಭಿಪ್ರಾಯವು ಬಸವಣ್ಣನವರ ವಚನಗಳಲ್ಲಿಯೂ ಕಂಡುಬರುವದು. "ಹುಸಿ ನುಡಿಯುವನೆ ಹೊಲೆಯ, ಹೊಲಸು ತಿಂಬುವನೆ ಹೊಲೆಯ." ಇಂಥ ಜನರು ಸಮಾಜದಲ್ಲಿದ್ದು, ಸಮಾಜವನ್ನು ದುರ್ಮಾರ್ಗಕ್ಕೆ ಎಳೆದು ಅದನ್ನು ಭ್ರಷ್ಟ

---

೧. ಕೌಜಲಗಿ ಬಂಡೇರಾಯರು ಪ್ರ. ವೆಂ, ಕೀ, ಪುಟ ೬೨ ಪದ ೫೬ ನುಡಿ ೨
೨. ,, ,, ಪುಟ ೬೨ ಪದ ೫೬ ನುಡಿ ೩
೩. ,, ,, ಪುಟ ೭೯ ಪದ ೬೩ ಪಲ್ಲ

ಮಾಡುವ ಉದ್ಯೋಗದಲ್ಲಿದ್ದರು.

ಈ ಮೇಲೆ ವಿವರಿಸಿದ ಪ್ರಸನ್ನ ವೆಂಕಟದಾಸರ ಪದಗಳಿಂದ ಅವರ ಕಾಲದಲ್ಲಿ ಸಮಾಜದ ರೀತಿ ನಡತೆಗಳು ಸರಿಯಾಗಿರಲಿಲ್ಲ. ಮತ್ತು ನೀತಿ ನಿಯಮಗಳ ಬಂಧನಗಳು ಸಡಿಲಾಗುತ್ತ ನಡೆದಿದ್ದವೆಂದು ಸ್ಪಷ್ಟವಾಗಿ ತೋರುತ್ತದೆ.

೪. **ಸಂಪ್ರದಾಯ:**— ಊರು ಇದ್ದಲ್ಲಿ ಹನುಮನ ಗುಡಿಯಿದ್ದಂತೆ ಸಮಾಜವೆಂದ ಬಳಿಕ ಕೆಲವು ಸಂಪ್ರದಾಯಗಳು ಇದ್ದೇ ಇರುವವು. ತಮ್ಮ ಕಾಲದಲ್ಲಿದ್ದ ಸಂಪ್ರದಾಯಗಳನ್ನು ಪ್ರಸನ್ನ ವೆಂಕಟರು ತಮ್ಮ ಕೃತಿಗಳಲ್ಲಿ ತೋರಿಸಿದ್ದಾರೆ. ಅವನ್ನು ಇಲ್ಲಿ ಕೊಡಲಾಗಿದೆ.

"ಮುಡುಪಿನಾ ಕಪ್ಪಾವೆಣಿಸಿಕೊಂಬಾನು"೧ ಸಮಾಜದಲ್ಲಿ ಸಂಪ್ರದಾಯ ಬೆಳೆದಂತೆ ಗಿರಿಯಲ್ಲಿ ಮುಡುಪು ತಲೆಯೆತ್ತಿದೆ. ಮುಡುಪು ಎಂದರೆ, ದೇವರಿಗೆ ಕೊಡುವ ಕಾಣಿಕೆ. ಮುಡುಪು ಕೊಡುವವರೇ ಸೋಲುವರು ವಿನಾ ವೆಂಕಟರಮಣನು ಸೋಲನು ಎಂದು ಕಾಣುತ್ತದೆ. ಪ್ರಸನ್ನ ವೆಂಕಟರ ಕಾಲದಲ್ಲಿಯೂ ತಿರುಪತಿಯ ವೆಂಕಟೇಶ ದೇವರಿಗೆ ಮುಡುಪು ಹಾಕುವ ಪದ್ಧತಿಯು ಪ್ರಚಾರದಲ್ಲಿತ್ತೆಂದು ದಾಸರ ಮೇಲಿನ ನುಡಿಯಿಂದ ತಿಳಿಯುತ್ತದೆ.

"ದ್ರಾವಿಡ ವೀರನೆ ಗತಿಯೆನಗೆ"೨ "ವೀರ ದ್ರಾವಿಡ ವೆಂಕಟಯ್ಯಾ"೩ ಗಿರಿಯ ವೆಂಕಟರಮಣನು ದ್ರಾವಿಡ ದೇಶದಲ್ಲಿ ನೆಲೆಸಿದನು. ಆದ್ದರಿಂದ ದ್ರಾವಿಡ ದೇಶಕ್ಕೆ ಒಡೆಯನು. ಅಂದಬಳಿಕ ದ್ರಾವಿಡರಿಗೆ ಒಡೆಯನಾದ ಕಾರಣವೇ ದ್ರಾವಿಡರು ಆತನಿಗೆ ನಡೆದುಕೊಳ್ಳುತ್ತಾ ಬಂದಿದ್ದಾರೆ.

"ನಾ ತಿರುಗಿ ಬಂದ ದೇಶ । ಐವತ್ತಾರು ಸೊಲ್ಲಾಲ್ಲೆ ॥೪" ಕವಿಗಳು ಯಾವ ಪ್ರಕಾರ ಮಹಾ ಕಾವ್ಯ ಬರೆಯಲು ಹೊರಟು ಹದಿನೆಂಟು ಪ್ರಕಾರದ ವರ್ಣನೆಗಳ ಸಂಪ್ರದಾಯಕ್ಕೆ ಶರಣು ಹೋದರೋ, ಅದೇ ಪ್ರಕಾರ ದಾಸರೂ

---

೧. ಪ್ರಬಂಧ ಪದಸಂಖ್ಯೆ ೧೨೭ ನುಡಿ ೧೧
೨. ,, ೧೨೭ ನುಡಿ ೨೧
೩. ,, ೧೮೯ ಭಾಗ ೨೨ ನುಡಿ ೨
೪. ,, ೧೮೯ ಭಾಗ ೧೭ ನುಡಿ ೧

ಐವತ್ತಾರು ದೇಶದ ವರ್ಣನೆಯು ಸಂಪ್ರದಾಯಕ್ಕೆ ಶರಣುಹೋದರೆಂದು ಕಾಣುತ್ತದೆ. ಈ ವರ್ಣನೆಯನ್ನು ಪುರಂದರದಾಸರಲ್ಲಿಯೂ ಕನಕದಾಸರಲ್ಲಿಯೂ ಕಾಣುತ್ತೇವೆ. ಅದೇ ಪ್ರಕಾರ ಶ್ರೀಪ್ರಸನ್ನ ವೆಂಕಟದಾಸರಲ್ಲಿಯೂ ಈ ವರ್ಣನೆಯನ್ನು ಕಾಣುತ್ತೇವೆ. ಇದರಲ್ಲಿ ಮಹಾರಾಷ್ಟ್ರದ ವರ್ಣನೆಯು ಬಂದಿದೆ.೧

೫. **ವೇಷಭೂಷಣ** :— ಪ್ರಸನ್ನ ವೆಂಕಟದಾಸರ ಕೃತಿಗಳ ಮೇಲಿಂದ ಆ ಕಾಲದ ಜನರ ಕೆಲವು ವೇಷಭೂಷಣಗಳು ತಿಳಿದುಬರುತ್ತವೆ. "ಮಂಜುಗಾವಿಯ ಶೀರಿ ನಿರಿವೆಗೆದು ಉಡುವುದು."೨ ಈ ನುಡಿಯು ಕೊರವಂಜಿಯ ವೇಷದ ಬಗ್ಗೆ ಇದೆ. ಈ ವರ್ಣನೆಯಿಂದ ದ್ರಾವಿಡ ದೇಶದ ಸ್ತ್ರೀಯರ ವೇಷವು ಪ್ರಸನ್ನ ವೆಂಕಟರ ಕಾಲದಲ್ಲಿ ಹೇಗಿತ್ತೆಂಬುದು ಗೊತ್ತಾಗುತ್ತದೆ. ಹೆಣ್ಣುಮಕ್ಕಳು ಶೀರೆಯನ್ನು ಮುಂದಿನ ನಿರಿಗೆಗಳನ್ನು ಮುಂದೆ ಮಾಡಿ ಎದ್ದು ಕಾಣುವಂತೆ ಉಡುತ್ತಿದ್ದರು. ಮತ್ತು ಮಂಜು 'ಕ್ಯಾವಿ'ಯ (ಕೇವೆ) ಬಣ್ಣದ ಶೀರೆಯನ್ನು ವಿಶೇಷವಾಗಿ ಧರಿಸುತ್ತಿದ್ದರು. ಈಗ ಪ್ರಚಾರದಲ್ಲಿದ್ದ ಹಳ್ಳಿಯ ಆಟಗಳಲ್ಲಿ ವಿಶೇಷವಾಗಿ ಕೃಷ್ಣಪಾರಿಜಾತದಲ್ಲಿ ನಿರಿಗೆಗಳನ್ನು ತೆಗೆದು ಉಡುವ ಪದ್ಧತಿಯು ಇದೆ. ಆದರೆ ಕೇವೆಯ ಬಣ್ಣದ ಶೀರೆಯು ಮಾತ್ರ ಪ್ರಚಾರದಲ್ಲಿಲ್ಲ.

"ಕಂಚೂಕ ಪುಟ ಬಿಗಿದುಪ್ಪೇರಿದ ಕಟ್ಟು"೩ ಈ ನುಡಿಯಿಂದ ಕುಪ್ಪಸವನ್ನು ಆ ಕಾಲದಲ್ಲಿ ಯಾವ ರೀತಿಯಿಂದ ಧರಿಸುತ್ತಿದ್ದರೆಂಬುದು ತಿಳಿಯುತ್ತದೆ. ಕುಪ್ಪಸದ ಕೆಳಗಿನ ಕಟ್ಟನ್ನು ಹೆಚ್ಚು ಬಿಗಿದು ಕಟ್ಟುತ್ತಿದ್ದರು. ಆದರಿಂದ ಮುಂದಿನ ಭಾಗವು ಏರಿ ಬಂದು, ಒಂದು ಪ್ರಕಾರದ ಸೊಬಗನ್ನು ಕೊಡುತ್ತಿತ್ತು.

---

೧. ಕನಕದಾಸರ ಕೃತಿಗಳಲ್ಲಿ ಮಹಾರಾಷ್ಟ್ರದ ಹೆಸರು ಬಂದಿಲ್ಲ. ಇದರ ಬಗ್ಗೆ ಪ್ರಸನ್ನ ವೆಂಕಟರ ಕೃತಿಗಳಲ್ಲಿ ಬರುವ ಕಾರಣವೆಂದರೆ, ಇವರ ಸಂಬಂಧ ಮಹಾರಾಷ್ಟ್ರದ ಮರಾಟರ ಕೂಡ ವಿಶೇಷವಿತ್ತು. ಇವರು ಇದ್ದ ಬಾಗಲಕೋಟೆಯು ಆಗ ಮಹಾರಾಷ್ಟ್ರದ ಆಡಳಿತದಲ್ಲಿತ್ತು. ಮೇಲಾಗಿ ಇವರಿಗೆ ದೊರೆತ ವರ್ಷಾಶನ, ಉಂಬಳಿಗಳು ಮಹಾರಾಷ್ಟ್ರದ ಸರದಾರರಿಂದ ಕೆಲವು ದೊರೆತಿವೆ. ಮತ್ತು ಅವು ಮರಾಠಿಯಲ್ಲಿವೆ. ಪರಿಶಿಷ್ಟ ೭, ೮, ೧೦.

೨. ಪ್ರಬಂಧ ಪದ ಸಂಖ್ಯೆ ೧೮೫ ಭಾಗ ೪

೩. ,, ,, ,,

"ಓರೆ ತುರುಬೀನ ಕಟ್ಟು"೧ ಹೆಣ್ಣುಮಕ್ಕಳು ತಮ್ಮ ಕೇಶಪಾಶವನ್ನು ಕುತ್ತಿಗೆಯ ಮಧ್ಯದಲ್ಲಿ ಕಟ್ಟುತ್ತಿದ್ದಿಲ್ಲ. ಅದನ್ನು ಸ್ವಲ್ಪ ಓರೆಯಾಗಿ ಕಟ್ಟುತ್ತಿದ್ದರೆಂದು ಕಾಣುತ್ತದೆ. ಹಾಗೆ ಕಟ್ಟುವದು ಸೌಂದರ್ಯದ ಕಲ್ಪನೆಯಾಗಿರಬೇಕು. "ಉತ್ತರೀಯ"೨ ಸ್ತ್ರೀಯರು ಮೇಲು ಹೊದಿಕೆಯನ್ನು ಧರಿಸುತ್ತಿದ್ದರು. ಏಕೆಂದರೆ ಅದರಿಂದ ಶರೀರವು ಮುಚ್ಚಲ್ಪಡುತ್ತಿದೆ.

೬. **ಆಭರಣಗಳು:**—"ತಿಗುರಿದ ಗಂಧ ಚಳ್ಳುಗುರಿನ ನಾಮಾ"೩ ಸ್ತ್ರೀಯರು ಗಂಧವನ್ನು ತೀಡಿ ಕಿರಿಬೆರಳಿನಿಂದ ಹಚ್ಚುತ್ತಿದ್ದರು. "ಪಂಜೆನೋಲೆ" "ವಜ್ರದೋಲೆ"೪ ಕಿವಿಯಲ್ಲಿ ಅಗಲವಾದ ಬೆಲೆಯುಳ್ಳ ವಜ್ರದ ಓಲೆಗಳನ್ನು ಧರಿಸುತ್ತಿದ್ದರು. ಇದೊಂದು ಸೌಂದರ್ಯದ ಸಾಧನವೆಂದು ಹೇಳಬಹುದು. "ಮೂಗುತಿ"೫ ಮೂಗಿನಲ್ಲಿ ಮೂಗುತಿಯನ್ನು ಧರಿಸುತ್ತಿದ್ದರು. "ಕೊರಳಲ್ಲಿ ಮುತ್ತಿನಹಾರ ಶ್ರೋಣಿ ಮುಟ್ಟುವ ಮಣಿಮಾಲಿಕೆ"೬ ಕೊರಳಲ್ಲಿ ಸ್ತ್ರೀಯರು ಮುತ್ತಿನ ಹಾರವನ್ನು ಧರಿಸುತ್ತಿದ್ದರು. ಮತ್ತು ಮಣಿಗಳ ಹಾರವು ನಿತಂಬದವರೆಗೆ ನೇತಾಡುತ್ತಿತ್ತು. ಇಲ್ಲಿ ಶ್ರೀಮಂತಿಕೆಯ ಹೊಳಪಿದೆ. ಹೆಣ್ಣುಮಕ್ಕಳು "ಬುಗುಡೆ ಚಳತುಂಬ" ನೀಲ, ಪಚ್ಚ, ಪದ್ಮರಾಗ, 'ಹೀರ ಮುತ್ತಿನ ಪೆಂಡೆ' ಮುಂತಾದ ಆಭರಣಗಳನ್ನು ಕಿವಿಯಲ್ಲಿ ಧರಿಸುತ್ತಿದ್ದರು.೭ ಹೆಣ್ಣುಮಕ್ಕಳು ಟೊಂಕದಲ್ಲಿ 'ಕಾಂಚೀದಾಮ' ವನ್ನು ಇಟ್ಟು, ಪಾದದಲ್ಲಿ "ಕಾಲಂದುಗೆ"ಯನ್ನು ಧರಿಸಿ, ಕಾಲ್ಬೆರಳಿನಲ್ಲಿ ಕಿರಿಪಿಲ್ಲೆಯನ್ನು ಇಡುತ್ತಿದ್ದರು. ಬಾಹುಗಳಲ್ಲಿ "ತೋಳಬಂದಿ" ಎಂಬ ಬಾಹುಭೂಷಣಗಳನ್ನು ಧರಿಸುತ್ತಿದ್ದರು.೮

ಶ್ರೀಪ್ರಸನ್ನವೆಂಕಟದಾಸರು ಆ ಕಾಲದ ಸೈನಿಕರ ವರ್ಣನೆಯನ್ನು ಮಾಡಿದ್ದಾರೆ. "ಹಿಡಿದೇಜಿ ಕಂಚುಕ" ಇವು ಸೈನಿಕರ ರೂಪರೇಷೆಯನ್ನು

---

೧. ಪ್ರಬಂಧ ಪದಸಂಖ್ಯೆ ೧೮೯ ಭಾಗ ೪ ನುಡಿ ೨

೨. ,, ೧೮೯ ಭಾಗ ೧ ನುಡಿ ೧

೩. ,, ೧೮೯ ಭಾಗ ೬ ನುಡಿ ೨

೪-೫. ,, ೧೮೯ ಭಾಗ ೪, ೧೯ ನುಡಿ ೨

೬. ,, ೧೮೯ ಭಾಗ ೮ ನುಡಿ ೩-೪

೭. ,, ೧೮೯ ಭಾಗ ೧೯ ನುಡಿ ೧

೮. ,, ,, ,,

ಕೊಡುತ್ತವೆ. ಸೈನಿಕರು 'ತೇಜಿ' (ಕುದುರೆ)ಯ ಮೇಲೆ ಕುಳಿತಾಗ ತಮ್ಮ ಮೈಯಲ್ಲಿ ಕಂಚುಕ (ಚಿಲಕತ್ತು) ವನ್ನು ಧರಿಸುತ್ತಿದ್ದರು.೧

ಪ್ರಸನ್ನ ವೆಂಕಟದಾಸರ ಕಾಲದಲ್ಲಿ ದೇವರಿಗೆ ಯಾವ ಪ್ರಕಾರದ ಆಭರಣ, ಅಲಂಕಾರವನ್ನು ಮಾಡುತ್ತಿದ್ದರೆಂಬುದು ಅವರ ಕೃತಿಗಳಿಂದ ತಿಳಿಯುತ್ತದೆ. ಆ ಕಾಲದಲ್ಲಿ 'ಕೇಯೂರ, ಕೌಸ್ತುಭ, ಕಂಕಣ, ಮುದ್ರಿಕೆ, ಕೀಲು ಕಡಗಾ, ವಡ್ಯಾಣ । ಅಣಘಂಟೆ (ಸಣ್ಣ ಗೆಜ್ಜೆ), ವೈಜಯಂತೀಹಾರ, ಕಾಲಿನಲ್ಲಿ ಸರಪಳಿ ಮುಂತಾದವುಗಳನ್ನು ದೇವರಿಗೆ ಅಲಂಕರಿಸುವದಕ್ಕಾಗಿ ಉಪಯೋಗಿಸುತ್ತಿದ್ದರು.೨ ಪ್ರಸನ್ನ ವೆಂಕಟರು ಸಾಮಾನ್ಯ ಪುರುಷರ ವೇಷ ಭೂಷಣಗಳನ್ನು ವರ್ಣಿಸಿದ್ದು ಕಂಡುಬಂದಿಲ್ಲ.

೬. **ಊಟದ ಪದಾರ್ಥಗಳು**:— ಪ್ರಸನ್ನ ವೆಂಕಟರ ಕೃತಿಗಳಲ್ಲಿ ಆ ಕಾಲದ ಕೆಲವು ಊಟದ ಪದಾರ್ಥಗಳು ವರ್ಣಿತವಾಗಿದೆ. ಅವು ಬಡವರ ಜನಸಾಮಾನ್ಯರ ನಿತ್ಯದ ಊಟದ ಪದಾರ್ಥಗಳಾಗಿರದೆ, ಸಿರಿವಂತರು ವಿಶೇಷ ಪ್ರಸಂಗದಲ್ಲಿ ಉಪಯೋಗಿಸುವ ಪದಾರ್ಥಗಳಾಗಿವೆ. "ಹಾಲು ಶಾಲ್ಯೋದನ" ಅತಿಥಿಗಳಿಗೆ ಸ್ವಾಗತವನ್ನು ಬಯಸಿ, ಅವರಿಗೆ ಮೃಷ್ಟಾನ್ನವನ್ನು ಕೊಡಬಯಸಿ ಹಾಲು ಮಿಶ್ರಿತವಾದ ಅನ್ನವನ್ನು ( ಪಾಯಸ ) ಕೊಡುವ ವಾಡಿಕೆ ಇತ್ತೆಂದು ತಿಳಿದು ಬರುತ್ತದೆ. "ಪುಳಿ" (ಹುಳಿ) ಯನ್ನು ನಿತ್ಯದ ಊಟಕ್ಕೆ ಉಪಯೋಗಿಸುತ್ತಿದ್ದರು. "ಮಧುಮಿಶ್ರ ಪಲಸು" ಹಲಸಿನ ಹಣ್ಣಿನಲ್ಲಿ ಜೇನುತುಪ್ಪವನ್ನು ಮಿಶ್ರಮಾಡಿ ಸಿರಿವಂತರು ತಿನ್ನುತ್ತಿದ್ದರು.

"ಪಾಲಿನ ದೋಸೆ" ಹಾಲು ಮಿಶ್ರಿತವಾದ ದೋಸೆಯನ್ನು ಮಾಡುವ ಪದ್ಧತಿಯು ಕಂಡುಬರುವದು. ಇದನ್ನು ಸಿದ್ಧಗೊಳಿಸುವ ಪದ್ಧತಿಯು ಹೀಗಿದೆ— ಒಂದು ಪಾತ್ರೆಯಲ್ಲಿ ಹಾಲು, ಸಕ್ಕರೆ, ಏಲಕ್ಕಿಯನ್ನು ಹಾಕಿ ಇಟ್ಟು ಬಿಟ್ಟು, ದೋಸೆಯಾದ ಕೂಡಲೆ ಅದನ್ನು ಈ ಹಾಲಿನ ಮಿಶ್ರಣದಲ್ಲಿ ಇಡುತ್ತಾರೆ. ಬಳಿಕ ದೋಸೆಯು ಹಾಲನ್ನು ಹೀರಿಕೊಳ್ಳುತ್ತದೆ. ಆದರಿಂದ ಒಂದು ತರದ ರುಚಿಯು ಹುಟ್ಟುವದು.

---

೧. ಕೌಜಲಗಿ ಬಂಡೇರಾಯರು: ಪ್ರ. ವೆಂ. ಕೀ. ಭಾಗ ೧ ಪುಟ ೮೩ ಪದ ೬೬ ನು. ೨

೨. ಪ್ರಬಂಧ ಪದ ಸಂಖ್ಯೆ ೧೨೭ ನುಡಿ ೧೩, ೧೪ ಮತ್ತು ಪ್ರ. ಸಂ. ೧೨೦ ನುಡಿ ೩

"ಪಲವು ಪರಿಯ ಘೃತ" ಎನ್ನೆ, ಆಕಳು, ಜೇನ್ನೊಣಗಳ ತುಪ್ಪವನ್ನು ಉಪಯೋಗಿಸುತ್ತಿದ್ದರೆಂದು ಕಾಣುತ್ತಿದೆ.

"ವೃಷ್ಟೋದನ ಭಕ್ಷ ಪಾಯಸಾಜ್ಯ ಕ್ಷೀರವು । ಯ
ಥೇಷ್ಟ ಶಾಕ ಪಪ್ಪಡ ಪಳಿದ್ಯಾ ದಧಿ ವ್ಯಂಜನವು ||"೧

"ಪಂಚಾಮೃತ ಪಾಲ" ಆಕಳ ಮೊಸರು, ತುಪ್ಪ, ಮಧು, ಬಾಳೆಯ ಹಣ್ಣು ಮತ್ತು ಸಕ್ಕರೆ ಈ ಐದು ಪದಾರ್ಥಗಳನ್ನು ಒಂದೆಡೆ ಸೇರಿಸುತ್ತಾರೆ. ಅದೇ ಪಂಚಾಮೃತವು. "ಶಾವಿಗೆ" ಬಟ್ಟವಿ, ಪೊಂಗಲು (ಹುಗ್ಗಿ) ಇವು ಕೂಡ ಉಪಯೋಗದಲ್ಲಿದ್ದವು.

೭. **ಆಟಪಾಟಗಳು:**— ಪ್ರಸನ್ನ ವೆಂಕಟದಾಸರು ತಮ್ಮ ಕಾಲದಲ್ಲಿಯ ಬಾಲಕರು ಆಡುವ ಆಟಗಳನ್ನೇ ಕೃಷ್ಣನು ಆಡಿದನೆಂದು ವರ್ಣನೆಮಾಡಿದ್ದಾರೆ. ಕಣ್ಣು ಮುಂದಿದ್ದ ವಸ್ತುಗಳನ್ನೇ ಮೇಲಿಂದ ಮೇಲೆ ಮನುಷ್ಯನು ವರ್ಣಿಸುತ್ತಾನೆ.

"ಚಿಣ್ಣಿ ಬೊಗರೆ ಚಂಡು ಗುಮುಗುಸುಕು ಹಿಡಿ । ಆಣೆ ಕಲ್ಲು ಹಲ್ಲೆ
ಗಜಗ ಘಲ್ಲೆ ||
ಕಣ್ಣು ಮುಚ್ಚಳ ಮರನೇರಾಟ ನೀರಾಟ । ಸಣ್ಣವರೊಳು ಸೋಲು
ಗೆಲುವಾ ಆಟಾ ||೨

"ಜಲಸೇತು ಬಂಧನದಾಟ ನಿಲಯನ । ಪಲಾಯನದಾಟ ಕಪಿ
ಪ್ಲವನ ||
ಕಲಹಂಸೋಚ್ಚರ ಅಳಿಗಳ ಝೇಂಕರ । ಗಿಳಿ ಶಿಖಿಯೋಚ್ಚರ
ಪಿಕೋಚ್ಚಾರ ||
ಗಜ ಸಿಂಹ ಗರ್ಜನೆ ಗೋ ವೃಷಭ ಗರ್ಜನೆ । ಸುಜಲದ ಘೋಷಣೆ
ಭೀಕರವ ||೩

ದಾಸರ ಕಾಲದಲ್ಲಿದ್ದ ಆಟಗಳು ಈ ಪದ್ಯದಲ್ಲಿ ಸ್ಪಷ್ಟವಾಗಿವೆ. ಬಿಡಿ ಪದಗಳಲ್ಲಿ ಈ ವರ್ಣನೆಯು ಕಂಡುಬರುವದು. ಆವರೆ ಭಾಗವತದಲ್ಲಿಯ

---

೧. ಪ್ರ. ವೆಂ. ಭಾಗವತ ಪದ ೩೫ ಪುಟ ೮೨ ನುಡಿ ೫

೨. ಪ್ರಬಂಧ ಪದ ಸಂಖ್ಯೆ ೧೪೮ ನುಡಿ ೩

೩. ಪ್ರ. ವೆಂ. ಭಾಗವತ ಪುಟ ೫೧ ನುಡಿ ೫—೬

ಆಟದ ವರ್ಣನೆಯು ಹೆಚ್ಚು ಸುಂದರವಾಗಿದೆ.

೮. **ಇತರ ವಿಷಯುಗಳು:**—ಇಲ್ಲಿಯ ವರೆಗೆ ವಿಶಿಷ್ಟ ವಿಷಯುಗಳನ್ನು ಆಯಾಯ ತಲೆಬರೆಹದ ಕೆಳಗೆ ಕೊಟ್ಟಂತಾಯಿತು. ಇನ್ನುಳಿದ ವಿಷಯುಗಳನ್ನು 'ಇತರ ವಿಷಯ' ಎಂಬ ತಲೆಬರೆಹದ ಕೆಳಗೆ ಕೊಟ್ಟಿದೆ. ಅವುಗಳಿಂದಲೂ ಆ ಕಾಲದ ಸಮಾಜ ಸ್ಥಿತಿಯು ತಿಳಿಯುವದು.

"ಸುಡು ನಂಬಲಿಬಾರದು ಸಂತೆಯವರಾ."೧ ಪ್ರಸನ್ನ ವೆಂಕಟರಿಗೆ ಇಲ್ಲವೆ ಬೇರೆ ಬೇರೆ ಜನರಿಗೆ ಸಂತೆಯಲ್ಲಿ ಹೋದಾಗ್ಗೆ ನೀಚರಿಂದ ಕೆಲವು ದುರ್ಘಟನೆಗಳು ಸಂಭವಿಸಿಗಬಹುದು. ಆದ್ದರಿಂದ ದಾಸರು ಮೇಲಿನಂತೆ ನುಡಿದಿದ್ದಾರೆ. ಸಂತೆಯಲ್ಲಿ ಎಲ್ಲ ಸ್ವಭಾವದ ಜನರೂ ಬರುವರು. ಸಜ್ಜನರೂ ಇರುವರು. ದುರ್ಜನರೂ ಇರುವರು. ಇಂಥವರು ಸಜ್ಜನರು, ಇಂಥವರು ದುರ್ಜನರು, ಇಂಥವರು ನೀಚರು ಎಂದು ತಿಳಿಯುವದು ಅಸಾಧ್ಯ. ವಿಶ್ವಾಸವಿಟ್ಟರೆ ಘಾತವಾಗುವ ಸಂಭವವಿರುವದರಿಂದಲೇ ಸಂತೆಯವರನ್ನು ನಂಬಬೇಡಿರಿ ಎಂಬ ನುಡಿಯು ಇಲ್ಲಿದೆ. "ಬುದ್ಧಿ, ಧೃತಿಯೆಂಬ ನಾರೇರು ಶ್ರೀ । ಮುದ್ದು ಕೃಷ್ಣನ ಒಲಿಸಿಕೊಂಡಾರು. ||"೨

ಸಮಾಜದಲ್ಲಿ ಒಂದು ಕಾಲಕ್ಕೆ ಬುದ್ಧಿ ಶ್ರೇಷ್ಠ ಮತ್ತು ಅದರಿಂದಲೇ ಕಾರ್ಯವು ಸಾಧ್ಯ ಎಂದು ವಾದವೆದ್ದಾಗ, ತದ್ವಿರುದ್ಧವಾಗಿ ಧೃತಿ ಶ್ರೇಷ್ಠ ಎಂದು ಕೆಲವರು ಮಾತೆತ್ತಿರಬಹುದು. ಆಗ ಪ್ರಸನ್ನ ವೆಂಕಟರು ಬುದ್ಧಿ ಮತ್ತು ಧೃತಿ ಇವುಗಳಿಂದಲೇ ಕಾರ್ಯ ಕೈಗೂಡುವದು. ಹರಿಯು ವಶವಾಗುವನು. ಎರಡರಿಂದಲೇ ಮೋಕ್ಷಸಾಧ್ಯವೆಂದು ಹೇಳಿರಬಹುದು.

"ಸಿದ್ಧಿ ಸೊಲ್ಲುವ ಗುರುಗಳುಂಟು ಧರೆಯೊಳಲ್ಲಿಗಲ್ಲಿ" ಪ್ರಸನ್ನ ವೆಂಕಟರ ಕಾಲದಲ್ಲಿ ಅಲ್ಲಲ್ಲಿ ಕೆಲವು ಸಿದ್ಧಪುರುಷರಿದ್ದರೆಂದು ತಿಳಿದರೂ ಅವರು ಯಾರು ಎಂಬುದು ನಿಶ್ಚಿತವಾಗಿ ತಿಳಿಯುವದಿಲ್ಲ. ಆದರೂ ಅವರ ಸಮಕಾಲೀನರಾದ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರೇ ಮೊದಲಾದವರು ಸಿದ್ಧಪುರುಷರೆಂದು ಅವರ ಕೃತಿಗಳ ಮೇಲಿಂದ ತಿಳಿಯಬಹುದು.

---

೧. ಪ್ರಬಂಧ ಪದ ಸಂಖ್ಯೆ ೮೫ ನುಡಿ ೨

೨. " " ೮೩ ಪಲ್ಲ

"ಛಪ್ಪನ್ನ ದೇಶಸ್ಥರು ಬಂದು ಸಮರ್ಪಣೆ ಮಾಡುವರು."೧ ಪ್ರಸನ್ನ ವೆಂಕಟರ ಕಾಲದಲ್ಲಿಯೂ ವೆಂಕಟಗಿರಿಯ ಮಹಾತ್ಮೆಯು ಎಲ್ಲ ಕಡೆಗೂ ಹಬ್ಬಿತ್ತು. ಮತ್ತು ಎಲ್ಲ ದೇಶಗಳಿಂದಲೂ ಜನರು ಗಿರಿಗೆ ವೆಂಕಟೇಶನನ್ನು ಭಜಿಸಲು ಬರುತ್ತಿದ್ದರು. "ಕೊಟ್ಟ ವಾಕ್ಯಕೆ ತಪ್ಪನು"೨ ಯಾರು ಭಕ್ತಿಭಾವ ದಿಂದ ವೆಂಕಟೇಶನನ್ನು ಭಜಿಸುವರೋ ಅವರ ಕಾರ್ಯವನ್ನು ವೆಂಕಟೇಶನು ಕೊನೆಗಾಣಿಸುವನು ಎಂಬ ಪ್ರತೀತಿಯು ಆಗಿನಿಂದಲೂ ಇತ್ತು. ಈಗಲೂ ಇದೆ. "ಕೊಲ್ಲಾಪುರದ ನಾಥೆ ಕೊಲ್ಲಾಪುರದ ಕನ್ನೆ"೩ ಕೊಲ್ಲಾಪುರದ ಲಕ್ಷ್ಮಿಯು (ಮಹಾ) ಕನ್ನಡಿಗರಿಗೆ ಚನ್ನಾಗಿ ಪರಿಚಿತಳಾಗಿದ್ದಳು. ಮತ್ತು ಆವಳ ಮೇಲೆ ಜನರ (ಕನ್ನಡಿಗರ) ಭಕ್ತಿ ವಿಶ್ವಾಸಗಳು ಇದ್ದುವೆಂದು ಕಾಣುತ್ತದೆ.

"ಎಡದ ತೋಳು ತೊಡೆ ಗಂಗಾಳು ಹಾರೊದೋಳತೇನೆ"೪ ದಾಸರ ಕಾಲದಲ್ಲಿ ಸಮಾಜವು ಶಕುನದ ಮೇಲೆ ವಿಶ್ವಾಸವಿಡುತ್ತಿತ್ತೆಂದು ತೋರುತ್ತದೆ. "ಬ್ರಾಹ್ಮರಾ ಕೇರಿಗೆ ಬಂದಳಾ ಕೊರವಿ"೫ ಪ್ರತಿಯೊಂದು ಪಟ್ಟಣದಲ್ಲಿ ಬ್ರಾಹ್ಮಣರ ಕೇರಿಯೊಂದು ಪ್ರತ್ಯೇಕವಾಗಿದ್ದಿತೆಂದು ತಿಳಿಯುತ್ತಿದೆ.

ಈ ರೀತಿಯಾಗಿ ಪ್ರಸನ್ನ ವೆಂಕಟದಾಸರ ಕೃತಿಗಳಲ್ಲಿ ನೇರವಾಗಿಯೂ ಪರ್ಯಾಯವಾಗಿಯೂ ಅಂದಿನ ಜನಜೀವನದ ಅನೇಕ ಮುಖ್ಯಾಂಶಗಳನ್ನು ವರ್ಣಿಸಲಾಗಿದೆ. ಆ ಜನಜೀವನದ ಪೂರ್ಣ ಚಿತ್ರವು ದೊರೆಯದಿದ್ದರೂ ದೊರೆತಷ್ಟು ಬೆಲೆಯುಳ್ಳದ್ದಾಗಿದೆ.

೯. **ದಾಸರಿಗೆ ದೊರೆತ ವರ್ಷಾಶನ, ದಾನಪತ್ರಗಳ ಮೇಲಿಂದ ತಿಳಿಯುವ ಕೆಲವು ಸಂಗತಿಗಳು:—** ೧. ಸತ್ಪುರುಷ, ಗುರುಹಿರಿಯರ ಹೆಸರು ಮೇಲ್ಭಾಗದಲ್ಲಿ ಬರೆಯತಕ್ಕದ್ದು. ೨. ಸೂರಸನ್ ಬರೆಯುವದು ಪ್ರಚಾರದಲ್ಲಿದ್ದು, ನಾಯಕರೂ ಸರದಾರರೂ ಅದನ್ನು ಉಪಯೋಗಿಸುತ್ತಿದ್ದರು.

---

೧. ಪ್ರಬಂಧ ಸಂಖ್ಯೆ ೧೨೭ ನುಡಿ ೧೧
೨. ,, ೧೨೭ ನುಡಿ ೧೨
೩. ,, ೧೮೯ ಭಾಗ ೧೫ ನುಡಿ ೧
೪. ,, ೧೮೯ ಭಾಗ ೨೯ ನುಡಿ ೨
೫. ,, ೧೮೯ ಭಾಗ ೬

೩. ಕನ್ನಡಿಗರು ಪೇಶವೆಯವರ ಆಳಿಕೆಯಲ್ಲಿ ನೌಕರಿಗಾಗಿ ಮಾಂಡಲಿಕರ ಕೈಯಲ್ಲಿ ಇದ್ದರು. ಅವರಿಗೆ ಮರಾಠಿಯ ಜ್ಞಾನವು ವಿಶೇಷವಿದ್ದಿಲ್ಲ. ೪. ಬಾಗಲಕೋಟೆ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ, ಮರಾಠಿಯು ಪ್ರಚಾರ ವಾಗಿದ್ದಿಲ್ಲ. ೫. ಸರಕಾರಿ ಕಾಗದಗಳು ಮರಾಠಿ ಭಾಷೆಯಲ್ಲಿ, ಮೋಡಿ ಲಿಪಿ ಯಲ್ಲಿ ಬರೆಯಲ್ಪಡುತ್ತಿದ್ದವು. ೬. ಆಚಾರ್ಯರು ತಮ್ಮ ಮನೆಯ ವ್ಯವಹಾರ ವನ್ನು ಕನ್ನಡ ಭಾಷೆಯಲ್ಲಿ ಆದರೆ ದೇವನಾಗರಿ ಲಿಪಿಯಲ್ಲಿ ಬರೆಯುತ್ತಿದ್ದರು. ೭. ಜಾತಿಯ ಬಗ್ಗೆ ಭೇದಭಾವವಿರಲಿಲ್ಲ. ಕಾರಣ ಪ್ರಸನ್ನ ವೆಂಕಟರಿಗೆ ಎಲ್ಲ ಜಾತಿಯವರು ವರ್ಷಾಶನ, ಭೂಮಿಯ ದಾನವನ್ನು ಕೊಟ್ಟಿದ್ದಾರೆ. ೮. ದಾನ ಪತ್ರ, ಸನದು ಇವುಗಳ ಮೇಲೆ ಎಡಕ್ಕೆ ಮೇಲ್ಭಾಗದಲ್ಲಿ "ದ" ಎಂದು ಬರೆ ಯುವ ವಾಡಿಕೆ. ೯. ಮಿತ್ರರಿಗೆ ಮೂರು ಶ್ರೀಕಾರ ಬರೆಯುವ ವಾಡಿಕೆ. ಪರಿ ಶಿಷ್ಟ ೧೩ರಲ್ಲಿ ನೋಡಬಹುದು. ಅದೇ ಪ್ರಕಾರ ಗುರುಗಳಿಗೆ ಆರು ಶ್ರೀಕಾರ ಬರೆಯತಕ್ಕದ್ದು. ೧೦. ವೈದಿಕರಲ್ಲಿ ತಂದೆಯ ಹೆಸರು ಬರೆಯುವಾಗ 'ಬಿನ್ನ' ಶಬ್ದವನ್ನು ಉಪಯೋಗಿಸುವ ವಾಡಿಕೆ ಇತ್ತು.

---

# ಪದಗಳ ಪರಿವಿಡಿ

**ಆರ್ತಭಾವದ ಪದಗಳು**

## ವ್ಯಾಕುಲಭಾವದ ಪದಗಳು



## ಮುಮುಕ್ಷುಭಾವದ ಪದಗಳು



## ಶಾಂತಭಾವದ ಪದಗಳು



## ದಾಸ್ಯಭಾವದ ಪದಗಳು



## ಸಖ್ಯಭಾವದ ಪದಗಳು



## ವಾತ್ಸಲ್ಯಭಾವದ ಪದಗಳು

## ಸಾಮಾಜಿಕ ಪದಗಳು



## ವ್ಯಕ್ತಿತ್ವದ ಪದಗಳು



## ವಿಶೇಷ ಕೃತಿಗಳು



## ಉಗಾಭೋಗಗಳು



## ಸುಳಾದಿ



---

* ೧೭೦ ರಿಂದ ೧೯೦ ರ ವರೆಗೆ ನಂಬರ ತಪ್ಪಿ ಎದುರಿನ ಕಂಸುಗಳಲ್ಲಿದ್ದಂತೆ ನಂಬರು ಬಿದ್ದಿವೆ. ಕಾರಣ ಅವುಗಳನ್ನು ೧೭೦ ರಿಂದ ಅನುಕ್ರಮದಂತೆ ಕೊಡಲಾಗಿದೆ.

**ಮಂಗಲಾಚರಣ**



(೧೯೪ರಲ್ಲಿ ಕೊಟ್ಟ ಎರಡನೇ ಪದ ಸೇರಿ ಒಟ್ಟು ೨೦೯)



ಶ್ರೀಪ್ರಸನ್ನ ವೆಂಕಟದಾಸರು ದಿನಾಲು ಪೂಜಿಸುತ್ತಿದ್ದ
ಶ್ರೀದೇವಿ ಭೂದೇವಿಯರು ಸಹಿತವಾದ ಶ್ರೀ ವೆಂಕಟೇಶ ಮೂರ್ತಿಯು

ಶ್ರೀ

# ಶ್ರೀಪ್ರಸನ್ನವೆಂಕಟದಾಸಾರ್ಯ್ಯರ ಕೀರ್ತನೆಗಳು

## ೧

**ರಾಗ–ಕಾನಡಾ** **ತಾಳ—ಝಂಪಾ**

ಸತತ ಸ್ಮರಿಸಿ ಮಧ್ವ ಸಂತತಿ ಗುರುಗಳಾ | ಗತಿಯುಂಟು ಸಂತತ ಸಂಪತ್ತುಂಟು || ಪಲ್ಲ || ಶ್ರೀ ಮಧ್ವಾ ಪದ್ಮನಾಭಾ ನರಹರಿ ಮಾಧವಾ | ಆ ಮೌನಿ ಅಕ್ಷೋಭ್ಯ ಜಯರಾಯ | ಜಯರಾಯಾ ವಿದ್ಯಾಧಿರಾಜಾ | ಭೂಮಿ ಕವೀಂದ್ರ ವಾಗೀಶರಾ || ೧ || ಮುನಿ ರಾಮಚಂದ್ರ ವಿದ್ಯಾಸಿಧಿ ರಘುನಾಥಾ ಸಾ | ರನ ಗೆಲದ ರಘುವರ್ಯಾ ರಘೂತ್ತಮಾ | ರಘೂತ್ತಮಾ ವೇದವ್ಯಾಸಾ | ಘನ ವಿದ್ಯಾಧೀಶಾ ವಿದ್ಯಾಸಿಧಿಗಳ || ೨ || ಸತ್ಯವ್ರತಾ ದಯಾನಿಧಿ ಸತ್ಯನಾಥ ಅನುಪಮ | ಸತ್ಯಾಭಿನವ ಗುರು, ಕರಪದ್ಮಜಾ | ಪದ್ಮಜಾ ನಮ ಗುರು | ಸತ್ಯಪೂರ್ಣ ಪ್ರಸನ್ವೆಂಕಟಗೆ ಪ್ರಿಯಾ || ೩ ||

## ೨

**ರಾಗ—ತೋಡಿ** **ತಾಳ—ಅಟ್ಟ**

ಅಂಜನಿಸುತ ನಮೋ ಸ್ವಾಮಿ, ನೀತ | ಕಂಜಜ ಚರಿಯದ ಮಹಾ ಪುಂಜಾಶ್ರಮಿ || ಪಲ್ಲ || ಪತಿತ ಪಾವನ ನಾಮಧ್ಯೇಯ, ಹನುಮ | ಅತಿತಾನಾಗತಾಜಾಂಡಜ್ಞೇಯ || ಮೃತಸಂಜೀವನಾದಿ ಚತುರೌಷಧ ತಂದೆ | ಕ್ಷತಘಾತಕಪಿಗಳ ವ್ರತತಿ ರಕ್ಷಿಸಿದೆ|| ೧ || ವ್ಯಾಘ್ರೇಶ್ವರಾಜಿತ ಸಮರ್ಥ, ಸುಧಾಹೃತ | ಅಗ್ರಸೂಯ್ಯಜ್ಞಾದಿ ಕರ್ತ || ಉಗ್ರ ಕೌರವಜರ ನಿಗ್ರಹ ಕೃಷ್ಣ ಮ | ತಾಗ್ರಣಿ ಭೀಮ ಸಮಗ್ರ ಸುಜ್ಞಾನೀ|| ೨ || ದುಷ್ಟೋಕ್ತಿ ಪೂರ್ವಪಕ್ಷಸಾರೀ, ಭೇದೋಚ್ಚಾರೀ | ವಿಷ್ಣುಪಕ್ಷ ಸಿದ್ಧಾಂತ ಕಾರೀ || ಸೃಷ್ಟೀಲಿ ವರವಾಶಿಷ್ಟ ಪ್ರಸನ್ವೇಂಕಟಾ | ಧಿಷ್ಮನ ಪ್ರಿಯ ಮುನಿ ಶಿಷ್ಟ ರೊಡೆಯನೇ || ೩ ||

೩

ರಾಗ— ದೇಶಿ ತಾಳ— ಆದಿ

ಆದಿ ಗುರುರಾಯ ನಮ್ಮ ಮುಖ್ಯ ಪ್ರಾಣಾ,ಭವ| ವ್ಯಾಧಿ ಕೋಟಿಪ್ರಭಂಜನ ಮುಖ್ಯಪ್ರಾಣಾ || ಪಲ್ಲ || ಜೀವತೊರೆದ ಪ್ಲವಗಗಣಕೆ,ಸಂ| ಜೀವ ತಂದು ಔಷಧವನಿತ್ತೆ || ಹ್ಯಾವಿನ ರಕಸರಸ್ನು ಮುರಿದ, ಹನುಮ | ದೇವ ದೇವ ರಾಘುವಗೆರಗಿದೆ || ೧ || ಸೋಜಿಗದಿ ಕೀಚಕನಾ ಕೊಂದೇ, ಭೀಮ | ಆಜನುಮ ಅಸಹಾಯ ಶೂರ || ರಾಜಸೂಯಕೆ ಮುಖ್ಯ ಕರ್ತಾ, ಕ್ಷಾತ್ರ | ತೇಜ ಪೂರ್ಣ ಕೃಷ್ಣಾಂಕಿತನೇ || ೨ || ರೌಪ್ಯಪೀಠದಿ ಕೃಷ್ಣಾರ್ಚಕನೇ, ಮಧ್ವ ಸಾ| ರೂಪ್ಯ ಮುಖ್ಯಾದ ಮುಕ್ತಿದಾತಾನೆ || ಗೌಪ್ಯ ಶ್ರುತ್ಯರ್ಥಜ್ಞಚಾರ್ಯನೆ, ದೇ | ದೀಪ್ಯ ಪ್ರಸನ್ವೆಂಕಟನ ಪ್ರೀಯನೇ || ೩ ||

೪

ರಾಗ—ವರಾಳಿ ತಾಳ— ಆದಿ

ಗೆಲಿಸು ಭವವ ಗುರು ಹನುಮಂತಾ, ಖಳ | ಜಲಧಿ ಒಡವಾನಳ, ಬಲವಂತಾ || ಪಲ್ಲ || ದಾಶರಥಿಯ ಪದವನೆ ನಂಬಿ, ಇತ | ರಾಶಿಯಿಲ್ಲದೆ ಭಕ್ತಿರಸ ತುಂಬಿ || ತೋಷ ವೃತ್ತಿಗೆ ಕಡೆ ಮೊದಲಿಲ್ಲಾ, ಸರ್ವ | ದೇಶ ಕೋಶದೆಣಿಕೆ ಅರಿತನೆಲ್ಲ || ೧ || ಅಂಧಕಾತ್ಮಜ ತೃಣ ಬೃಹದ್ಭಾನು, ಗೋ | ವಿಂದಾಂಘ್ರಿಬಿಸಜ ಮಧುಪ ನೀನೂ || ಸಂಧಕಾಯನ ಸಂಹಾರಿ ದೇವಾ, ದಯಾ | ಸಿಂಧು ವೈಷ್ಣವಜನ ಸಂಜೀವಾ || ೨ || ಶ್ರೀ ಸತ್ಯವತಿಜನ ನೇಮದಲಿ, ಹರಿ| ದ್ವೇಷಿಗಳನು ಗೆದ್ದೆ ಭೂಮಿಯಲಿ || ಶ್ರೀ ಸುಖ ತೀರ್ಥಭೀಮ ಕಪಿವರದಾ, ಸ್ವಾಮಿ | ಪ್ರಸನ್ ವೆಂಕಟೇಶ ಭೃತ್ಯಗಣ ಮುದದಾ || ೩ ||

೫

ರಾಗ— ಶಂಕರಾಭರಣ ತಾಳ— ಝಂಪಾ

ನನ್ನಯ್ಯಾ ನೀನೊಬ್ಬನೇ, ಮಾರುತಿ ವರದ| ನನ್ನಯ್ಯಾ ನೀನೊಬ್ಬನೇ || ಪಲ್ಲ || ಉನ್ನತ ತಂದೆ ಕೊಲ್ಲಲು ಒಯ್ಯಲು ತಾಯಿ | ಚಿನ್ನನುಳಿಸಿಕೊಂಡಾಳೆ ಬನ್ನಾ ಬಡುತಾ || ನಿನ್ನಿಚ್ಛೆಯೆನಲು ವಿಷಾನ್ನ ವನ್ನುತಣ್ಣಗ| ವೆನ್ನಿಪೆ ತನ್ನವರಿನ್ಯಾರೊ ನರಹರಿಯೆ|| ೧ || ಔತ್ತಾನ್ನಪಾದ

ಮುನಿದು ಅಡವಿಯ ಸಾರೆ | ವೃತ್ತಿ ನಿರಾಲಂಬ ಸ್ತುತ್ಯ ಮಂತ್ರವ ನಾರ | ದಿತ್ತರೆ ಜಪಿಸ್ಯತ್ತಿತ್ತಾಗದ ಚಿತ್ತಕ್ಕೊಲಿದೆ | ಹೆತ್ತವರೊತ್ತಾದರೆ ವಾಸು ದೇವಾ ||೨ || ಅಗ್ರಜಾವಜ್ಞ ಮಾಡಲು ಆ ವಿಭೀಷಣನು | ಶೀಘ್ರದಿ ಪಾದಾಕ್ಕೆರಗಲುಗ್ರಪ್ಲವಗ || ಉಗ್ರದಿ ನಿಗ್ರಹಿಸೆ ನೀ ಗ್ರಹಿಸಿದೆ ಭ |ಕ್ತಾಗ್ರಣಿ ಹನುಮ ಮತಾಗ್ರದಿ ಪ್ರಸನ್ವೆಂಕಟ || ೩ ||

೬

ರಾಗ—ಶಂಕರಾಭರಣ | ತಾಳ—ಬಿಲಂದಿ

ಭಾವು ಹರಿಮತನೆ || ಪಲ್ಲ || ಭಾವು ಹರಿಮತ, ಸ್ಥಾಪಿತನೆ ಮೂರು | ರೂಪಿನಲಿ ಬಂದು, ಶ್ರೀಪತಿಯ ಮೆಚ್ಚು | ವಾ ಪರಾಕ್ರಮ ವ್ಯಾಪಿಸಿದೆ ಭಾರ, ತೀಪತೇ ತೇ ನಮೋ|| ಅನುಪಲ್ಲ || ಆದಿಯಲಿ ಅಂಜ, ನಾದೇವಿಯ ಮಂಗ | ಳೋದರದಿ ಪುಟ್ಟಿ, ಶ್ರೀದ್ಯುಮಣಿಕುಲ | ಮೇದಿನೀಶನ, ಪಾದಕೆರಗಿ ಅಂ | ಬೋಧಿ ದಾಟ್ಯಾಜ್ಞದಿ ಆ ದಶಾಸ್ಯ ಲಂಕಾ,ದಹಿಸಿ ಜಾನ,ಕೀದೇವಿಯ ಸುದ್ದಿ,ಶ್ರೀಧರಗರುಹಿ | ಯೋಧ ಬಾಧಿತ,ರಾದ ಕಪಿಚೇತ | ನಾದಾಯಕ ತೇ ನಮೋ || ೧ || ತುಂಗಗಿರಿಶತ, ಶೃಂಗ ಕೃತಸುವ | ಜ್ರಾಂಗ ಅಗ್ನಿಜೆ ಸಂಗ ಮತ್ತ ನೃ,ಪಂಗಳಂ ಭುಜ, ದಿಂ ಗೆಲಿದು ಯಜ್ಞ | ಸಂಗ್ರಹವ ಪೂರಿಸಿ|| ಸಂಗಡಿಸಿದರಿ, ಸಂಗರವ ಪೊಕ್ಕು | ಸಿಂಗ ಗರ್ಜನೆಯಿಂ ಗದೆಯ ಗೊಂಡು | ಭಂಗಿಸಿದಿಯೊ ಯುಗ್ಮಾಂಗ ಕೃಷ್ಣ ಸೇ | ವಾಂಗಕೃತ ತೇ ನಮೋ|| ತುಚ್ಛರಿಳೆಯೊಳು ಪೆರ್ಚೆ ಬಗೆಬಗೆ | ಕುಚ್ಛಿತಾರ್ಥ ವಿರಚ್ಚಿಸ್ಯಾತ್ಮಗೆ | ಅಚ್ಯುತೈಕ್ಯವನುಚ್ಚರಿಸುತಿರೆ | ಸ್ವಚ್ಛಯತಿ ರೂಪದಿ || ಮುಚ್ಛರಿಪರನು ಕೊಚ್ಚಿ, ತಂತ್ರಸಾರಾರ್ಚನೆ ಭೇದ ನಿಚ್ಚೈಸಿದಿ ಶಿರಿ | ಸಚ್ಚಿದಾತ್ಮ ಶ್ರೀ ವಚ್ಛ ಪ್ರಸನ್ವೆಂಕ | ಟೇಚ್ಛ ಮತ ತೇ ನಮೋ || ೩ ||

೭

ರಾಗ—ನಾಟ | ತಾಳ—ರೂಪಕ

ಶರಣು ಸಕಲ ಪ್ರಾಣನಾಥಾ | ಸರಸಿಜಭವಪದವಿಭೋಕ್ತಾ | ಮೂರವತಾರಿ ಮುಖ್ಯಪ್ರಾಣಾ | ಹರಿಪರಾಯಣ ತೇ ನಮೊ || ಪಲ್ಲ || ರಕ್ತಶಿವನ ಬಿಸುಟು ಜಗದ | ಕರ್ತ ರಘುಪುಂಗವನ ಪದದಿ | ಭಕ್ತಿ ಬಲಿದು

ಇತರ ವಿಷಯ | ಚಿತ್ತನಾಗದ ಸುಗುಣ ನಿಧೀ || ಹೆತ್ತು ಹೆಡಕಿನವನ ವನವ| ಕಿತ್ತು ಘುರವ ನುರುಹಿ ಭಯವ | ಬಿತ್ತಿ ಜನಸಿ ಕುಶಲ ಒಡೆಯ | ಗಿತ್ತ ಹನುಮ ತೇ ನಮೋ || ೧ || ಮುಪ್ಪಿನವಳ ಮಗನ ತರಿದು ಕೃ | ಷ್ಣಾರ್ಪಣ ಮಾಡಿ ನೃಪರಾ | ಕಪ್ಪ ಹೊರಿಸಿ ತಂದು ಮುಖಕೆ | ಒಪ್ಪಿಸಿದೆ ಅಗ್ರಜಾತಗೆ || ಭೂಪ್ಪನಣ್ಣನ ಅಣುಗರನ್ನು | ಅಪ್ಪಳಿಸಿ ತಮಸಕೆ ಕಳುಹಿ | ತಪ್ಪದೇದೂ ರಂಗಸೇವಿಯೋ | ಳಿಪ್ಪ ಭೀಮ ತೇ ನಮೊ || ೨ || ವಿಷ್ಣು ಭಟರ ಮತಿಗೆ ಕಲಿಯು | ವೇಷ್ಟಿಸಿರಲು ಬ್ರಹ್ಮಸೂತ್ರ ಸ್ಪಷ್ಟ ತಿಳುಹಿ ತಾತ್ವಿಕ ಜನ | ಶ್ರೇಷ್ಠರ ನೆರಹಿ ಮಿಥ್ಯರ || ಭ್ರಷ್ಟ ವಚನ ನಿರಾಕರಿಸಿ ನೀ | ಜೇಷ್ಠ ಮತವ ನೊರೆದೆ ಗುರುವೆ | ಶಿಷ್ಟ ಮಧ್ವ ಪ್ರಸನ್ವೇಂಕಟ | ಕಷ್ಣ ಮತ್ಯ ತೇ ನಮೋ || ೩ ||

೮

**ರಾಗ—ಮಾರವಿ** **ತಾಳ—ತ್ರಿವಿಡಿ**

ಸಿರಿ ಅರಸಂಗೆ ನಮೋ | ಗುರು ಮಧ್ವಪ್ರಿಯಾ | ಸುರರೋತ್ತಮ ರಂಗ | ವರಕಾವೇರಿಯ || ಪಲ್ಲ || ನಿಗಮಾಗಮಾಗಣಿತ ಸುವಿದಿತ ಸುಗುಣ| ಖಗವರಗಮನ ಮಹಾ ಉರುಗ ಶಯನಾ || ೧ || ಅಜನುತರಾಜರವಿವಿಜಿತ ಪ್ರತೇಜ ಕುಜ || ರಜನಿಚರ ಹನನ ಮೂಜಗ ಜೀವನಾ || ೨ || ತನ್ನ ವಂದಿಪರನ್ನು ಹೊರೆವ ಭಯವೋಡಿಪಾ | ಎನ್ನಯ್ಯಾ ಪ್ರಸನ್ನ ವೆಂಕಟ ನಾಥಾ ದಾತಾರಾ || ೩ ||

೯

**ರಾಗ—ಮಾರವಿ** **ತಾಳ—ಆದಿ**

ಹನುಮಾ ನಮ್ಮ ತಾಯಿ ತಂದಿ | ಭೀಮ ನಮ್ಮ ಬಂಧು ಬಳಗಾ | ಆನಂದ ತೀರ್ಥರೇ ನಮ್ಮ ಗತಿಗೋತ್ರರು ||ಪಲ್ಲ|| ತಾಯಿ ತಂದಿ ಹಸುಳರಿಗೆ, ಸಾಯುವಿತ್ತು ಸಾಕುವಂತೆ | ಆಯಾಸವಿಲ್ಲದೆ ಸಂಜೀವನವಾ ತಂದು|| ಘಾಯಗೊಂಡ ಕಪಿಗಳನ್ನೂ | ಪಾಯದಿಂದ ಪೊರೆದ ಶ್ರೀರಘು | ರಾಯ ನಂಘ್ರಿಗಳೇ ಸಾಕ್ಷಿ ತ್ರೇತಾ ಯುಗದಿ ||೧|| ಬಂಧು ಬಳಗಾದಂತೆ ಆಪದ್, ಬಾಂಧವನಾಗಿ ಪಾರ್ಥನಿಗೆ | ಬಂದ ಬಂದ ಭಯಂಗಳ ಪರಿಹರಿಸಿ || ಅಂಧಕ ಜಾತರ ಕೊಂದು| ಅಂದೇ ಕೃಷ್ಣಾರ್ಪಣವೆಂದೆದುಕು| ಲೇಂದ್ರ ನಂಘ್ರಿ ಗಳೇ ಸಾಕ್ಷಿ ದ್ವಾಪರಾಂತ್ಯದಿ ||೨|| ಗತಿಗೋತ್ರರಂತೆ, ಸಾಧು| ತತಿಗಳಿಗೆ

ಸುಜ್ಞಾನವಿತ್ತು | ಮತಿಗೆಡಿಸಿದ ಇಪ್ಪತ್ತೊಂದು ಕುಭಾಷ್ಯಂಗಳ || ಗತಿಗೆಡಿಸಿ ಸದ್ವೈಷ್ಣವರಿಗೆ ಸ| ದ್ಗತಿಯ ತೋರಿದ ಪ್ರಸನ್ವೇಂಕಟ। ಪ್ರತಿವ್ಯಾಸನಂಘ್ರಿಗಳೇ ಸಾಕ್ಷಿ, ಕಲಿಯುಗದೀ ||೩||

೧೦

**ರಾಗ-ಶಂಕರಾಭರಣ** **ತಾಳ ರೂಪಕ**

ಆಗಬಲ್ಲದೇ ಹೀಗಾಗಬಲ್ಲದೆ|| ಯೋಗಿ ಜನರಿಂದೊಂದ್ಯನವರಿಗ್ಹೀಗೆ ಯಮನ ಮನೆಯ ಬಾಧೆ || ಪಲ್ಲ || ಕಾಮನಯ್ಯನರಮನೆಯ| ಪ್ರೇಮದ ದಾಸೀಗೆ ಮಹಾ|| ಪಾಮರ ರಾಕ್ಷಸರ ಕ್ರೂರ ಕಾಮುಕರ ಸರಿ ಸಂಯೋಗ ||೧|| ಸಜ್ಜನರ ಸಿರಿಮನೆಯ ವಜ್ರದ ಪಂಜರದ ಗಿಣಿಯು || ಮಜ್ಜಿಗೆ ಯನು ಕಾಣದ ಮುದಿ ಮಾರ್ಜಾಲನ ಬಾಯಿ ತುತ್ತು ||೨|| ರಾಜಾಧಿರಾಜನ ಮನೆಯ। ರಾಜ ಹಂಸವು ಕುಣಪ|| ಭೋಜಕವಾದ ವೃಕನ ಭೋಜನಕೆ ಅನುಕೂಲ || ೩ || ಹರಿಯ ಬೇಂಟೆಯ ವನದ। ಹರಿಣಗಳ ಹಿಂಡುಗಳಿಗೆ || ಗಿರಿಯ ಹಳುವದ ಹುಲಿಯ | ಗರಜನೆಯ ಮಹಾಗಸಣೆ ||೪|| ಪ್ರಸನ್ ವೇಂಕಟನರಮನೆಯಾ| ಕಸಕಡ್ಡಿಯಲ್ಲವೂ ವಜ್ರ || ವಿಷಮಯ ಉಂಟದೆಂಬ ಮುಸಲಿಕೆ ಹುಡಿಹಿಟ್ಟು || ೫ ||

೧೧

**ರಾಗ ಶ್ರೀ** **ತಾಳ ಆದಿ**

ಇರಬರಲಿಲ್ಲ ಬಂದರೂ ಇರಲಿಲ್ಲ ಈ | ಶರೀರ ಯಮನ ವಶ | ಹರಿ ಮೊರೆ ಹೋಗು ನೀ ||ಪಲ್ಲ|| ಘಟಪಟಗಳೀವೂ, ದಿಟ ಕೀಟಕ ಹೂವು ಕ। ಪಟನಾಟಕನ ಪಾದ, ಬಿಟ್ಟು ಕೆಟ್ಟೆಯಲ್ಲೊ ||೧|| ನಗನಗುತ ಭವ, ಸೊಗಸೆಂದು ಸವೀವೆ ಬಹು। ತಗೆಬಗೇಸಯ್ಯಾ ನೀನಗೆ ಭವದ ಭಯ||೨|| ಶರಣರ ಕಂಡು, ಜರಿದಾರೆ ಕೇಡು ತಂದೆ || ಸಿರಿಪ್ರಸನ್ನ ವೆಂಕಟ, ಅರಸನ್ನ ನಂಬು ||೩||

೧೨

**ರಾಗ-ಧನಶ್ರೀ** **ತಾಳ-ಝಂಪಾ**

ನಮ್ಮ ತಪ್ಪೇನು? ಹೇ ಘನ್ನ ನಿನಗೆ|| ಕೋಟಿ। ಬ್ರಹ್ಮಾಂಡ ನಾಯಕಾ, ಅಚಿಂತ್ಯ ಮಹಿಮ ||ಪಲ್ಲ|| ಒಂದು ನಾಮೋಚ್ಚಾರಣೆಯಲಿ ಪರ

ಗತಿ ಪಡೆಮ| ಒಂದು ಗುಣ ಪಿಡಿದು ಕಡೆಗಾಂಬರು ಭವ || ಮಂದಮತಿ ಯಲಿ ಭಜಿಸಿ ಮಹಾಪಾಪ ನೂಕುವರು || ಇಂದಿರಾರಾಧ್ಯಪಾದ ಭಕ್ತ ವತ್ಸಲನೇ ||೧|| ನಾರಾಯಣನೆ ನಿನ್ನ ಮಂಗಳ ಪ್ಯೆ ಘಾಳಿಯಲಿ| ಮೂರು ಲೋಕದ ಪುಣ್ಯ ಫಲ ದೊರೆವುದು || ಸೂರಿಯನ ಮಗನವರು ನಿನ್ನ ಬಂಟರಿ ಗಂಜಿ| ಜಾರುವರು ಶ್ರೀ ಜಾನಕಿಯ ರಮಣ ರಾಮಾ ||೨|| ಶಿಶುಗಳಪ ರಾಧಕ್ಕೆ ನಯನದಂಜಿಕೆ ಶಿಕ್ಷೆ| ಪಶು ಇರಕಳಿಗೆ ಕಂಠಕಾಷ್ಠ ಶಿಕ್ಷೆ || ವಿಷಮ ಹಿಂಸೆಯು ಸಲ್ಲ| ಪ್ರಸನ್ನ ವೇಂಕಟರಮಣಾ| ವಿಷಯಾಸೆ ಭವಶಿಕ್ಷೆ ಸಾಕೆನಗೆ ತಂದೇ ||೩||

೧೩

**ರಾಗ-ಕಾಫಿ** **ತಾಳ-ಝಂಪಾ**

ಪಾಲಿಸೋ ಮಾಧವಾ ಈ ತೆರದಲೀ ||ಪಲ್ಲ|| ನಿನ್ನನೇ ಹಾಡಿಸಿ, ನಿನ್ನವರ ಕೂಡಿಸಿ|| ನಿನ್ನ ಸಾಹಸ ಕೀರ್ತಿಯನ್ನೇ ಕೇಳಿಸುವಂತೆ ||೧|| ನೀಚರಾಧೀನ ಮಾಡಿ ನಾಚಿಸಬೇಡ, ಸ|| ದಾಚಾರ ವೃತ್ತಿಯ,ಲ್ಲಾಚರಿ ಪಂತೆನ್ನಾ ||೨|| ನೀ ಮರಿಸದಿರು ಶ್ರೀ, ನಾಮವ ಜಿಷ್ಣುಗ|| ಸ್ವಾಮಿ ಪ್ರಸನ್ವೆಂಕಟ ಮನೋಹರ ಕೃಷ್ಣಾ ||೩||

೧೪

**ರಾಗ-ಶಂಕರಾಭರಣ** **ತಾಳ-ಝಂಪಾ**

ಭಕುತ ವತ್ಸಲನೆಂಬ ಚಿನ್ಹೆ ನಿನಗೆ|| ಯುಕತವಲ್ಲದೆ ಆರಿಗೊಪ್ಪುವದು ಕೃಷ್ಣಾ ||ಪಲ್ಲ|| ಎಲ್ಲ ಜಗದ ತಂದೆ ನಿನ್ನ ಮಗ ಆನಂದ| ನೊಲ್ಲಭೆಯ ಕಂದನಾದಾ || ಚಲ್ಲುವೆಯರಸಿ ನಿನ್ನಂಗನೆ ಲಕುಮೆನ್ನ| ಗೊಲ್ಲತೆರಿಗೆಂತ್ಯ ಸೋತಿದ್ದೆ ಸ್ವಾಮಿ ||೧|| ಮಂದಿರಾಜಾಂಡ ಕೋಟಿಗೆ ಗುರುವರಿಯ ನೀನು| ಸಾಂದೀಪನೂಳಿಗವ ಮಾಡ್ದೆ || ಮಂದಜಾಸನ ಆವಾಯು ನಿನ್ನ ಓಲೈಸುತಿರೆ| ಕಂದನೆನಿಸಿದೆ ಯಶೋದಾ ದೇವಿಗೆ ಸ್ವಾಮಿ ||೨|| ಮೂರುಚಾವಡಿ ಪಾರು ಪತ್ಯದ ಪ್ರಭುವೆ ನೀ ! ನೇರಡೆ ನರನ ಬಂಡಿಯನೂ || ದ್ವಾರಕೆಯ ಅರಸೆ ನೀ ಚೀರಿದಾರೋಡಿ ಬಂದು| ಆ ರಮಣಿಯ ಮಾನ ಉಳಿಸಿದೆ ಸ್ವಾಮಿ ||೩|| ಮುಕುತ ದ್ರುಹಿಣರಿಂದ ಸೇವ್ಯ, ನೀ ಧರ್ಮನ। ಮಖದೊಳೆಂಜಲ ಪಾತ್ರೆ ತೆಗೆದೆ|| ಪ್ರಕಟಿತ ನಿತ್ಯ ಮಹಾತೃಪ್ತ ನೀ ವಿದುರನಾ| ಕಕುಲತೆಯ ಔತಣಾ

ಗೊಂಡು ಮುದಿಸಿದೆ ಸ್ವಾಮಿ ||೪|| ಹಲವು ಶ್ರುತಿಗಳಿಗೆ ನೀ ನಿಲುಕದೆ ನೆನೆದವಗೆ | ಫಲಭದಿ ಪೊರೆವ ಉದಾರೀ || ಬಲದ ವ್ಯಾಲೊಲೆಯುವ ಧೊರೆಯಲ್ಲ ಭಕ್ತರ| ಛಲರಕ್ಷ ಪ್ರಸನ್ನವೇಂಕಟ ಜಗದಧ್ಯಕ್ಷ ಸ್ವಾಮಿ||೫||

೧೫

**ರಾಗ-ಭೂಪಾಲ** **ತಾಳ-ಝಂಪಾ**

ಮಹತಿಗೆ ಮಹತು ಶ್ರೀ ಹರಿಯ ನಾಮಾ ||ಪಲ್ಲ|| ಹಿಂದೊದಗಿದ ಘೆರಾಶಿ ಬೇಯ್ಸಿಬಿಸಟುವ ನಾಮ| ಮುಂದೆ ಬಹ ದುರಿತಕಡ್ಡಾದ ನಾಮು|| ಮಂದಮತಿ ಕತ್ತಲೆಗೆ ಬಾಲಾರ್ಕಸಮ ನಾಮ| ದಂದುಗದ ಬಳ್ಳಿಯನು ಹರಿವ ನಾಮ ||೧|| ಮುಕುತಿ ನಗರವ ತುಂಬಿಸುವ ಅಭಯಕರನಾಮ| ಶಕುತರ ಮಾಲಿಕೆಗಭಯದ ನಾಮ|| ಅಕಳಂಕ ದಾಸರಿಗೆ ಆದ್ಯಂತ ಗತಿ ನಾಮ| ಭಕುತರೆಡರಿನ ಗಿರಿಗೆ ವಜ್ರನಾಮ ||೨|| ಸರ್ವಶ್ರುತ ಮುನಿಗಳುಘ್ಘೊ ಡಿಸುತಿಹ ದಿವ್ಯನಾಮ| ಉರ್ವಿಯೊಳು ನಂಬಿದರ ಪೊರೆವ ನಾಮ|| ಸರ್ವಜ್ಞ ರಾಯರು ನಿರ್ವಚನಿಸುವ ನಾಮ| ಸರ್ವೇಶ ಪ್ರಸನ್ವೇಂಕಟೇಶನ ಶ್ರೀನಾಮ ||೩||

೧೬

**ರಾಗ-ಬಿಹಾರಿ** **ತಾಳ-ತ್ರಿವಿಡಿ**

ಮಾಧವಾ ಜಯ ಜಯ, ಶ್ರೀಧವಾ ಜಯ ಜಯ || ಯಾದವ ಕುಲ ಮಣಿ ಭೂದೇವೀಪ್ರಿಯ ||ಪಲ್ಲ|| ವಿದ್ಯಾಧರ ಮುನಿ ಸದ್ಯೋಜಾತ ವಿರಿಂ || ಚಾದ್ಯಾರ್ಚಿತ ವೇದವೇದ್ಯ ಮುಕುಂದಾ ||೧|| ಸ್ವರ್ಣ ಗಿರೀಶ ಸುಪರ್ಣ ವಾಹನ ವಿಶ್ವ || ನಿರ್ಣಯ ಶೀಲ ದಯಾರ್ಣವ ಪೂರ್ಣಾ ||೨|| ಪುಣ್ಯ ಪುರುಷ, ವರೇಣ್ಯ ದನುಜರಾ|| ರಣ್ಯಪಾವಕ ದೋಷಶೂನ್ಯ ಗುಣಾಂಕಾ ||೩|| ಕಠಿಣ ದಂಡಕ, ದೇಶಾಟಣ ಪ್ಲವಂಗ ಸಂ| ಘಟಣಾಹಿ ಫಣ ನಟ ನಟನ ಶ್ರೀ ಮೂರ್ತೆ ||೪|| ಕಿಂಕರ ರಕ್ಷಕ ನಿಃಶ್ಯಂಕ ಸದಾಸುರ! ಸಂಕಟಹರ ಪ್ರಸನ್ವೇಂಕಟ ಪ್ರಭುವೇ ||೫||

೧೭

**ರಾಗ-ಮರುಧನಶ್ರೀ** **ತಾಳ-ಆದಿ**

ಯದುವರ ಒದಗು ಎನ್ನ ನಾಲಿಗೆಗೆ|. ಉದಯಾದಿ ಅಸ್ತಾಂತ ಆವಾ ವಾಗೆ ||ಪಲ್ಲ|| ನಿನ್ನ ನಾಮದ ಸ್ಮರಣೆಯೇ ಶುಭಕರ್ಮವು| ಉನ್ನತ ಸಂಕೀ

ರ್ತನೆ ಶತಕೃತುವು|| ಪುಣ್ಯ ಗಂಗಾಸ್ನಾನದ ಫಲಕಧಿಕವು | ಘನ್ನಜಪದ ಬೀಜವೇ ಶ್ರೀ ನಾಮವು ||೧|| ಬಂಗಾರ, ಇಳೆಯನು ಒಲಿದೀವ ದಾನಕೂ | ಹಿಂಗಾಪೆ ಉಭಯ ಸಾಂಗೋಪನಕೂ || ಶೃಂಗಾರ ಕೋಟಿ ಕನ್ಯಾದಾನ ಕಧಿಕವು | ಮಂಗಳ ಮಹಿಮ ಮುಕುಂದನ ನಾಮವು ||೨|| ಧರ್ಮಾರ್ಥ ಕಾಮುಸನ್ ಮೋಕ್ಷವಿದೆಂದು| ನಿರ್ಮಲಶೃತಿಗಳು ಸಾರ್ವವೆಂದೆಂದೂ || ಮರ್ಮವರಿತು ನಾಮ, ನಂಬಿದೆ ಶೇಷಾದ್ರಿಯಾ | ಹರ್ಮ್ಯನಿಲಯ ಪ್ರಸನ್ವೆಂಕಟ ಎನ್ನಯ್ಯ ||೩||

೧೮

**ರಾಗ-ಕೇದಾರಗೌಳ** **ತಾಳ-ಅಟ್ಟ**

ರಕ್ಷಿಸಲರಿಯಾ| ರಂಗಯ್ಯ ಎನ್ನ ||ಪಲ್ಲ|| ರಕ್ಷಿಸಲರಿಯೇನು ಲಕ್ಷುಮಿ ಪತಿ ಎನ್ನ | ಇಕ್ಷಿಸಿ ಕರುಣ ಕಟಾಕ್ಷದಿ ಭಕ್ತನ || ಅನುಪಲ್ಲ|| ದೋಷಿ ನಾನೆಂದು ದೂರಿಡದಿರು ತವ ನಾಮ | ಘೋಷಣೆಗುಳಿವಾದೇನು? ಪಾಪೇನು? || ಹೇಸಿ ದಾರಿದ್ರನೆಂಬುವರಾರು ನಿನ್ನಭಿ | ಲಾಷೆ ಹಿಡಿದ ಬಳಿಕ ಹೇ ಶ್ರೀಶ ||೧|| ಭಾರವಾಗಿಹೆನೇನು? ರೋಮ ಪುಳಿಗಳೊಳು| ಭೂರಿ ಬೊಮ್ಮಾಂಡಗಳ ಧರಿಸಿಹಗೆ || ಮೀರಿದವನೇನಯ್ಯ ಬೆಲೆಪೇಳಿ ಕೈಗಟ್ಟಿ | ಮಾರುವ ಭಟರಲ್ಲಿ ನಾ ಪೇಳುವೆನು, ||೨|| ಆಚಾರ ಹೀನನೆಂದೋಕರಿಸಲಿ ಬೇಡಾ| ನಿಚೋದ್ಧಾರಕ ಬಿರಿದೂ ನಿನ್ನದು || ಪ್ರಾಚೀನ ಕರ್ಮದಿಂದಲಿ ನಾ ದಣಿದ ಮೇಲೆ| ನಾಚಿಕಿನ್ನಾರಿಗಯ್ಯ, ಹೇ ಜೀಯ್ಯ ||೩|| ಜಿತಮನ ನಲ್ಲೆಂದು, ಹತ ಮಾಡೋದುಚಿತವೇ ?| ಪ್ರತಿಕ್ಷಣಕೂದಗು ತಂದೆ ಜಿಪ್ಪೆಗೆ || ಅತೀತಾನಾಗತಘವ ಬಿಡಿಸದಿದ್ದರೆ ನಿನ್ನ | ಪತಿತ ಪಾವನನೆಂಬು ವರೇ, ಕೂಗುವರೇ ||೪|| ಡೊಂಕು ನಡೆಯುವಳ ಕೊಂಕು ತಿದ್ದಿದೆ ನೀನು | ಸಂಖ್ಯೆಗಾಣೆ ನೀ ಕೃಪೆಗೆ ನಾ ಕೊನೆಗೆ || ಕಿಂಕರನಲಿ ದಯವಿರೆ ಸಾಕು ಪ್ರಸನ್ನ | ವೆಂಕಟ ಸಾರ್ವಭೌಮಾ ಸಿಷ್ಕಾಮ ||೫||

೧೯

**ರಾಗ-ಯಮುಳ** **ತಾಳ-ಆದಿ**

ಶಾಶ್ವತ ಭಾಗವತರು ನಗರೆ ಮತಿ | ಮಿಶ್ರರ ನೋಡಿ, ಕೈಹೊಡೆದು || ಪಲ್ಲ || ಮಾಧವನಲ್ಲದೆ ಅದ್ವೈವೀದ್ವೈವಾದಿಗಳ ಹಿರಿಯರು ನಂಬಿದರು||

ಗಳ ಬಿಟ್ಟರೂ ಈ ಧನಧಾನ್ಯ| ಹೋದರೆ ಕೆಟ್ಟೆವೆಂಬರನು ನೋಡಿ | ||೧|| ಕೃಷ್ಣನೇ ಸುಖದಾಯಕನಿರೆ ಸತಿಯಲಿ | ಹುಟ್ಟಿದ ಶಿಶುವಿನ ದೆಸೆಯಿಂದ ಎನ್ನ |ಕಷ್ಟವೆಲ್ಲೋದಿತು ತುಷ್ಟಿಯೊಳಿಹೆನು | ಸೃಷ್ಟಿಗೆ ನಾ ಸುಖಿಯೆಂಬರ ನೋಡಿ ||೨|| ನಾರಾಯಣಾ ದಾತಾರನು ವಿಶ್ವಕೆ | ತೋರುತಿರಲು ನರಧನಿಕರನು || ಆರಾಧಿಸಿದನಾ ಭೂರಿದನಾಢ್ಯನು | ಆರೆನಗೆದುರಿಹರೆಂಬರ ನೋಡಿ ||೩|| ಶ್ರೀಗುರು ಸುಖ ತೀರ್ಥರ ಮಹಾ ಸಂತತಿ | ಯೋಗಿಗಳಂಘ್ರಿಯ ನಂಬಿರದೆ || ಆಗುರು ಈಗುರುವೇ ಗತಿಯೆನುತಲೀ | ಭೂಗುರುವಾಗಿಹ ಯೋಗಿಗಳ ನೋಡಿ ||೪|| ಬೂಟಕ ತೋಟಕ ಭಕುತಿಲಿ ದ್ವಾದಶ| ಘೂಟನಾಮಕೆ ಬುಧರೊಪ್ಪುವರೇ ಜಗ || ನ್ನಾಟಕ ಪ್ರಸನ್ವೆಂಕಟೇಶನ ಗುಣಗಣ | ಘಾಟರೆನಿಪ ವೈಷ್ಣವರಹ ಸಜ್ಜನ ||೫||

೨೦

**ರಾಗ—ಮಾರವಿ** **ತಾಳ—ತ್ರಿವಿಡಿ**

ಹರಿನೀ ಪಿಡಿದ ಕಲ್ಲುವೇ ರತುನಾ|| ಹರಿ ನಿನ್ನಡಿಗಲ್ಲದವನೇ ಯವನಾ ||ಪಲ್ಲ|| ಹರಿ ನೀನೊಲಿದ ಕಪಿರಾಜ ನಿಧಿಯು | ಹರಿ ನೀ ಗೆಲಿಸೆ ಪಾರ್ಥನಿಗೆ ಗೆಲುವು|| ಹರಿ ನೀ ಮುನಿದ ಕೌರವರಿಗೆ ಅಳಿವು ||೧|| ಹರಿ ನೀ ಮೆಚ್ಚಿದ ಅರ್ಭಕರು ಆರ್ಯರು | ಹರಿನೀ ಮೆಚ್ಚದಾರ್ಯ ಕಿರಿಯರು || ಹರಿ ನೀನ್ನುಚ್ಚನ ಗೈವರು ಮಾನ್ಯರು | ಹರಿನಿನ್ನೆಚ್ಚರಿಲ್ಲದ ಜನರುಚ್ಚರು ||೨|| ಹರಿ ನೀ ಕನಕಗಿರಿ ಗಣಿ ಪತಿಯೆನಿಪೆ| ಹರಿ ನೀ ತೃಣವೆಚ್ಚಾ ಮಾಡುತಲಿಪ್ಪೆ|| ಹರಿ ನೀ ಘನಕೆ ಘನ ತರ ಸನ್ಮಹಿಮಾ | ಹರಿ ನೀ ಪ್ರಸನ್ವೆಂಕಟಪ ಹೊರೆಯಮ್ಮಾ || ೩ ||

೨೧

**ರಾಗ-ತೇಲಂಗ ಕಾಂಬೋದಿ** **ತಾಳ-ಅಟ**

ಹರಿಯಲ್ಲದನ್ಯ ದೈವಂಗಳು ಕೈವಲ್ಯ ನೀವವೈನ್ನೈ ಶ್ರೀ || ಹರಿಯ ಕರುಣಸಾಗರಕೆ ಕೂಪ ವಾಪಿಯು ಹೋಲ್ವವೇನ್ನೈ || ಪಲ್ಲ || ಹಳುವದ ಬಿದರು ವೃತದ ಮಳೆಯಲಿ ಇಕ್ಷುವಾಹುವೇನ್ನೈ | ಹಲಕಾಲ ವರೆಗೂ ಬೇಯಿಸಿದರೆ, ಮೃದು ರುಚಿಯಾಗ್ವದೇನ್ನೈ || ೧ || ಕೆಸರು ಮಳಲು ಮೆದ್ದರೊಡಲಾಗ್ನಿ ತಣ್ಣಗಾವಾಹದೇನ್ನೈ | ಬಿಸಲುದೊರಿ ಮಂಜುವಳಿಗೆ ಡಗೆಯ

ತೃಷಿ ಹೋಹದೇನೈ ||೨|| ಮಲಯಾಜಕೆ ಬಲಪತ್ತರ ಭವತಾಪ ಶಾಂತ ವೇನೈ || ಎಳಿಗರು ಮಣ್ಣಾವಿನ ಮೊಲೆಯುಂಡು ಜೀವಿಪದೇನೈ || ೩ || ಹರಿಯೊಪ್ಪದಿರದಾ ಹಲವು ಧರ್ಮಕರ್ಮದಾ ಕಾರಣೇನೈ || ಕರಿಯುಂಡ ಬೆಳವಲ ಹಣ್ಣಿನ ತಿಳಲೆಂದು ಉಳಿವದೇನೈ || ೪ || ಏಕೋ ನಾರಾಯಣಾ ಸೀತ್ ಹೀಗೆಂದರೆ ಆಗಲಿಲ್ಲೇನೈ | ಯಾಕೆ ಶಿವ ಶಂಕರಾದಿದೈವ ಎಂಬ ಮಾತಿದೇನೈ ||೫|| ವಾಸುದೇವನ ಡಿಂಗರರಿಗೆ ಅಶುಭವು ಹೊಂದಬಲ್ಲದೇನೈ| ಕ್ಲೇಶಾಧಿಕವ ನೋಡಿ ಅವ್ಯಕ್ತಾಸಕ್ತರಿಗಾಗ್ವದೇನೈ || ೬ || ಪ್ರಸನ್ನವೆಂಕಟ ಪತಿಯರ್ಚಿಸಿದರೆಲ್ಲ ಇಹ ಕಂಟಕೇನೈ | ಹುಸಿಯಲ್ಲ ಧ್ರುವ,ಬಲಿ, ವಿಭೀಷಣ ರೇ ಸಾಕ್ಷಿ, ನಂಬಿರೇನೈ ||೭||

೨೨

ರಾಗ-ಬಹಿರಿ ತಾಳ-ತ್ರಿವಿಡಿ

ಎಂಥ ಬಾಲಕೃಷ್ಣ ಗೋಪೆ,ರಂತ: ಚೋರನು | ಕಂತು ಕೋಟಿ ಚಲುವ ಎಲ್ಲರ ಭ್ರಾಂತಮಾಡಿದನಿವ ||ಪಲ್ಲ|| ಬಾಲನಾದರೊಳಿತು ಒಳ್ಳೇ ಬಾಲೆಯರ ಮುಗ್ಗು ಪೊಲೆ| ಆಲದಾ ಹಣ್ಣೆಂದು ನಖದಲಿ ಶೀಳಿ ನೋಡುವರೆ|| ಹೇಳಲೇನೆಂತೆನ್ನ ನಳಿ,ತೋಳಲಪ್ಪಿ ತೊಂಡೆಹಣ್ಣು | ಪೋಲುವದೆಂದಧರ ನುಂಡ, ತಾಳಬಹುದೇನಮ್ಮಯ್ಯ ||೧|| ನಿಚ್ಚಟ ಮೈಯೊಳು ನಾವು, ನಿಚ್ಚ ಪೈಯ್ಯ ದೊಳೆಯುವಾಗ | ಬಚ್ಚಲೊಳು ಬಂದು ಕಣ್ಣುಮುಚ್ಚಿ ಆಟ್ಟ ಹಾಸದಿ || ಸಚ್ಚಿದಾನಂದ ಗೋಪಾಲ, ಎಚ್ಚರದಗಂಗಳೆಯರಾ | ಹುಚ್ಚು ಮಾಡಿ ಹೋದ ಸಿವನ, ನೆಚ್ಚಬಹುದೇನಮ್ಮಯ್ಯ ||೨|| ಹತ್ತಿಲಿದ್ದ ಸುಪ್ತ ಪುರುಷ,ನ್ನೊತ್ತಿ ರತಿ ಕಳೆದೋರಿ | ಚಿತ್ತ ಸೂರೆಗೊಂಬುದ್ಯಾವ ಕೃತ್ಯ ರಂಗಗೆ || ಸುತ್ತಿನವರರಿಯರೆಂದು, ಚಿತ್ತವಾಯಿತಲ್ಲದೆ | ಅತ್ತೆಮಾವ ಕಂಡ ರಮ್ಮ ತೊತ್ತುಮಾಡಿ ಬಡಿವರೆ ||೩|| ತಟ್ಟನೆ ಬಂದು ಬಾಯೊಳು ಬಾಯಿಟ್ಟು ಮುದ್ದುಗಳನ್ನಿಟ್ಟು | ಬಟ್ಟ ಕುಚವಿಡಿದೆಮ್ಮಾ ವ್ರತ ರಟ್ಟು ಮಾಡ್ವನು || ಧಿಟ್ಟ ಜಾರನಿಗೆ ಕೈಯ್ಯ ಕಟ್ಟುವೆವೆಂದರೆ ಚಲ್ವಾ | ಬಟ್ಟಾಗಲ್ಲಾ ಕಚ್ಚಿ ಜಗಜಟ್ಟಿ ಓಡಿದನಮ್ಮಯ್ಯಾ || ೪ || ಚಿನ್ನನಾದರೇನು ಚೊಕ್ಕ ಚಿನ್ನದಂಥಾ ಗುಣವುಳ್ಳ | ಚಸ್ನಿಗನಾ ರೂಪಕೊಲಿದ ಕನ್ಯೆಯರು ಪೂರ್ವದ || ಪುಣ್ಯ ವಂತರಲ್ಲದೆ ದೊರಕನ್ಯರಿಗೆಯುಂದೂ ಪ್ರ | ಸನ್ನ ವೆಂಕಟೇಶ ಸಿಕ್ಕದಿನ್ನು ಸುಖದಕ್ಕಿತೇನಮ್ಮಯ್ಯ ||೫||

೨೩

**ರಾಗ— ಶಂಕರಾಭರಣ** **ತಾಳ— ಅಟ**

ಎಂಥಾ ದಯವಂತನೋ | ಲಕ್ಷುಮಿಕಾಂತಾ | ಎಂಥಾ ದಯವಂತನೋ ||ಪಲ್ಲ|| ಕರಿಜನ್ಮ ತಾಳ್ದರಸನು ನೀರೊಳಗೆ ನೆ | ಕ್ಕರಕೂಡ ಕಾದಿ ಮುಳುಗೇ || ಹರಿ ಹರಿಯೆಂದು ಹರಣವ ತೊರೆವಾಗ | ಬರೆ ಮಂಡೆಯಲಿ ಬಂದು ಭರದುದ್ಧರಿಸಿದೆ ||೧|| ಶೂಲಿಯ ಮತಿಕದ್ದು ವರ ಕೊಂಡು ಮಹಾಸುರ| ಮೇಲೆ ಬೆಂಬತ್ತೆ ಶ್ರೀ ಲೋಲಾಕಾಲಕೆ|| ಆಲೋಚಿಸಿ ಬಾಲೆಯಾಗಿ ಖಳನ ಜ್ವಲಿಸಿ, ಕ| ಪಾಲಿಯ ಪಾಲಿಸಿದೆ ಸುರಶಾರ್ದೂಲಾ||೨|| ನಿನ್ನನುಜೆಯುಳ ಮಾನವಾ ಕೊಂಡೆನೆಂದು | ಕುನ್ನಿ ಕೌರವನೆಳೆಯೇ ಕೃಷ್ಣನಾ ಪ್ರಾ | ಸನ್ನ ವೆಂಕಟೇಶ ನಿನ್ನ ಕೂಗಿ ಕರೆಯೆ | ಮನ್ನಿಸಿ ಬಣ್ಣ ಬಣ್ಣದ ವಸ್ತ್ರ ನುಡಿಸಿದೆ ||೩||

೨೪

**ರಾಗ— ಕನ್ನಡ-ಕಾಂಬೋಧಿ** **ತಾಳ— ತ್ರಿಪುಟ**

ಎಳೆಯಾ ನೆನ್ನದಿರಮ್ಮ ಎಲೆ ಗೋಪಿ, ಕೃಷ್ಣಗೆ || ಕೆಳದೇರುಟ್ಟಿಹ ವಸನ ಕಳೆವ ಶ್ರೀ ರಮಣಗೆ || ಪಲ್ಲ || ನಡ ಇರುಳೇ ಬಂದೆಮ್ಮಾ ನಲ್ಲರಂತೆ ಮಾತನಾಡಿ | ಪಿಡಿದು ಚುಂಬಿಸಿ ಪರಿಯಂಕಾದಲ್ಲಿ ಕೂಡಿ | ಮಡದೆಯ ರಂತೆ ನಾವು ಮಾಯಾ ಮೋಸದಿ ಗೆಲುವ | ಒಡನೆ ಗೋಪಾಲನಂತೆ ಒಪ್ಪುವ ಗಾಡಿಕಾರಗೆ || ೧ ||ಬಾಲನಂತೆ ಕಂಗೊಳಿಸಿ ಬೀದಿಯೊಳು ಸುಳಿಯುತ | ಲೀಲೇಯಿಂದೆತ್ತಿಕೊಂಡು ನೇಹ ತೋರಿ ಅಪ್ಪುತ || ನೀಲದಾ ಹಣ್ಣುವರ್ಣ ತಾ ನೆಲದಾ ಹಣ್ಣುಬೇಡವಾ | ಮೇಲಣ ಮಾತೇನೆ ಮುಗ್ಧ, ಮೊಲೆಗೆ ಹೆಣಗುವಗೆ ||೨|| ರನ್ನದುಂಗುರದ ಬೆರಳ ರತಿಗೆ ಮಾರನ ಸರಳ | ಕನ್ನೆಯರ ಚೆಲ್ವ ಕಣ್ಣುಸೊನ್ನಿಲಿ ಮೋಹಿಸುವ || ಚಿನ್ನನೆನ್ನ ಬಹುದೆ ಇವಗೆ ಚಟುಲಾ ಪ್ರಾಯದವಗೆ ಪ್ರ | ಸನ್ನ ವೆಂಕಟೇಶ ನಮ್ಮಸೇರಿ ಬೆನ್ನು ಬಿಡನಮ್ಮಾ ||೩||

೨೫

**ರಾಗ— ವಸಂತ** **ತಾಳ— ಅಟ್ಟ**

ಕಂಗಳು ಹಿಂಗದಿರಲು ಎನ್ನ, ನಿನ್ನ || ಮಂಗಳಾಂಘ್ರಿ ಸರೋಜಗಳಲ್ಲಿ ಕೃಷ್ಣಾ ||ಪಲ್ಲ|| ತಿಕ್ಷಿಯನಳಿದಾ ಋಷಿ ಸತಿಯಾಘ ಕಳದಿ| ಶೃತಿ ಸಾರಸ್ತುತಿ

ಗೊಮ್ಮೆ ಇತಿಗೊಡದೊಲಿದಿ || ಯತಿ ಮುನಿ ಜನ ದೇವ ತತಿಗಳ ಮನದಿ | ಪ್ರತಿಕ್ಷಣ ತಟಿತಾದೀ | ಧೃತಿಯುಳ್ಳಾ ಪದದಿ ||೧|| ಜಗದಾಘ ಹರಿಯೆಂಬ ಮಗಳನು ಪಡೆದೆ | ಮಿಗಿಲಾದ ಕೃತುಕರ್ತನಿಗೆ ಒತ್ತಿ ಪೊರದೆ | ಖಗವಾಹ ದನಕರಾವುಗಳೊಳು ಮೆರೆದೆ | ವಿಗಡಾಹಿ ಮೌಳಿಯೊೞ್ ಧಿಗಿಲೆಂದು ಕುಣಿದೆ ||೨|| ಶ್ರೀಚಕ್ಷು ಚಕೊರ ಪೂರ್ಣಚರಂದ್ರ ನಖದ | ನೀಚಾಹಿ-ಕೇತುನಾ ನಾಚಿಶೆಲ್ಯಸದಾ || ಶ್ರೀ ಚನ್ನ ಪ್ರಸನ್ನ ನ್ವೆಂಕಟಾಚಲದಿದ್ದೆನ್ನಾ| ಆಚರಣೆಗಕ್ಷಯ ಸೂಚಿಪ ಪದವನ ||೩||

೨೬

**ರಾಗ—ಧನಾ ಶ್ರೀ** **ತಾಳ—ತ್ರಿವಿಡಿ**

ಕಂಡೀರೇನೆ ಕಂಡಿರೇನೆ ಹಿಂಡು ಗೋಪೇರೂ || ಪುಂಡರೀಕ ವರದ ಶ್ರೀ ಪಾಂಡುರಂಗ | ಕೃಷ್ಣಯ್ಯನಾ || ಪಲ್ಲ || ಬಮ್ಮನ ಅಂಜಿಕಿಲ್ಲದೆ | ಅಮ್ಮೆಯನುಣ್ಣದೆ ಹೋದ | ನಮ್ಮ ಶ್ರೀರಂಗಾ ಸುಮ್ಮನದೀ ಭೀಮ್ಮರಥಿಯ ಲಿದ್ದಾನಂತೆ ||೧|| ಎಡಬಲಕೆ ತಾ ನೋಡಾದಲೆ ನಡೆದಂಥ ಕಾರಣವೇನೆ || ಹಡದವರ ಮೇಲೆ ಹೀಗೆ | ಕಡುಕೋಪಾ ಉಚಿತವೇನೆ ||೨|| ಗೆಜ್ಜೆಘಿಲ್ಲು ಒಡ್ಯಾಣದಾ ಗುಜ್ಜನ ಕಾಣದೆ ಕಣ್ಣು || ಕಜ್ಜಲ ನೀರುಗೂಡಿವೆ ದುರ್ಜನಾರಿ ಕೃಷ್ಣಯ್ಯಾನಾ ||೩|| ತಾಯಿ ತಂದೆರಗಲಿ ತಾನು ಬಯಲೊಳಗೆಂತಿಕ್ಯನೇ || ಮಾಯದ ಲೀಲೆಗಳ ನೋಡ್ವ ಒಯಕೆ ಕೈಗೂಡಲಿಲ್ಲಾ ||೪|| ಆಡುತಾಡುತಾ ಬತ್ತಲೆ | ಓಡಿದಾ ವಾಜಿಯನೇರಿ || ರೂಢಿಯೊೞ್ ಪ್ರಸನ್ವೆಂಕಟ | ನಾಡಿಗೊಡಿಯ ವಿಠಲನಯ್ಯಾ ||೫||

೨೭

**ರಾಗ—ಸಾರಂಗ** **ತಾಳ—ಅಟ್ಟ**

ಕೋಮಲತಿ ಶುಭಗಾತ್ರನ | ಮಹ ತಾಮರಸದಳ ನೇತ್ರನ || ಸ್ವಾಮಿ ಶ್ರೀನಿವಾಸನ ಕಂಡೆ | ಹೇಮಗಿರಿ ವರ ದೀಶನಾ ||ಪಲ್ಲ|| ಕನ್ಯೆ ಲಕುಮಿಯ ನೆತ್ತಿದ ಶುಭ ಚಿನ್ನದ್ಹಕ್ಕಿಯ ಹತ್ತಿದ | ರನ್ನದುಡಿಗೆಗಳಿಟ್ಟನ ಸು | ವರ್ಣದಬಂರ ನುಟ್ಟನ || ಕರ್ಣ ಕುಂಡಲ ಬೆಳಗಿನ ನು | ಣ್ಗನ್ನೆಲ್ಯಲುಗುವ ಕುರುಳಿನ | ಸಣ್ಣ ನಾಮದ ನೊಸಲಿನ ಶ್ರೀ, ಚಿನ್ಮಯದ ಕಾಯ

ಚಲುವನ ||೧|| ಕುಂದ ಕುಡ್ಮಲ ಮಾಲೆಯು, ಪ್ರಭೆ| ಗುಂದದ ಮುಕುಟ ಮೌಳಿಯು | ಶಂದನಾಂಗದರಾಭಯಾವರ | ಹೊಂದಿದಮಲಸು ಪಾಣಿಯಾ || ಮುಂದೆ ನಾರದ ಹನುಮ ಗಾಯನ | ನಂದದಲಿಶಾ ಕೇಳುವ | ಹಿಂದೆಡಬಲದಿ ಛತ್ರವ ಪಿಡಿ | ದಿಂದಿರೆಯುರೊಳೊಪ್ಪುವ ||೨|| ಘೋರ ಮುತ್ತಿನ ಹಾರಪ ಕೇ | ಯೂರ ಕೌಸ್ತುಭ ವಕ್ಷದ | ಚಾರು ಸ್ಮಿತ ಮುಖರೋಚಿಯು | ದಯವಾರಿಧಿಯ ಮಹೋದಾರಿಯ || ಸಾರಿದರ ಸುರ ತರುವಿನ ಸುರ | ವೈರಿ ಕರಿ ಪಂಚಾನನ | ಭೂರಿ ಪ್ರಸನ್ವೆಂಕಟೇಶನ | ಹೃದಯಾರವಿಂದ ಸಿವಾಸನ ||೩||

೨೮

**ರಾಗ—ತೋಡಿ** **ತಾಳ—ಝಂಪಾ**

ಕೃಷ್ಣಲೀಲಾನಂದ ನೋಡಿರೈ ಶ್ರೀ | ಕೃಷ್ಣ ಕೃತಿಯಾ ಛಂದಪಾಡಿರೈ|| ಕೃಷ್ಣ ಗೋಪೇರಂದಾ ನೋಡಿರೈ ಬಾಲ| ಕೃಷ್ಣ ಮುಕುಂದನಾ ಪಾಡಿರೈ || ಪಲ್ಲ || ಬಾಲರ, ವಿಭು ಬೆಣ್ಣೆ ಮಸರಾ ಸವಿದು ಗೋಪ | ಬಾಲೆರ ವಿಭಾಡಿಸಿ ತಾ ಮೆಲುವಾ || ಬಾಲರವಿಭಾನಖ ತೇಜದೊಳಾ ಡುವಾ | ಬಾಲರ ವಿಭವನು ನೋಡಿರೈ ||೧|| ಸಮಕಾಲದಲಿ ಕಾರಣನಾಗಿ ಜಗಕೆ ತಾ || ಸಮವಯ ಗೋವರ್ಗಳಿಯನಾದನು || ಸಮವಿಲ್ಲೆಶೋದೆ ನಂದರ ಭಾಗ್ಯ ಮಗನಾದಾ | ಶಾಮ ಮಯ್ಯವನ ಮುಖ ನೋಡಿರೈ ||೨|| ಕಣ್ಣಿಲ್ಯಾಲಿಸದೆ ವಿಶ್ವ ಹೊರೆವ ವತ್ಸ | ಕಣ್ಣಿಲೊಲಿದು ಕಟ್ಟಿಸಿಕೊಂಡನು || ಕಣ್ಣಿಲ್ಯಾಲಿಯನುಳ್ಳ ಪ್ರಸನ್ವೆಂಕಟೇಶನ| ಕಣ್ಣಿಲಿ ಲಯವಿಟ್ಟು ನೋಡಿರೈ ||೩||

೨೯

**ರಾಗ—ಪೂರ್ವಿ** **ತಾಳ—ಅಟ್ಟ**

ಚಿಣ್ಣರೊಡನಾಟನಾಡಿದಾ ನಮ ರಂಗ ||ಪಲ್ಲ|| ಇಟ್ಟೊ ಹಣಿಯೊಳು ಉಗುರು ನಾಮದ ಗೋಪ | ಗಟ್ಟಿಗೆಯನು ಕರದೊಳು ಪಿಡಿದು || ಪಟ್ಟೆ ಗಂಬಳಿ ಹೊದ್ದು ಪದಕೆ ಪಾದುಕಗಳ | ಮೆಟ್ಟಿ ಅಣ್ಣ ಬಲರಾಮ ನಡೆಯೆಂದು ||೧|| ಆಡಲೊಲ್ಲೆನೆಂಬ ಮಕ್ಕಳ ಮನ್ನಿಸಿ | ಕೂಡಿಕೊಂಡು ಅಣ್ಣತಮ್ಮನೆಂದು || ಹಾಡುತ ಕುಣಿದು ಚಪ್ಪಾಳೆ ಹೊಯಿದಾಡುತ | ಓಡಾಡಿ ಅಮ್ಮನ ಮಾತು ಕೇಳದೆ ಕೃಷ್ಣಾ ||೨|| ಚಿಣ್ಣಿ ಪೊಂಬಗರ್ಚಂಡು |

ಗುಮುಗುಸುಕುದು ಹಬ್ಬೆ| ಅಣ್ಣಿ ಕಲ್ಲು ಹಳ್ಳಿ ಗಜಗ ಘಲ್ಲೆ || ಕಣ್ಣು ಮುಚ್ಚಾಳೆ ಮರನೇರಾಟ ಸೀರಾಟ। ಸಣ್ಣರೋಳಾಡಿ ಸೋಲಿಪೆನೆಂಬ ತವಕದಿ ||೩|| ರಾಜಿಪ ರಾಜಬೀದಿಲಿ ನಿಂದು ನೋಡುವ| ರಾಜಮುಖಿಯು ರೊಳು ಶಣಶಾಡುತ || ರಾಜಕುಲಾಗ್ರಣಿ ಸರ್ವಭೂಷಣದಿ ವಿ| ರಾಜಿತ ನಾಗಿ ಘೋಳಿಡುತಾ ಮುರಾರಿ ||೪|| ಜಗವ ಪುಟ್ಟಿಸಿ ನಲಿದಾಡುವಾಟವು ತ| ನಗೆ ಸಾಲದೆಂದು ಆವೀನ ಹಳ್ಳೀಲಿ || ಬಗೆ ಬಗೆ ಲೀಲೆಯು ತೋರಿ ಗೋವಳರ್ಗೆ | ಸುಗತಿ ನೀವೆನೆಂದು ಪ್ರಸನ್ವೆಂಕಟ ಕೃಷ್ಣ ||೫||

೩೦

**ರಾಗ—ಭೈರವಿ** **ತಾಳ—ತ್ರಿಪುಟ**

ಡುಮ್ಮಿ ಸಾಲೆನ್ನಿ, ಪರಬೊಮ್ಮನಾಳು ಮೂರು ರೂಪ। ಕಮ್ಮ ಗೋಲ ನಳಿದನೊಡೆಯು। ನಮ್ಮ ಗುರು ಬಳಗವೆಂದು || ಪಲ್ಲ|| ಮುಟ್ಟಿಸೆ ಸುದ್ದಿಯ ರಾಮನಟ್ಟಿದರೆ ರಕ್ಕಸರ| ಕಟ್ಟಿ ಕುಟ್ಟಿ ಕುಣಿದು ಮೆದೆ ಗಳೊಟ್ಟಿಲೊಟ್ಟಿದಾ || ಧಿಟ್ಟಾತನದಲ್ಲಿ ಲಂಕಾಪಟ್ಟಣ ಮಂದಿರ ಹೋಳಿ | ಸುಟ್ಟು ಬೊಬ್ಬಿಟ್ಟ ಜಗಜಟ್ಟಿ ಹನುಮಪ್ಪನ ||೧|| ಕುರು ಕಂಟಕ ಠಕ್ಕಿಸಿ ಕೊಟ್ಟರಗಿನ ಮನೆಯಲಿ ಕಾಯ। ಲೊರಗಿದವರ ಉರುಹಿ ನಿಜರ ಹೊರಗೆ ಮಾಡಿದ || ಕುರುಗಣ ವನ ವನಾರಣದಿ, ಎರಗಿ ಅಗ್ನಿಯಂತೆ ಹುರಿದ | ವರಗದಾಧರ ಅರಿಬಲ ಭೀಮ, ಸಾರ್ವಭೌಮನಾ ||೨|| ಧರಿ ಸಮಗ್ರ ರಾಜಕೆಂದು ಅರಸುಪದವಿಧರರು ಸೊಕ್ಕಿ | ಸರಸವಾಡಿ ಮಿಥ್ಯ ನುಡಿಯೇ ಹರುಷ ತೀರ್ಥರೂ || ವಿರಸ ಪೋಕರರಳಿದು ಜಗಕೆ ಹರಿಸರ್ವೋತ್ತಮ ನೆಂದು ಸ್ಥಾಪಕ। ಶಿರಿ ಪ್ರಸನ್ವೆಂಕಟೇಶನ ಸ್ಥಿರದಾಸ ಮಧ್ವಚಾರ್ಯರು ||೩||

೩೧

**ರಾಗ—ಭೂಪ** **ತಾಳ-ತ್ರಿಪುಟ**

ತೋಳನೆಂಬೆನು ತೋಳ ಲಕುಮಿ ಆಲಂಗಿಪಾ ತೋಳೆ| ಬಾಲರತ್ನಾ ತೋಳನಾಡ್ವೆ ಬಾಲಕೃಷ್ಣಾ ನಾಡೆ ||ಪಲ್ಲ|| ಕಂದೀ ಕುಃದ್ಯಾ ಕ್ರಂದಿದ ನಾಗನ| ಬಂದೆತ್ತಿದಾ ತೋಳೆ| ನೊಂದಾ ಕಂದಾನೆಂದು ತೊಡೆಯಲಿ। ಹೊಂದಿಸಿಕೊಂಡಾ ತೋಳೆ ||೧|| ಹರಧನು ಜರಿದು, ಮುರಿದಾ ವಿಕ್ರಮ| ಬಿರಿದಂಕನಾ ತೋಳೆ| ಮರಿಯದೆ ಕರದರಾದರದಿಂ ಬರವಾ| ವರಧೀ

ಶ್ಯಡಸಿದ ತೋಳೆ ||೨|| ದಾಶ ವಂಶ ವಿಪ್ರೋಷ,ರಿಪುಜನ | ನಾಶ ಕಾರಣದ ತೋಳೆ | ಶೇಷಗಿರೀಶಾ ಪ್ರಸನ್ನವೆಂಕಟ | ವಾಸ.ರಂಗನ್ನ ತೋಳೆ ||೩||

೩೨

ರಾಗ—ಬಹರಿ ತಾಳ—ಆದಿ

ದೇವ ದೇವೇಶ ವೆಂಕಟೇಶ || ಶ್ರೀ ವಿಧಾತಾ ವಂದ್ಯ | ಭೂ ವೈಕುಂಠೇಶ ||ಪಲ್ಲ|| ಕಾಮಿತಫಲದಾತ ಜಗದಾಧ್ಯಕ್ಷ | ಸಾಮಗಾನ ಪ್ರೀಯ ಸುರಸತ್ಪಕ್ಷಾ || ಶ್ರೀಮಾವಧೂಮನೋಹರ ತ್ರಿಧಾಮ ಶ್ರೀ | ರಾಮ ಸಂಪ್ರೇಮಾಬ್ಧಿ ಕೋಮಲ ಕುಕ್ಷಾ ||೧|| ರಾಕೇಂದುರವಿಕೋಟಿ ಸುತೇಜ, ಸ್ವಾಮಿ | ನಾಕಪಾರ್ಜಿತ ಪದಾಂಭೋಜಾ || ವ್ಯಾಕೀರ್ಣಾ ನೇಕಜಾಂಡಾಂಕಿತ ವ್ಯಾಕೃತ | ಶ್ರೀಕಾರಾ ಸಾಕಾರಾ ಲೋಕೇಕ ಪೂಜ್ಯಾ ||೨|| ಅನಂತಾ ಗುಣಪರಿಪೂರ್ಣ, ಸ್ವಾಮಿ | ಆನತ ಜನ ಬುಧಾ ಭರಣ || ಧೇನೂ ಗಿರಿನಾಥ ದಾಸಿ ಪ್ರಸನ್ವೆಂಕಟ | ಜಾನಾನಂದಾ ಸಿತ್ಯಾ ತೇ ನಮೋ ಕರುಣಿ ||೩||

೩೩

ರಾಗ–ಧನಾ ತಾಳ ಝಂಪಿ

ನಮೋ ನಮೋ ಕೃಷ್ಣವೇಣಿ | ನಮೊ ನಮೋ ಕೃಷ್ಣವೇಣಿ ಕಲ್ಯಾಣಿ ||ಪಲ್ಲ|| ಈ ಜನ್ಮದಘವು ನಾನಾ ಜನ್ಮಕೃತದೋಷ| ಆರ್ಜಿತವಾದ ಪಂಚ ಮಹಾಪಾಪವು | ಶ್ರೀ ಜಗತ್ಪಾವನಿಯೆ ನಿನ್ನ ಕಂಡು ನಾ ಕಳದೆ | ರಾಜಿಸುವ ದಿವ್ಯಗತೀಯೀಯೆ ಎನ್ನ ತಾಯೆ ||೧|| ವಿಪ್ರಮುನಿ ಸುರನರರು ಕನ್ಯಕ್ಕೆ ಗುರು ಬರಲು | ಕ್ಷಿಪ್ರ ನೆರೆದರು ಉಭಯ ತೀರವಿಡಿದೂ || ಸುಪ್ರಾರ್ಥನೆಯ ಮಾಡಿ ಆನಂದದಿ ಹರಿಯ | ನೆ ಪ್ರಸನ್ನೀ ಕರಿಸಿಕೊಳ್ಳುವ ರಂಮಾ ||೨|| ನಿರ್ಮಳಾತ್ಮಕೆ ಗಂಗೆ ಸಂಗೆ ಗುಣೋತ್ತುಂಗೆ | ಹಿಂಗಿಸು ಭವವ ಪಾವನ ತರಂಗೆ || ಜಂಗಮ ಜಡಾತ್ಮರನುದ್ಧರಿಸುತಿಹೆ ಸದಾ | ಮಂಗಳ ಶ್ರೀ ಪ್ರಸನ್ವೆಂಕಟನೊಲಿಮೆಯಲ್ಲಿ ||೩||

೩೪

ರಾಗ—ಹಮೀ ತಾಳ—ಝಂಪಾ

ನಂದನ್ನ ಕಂದ ಗೋವಿಂದಾ ಮುಕುಂದಾ | ಇಂದಿರಾ ವಂದಿತಾ ಇಂದು ಕುಲೇಂದ್ರಾ ||ಪಲ್ಲ|| ಗೋರಸಾ ಚೋರಾ ಗೋಪೀರಮಣಾ ಧೀರ|

ಗೋರಜ ಪೂರಿತ ಚಾರ್ವಲಂಕಾರ || ಗೋರಕ್ಷ ಕ್ರೂರ ಸಂಹಾರ ಉದಾರ| ವೀರ ಸುಯಮುನಾ ತೀರ ವಿಹಾರಾ ||೧|| ಶೇಷ ಶೀರ್ಷನೃತ್ಯಾಹಾಸ ವಿಲಾಸ| ವಾಸವ ಮದನರ| ವ್ರಜಪೋಷ ನಿರಾಶ | ಭಾಸುರಚರಿತ ಭಕ್ತರ ಮನೋಲ್ಲಾಸ| ದಾಸಕ್ರೂರಾಶ್ರೇಯ ಕಂಸ ವಿನಾಶಾ ||೨|| ಪುಣ್ಯ ಗುಣಾನ್ವಿತ ಸುವರ್ಣ ವೇಣುಗಾನಾ । ಚಿನ್ಮಯ ಪನ್ನಗನಿಲಯ ಪೂರ್ಣ || ಮನ್ನಿಸು ನಿನ್ನ ಭೃತ್ಯರ ಭೃತ್ಯ ಎನ್ನ ಪ್ರ । ಸನ್ವೆಂಕಟ ಧನ್ಯಾ, ನಾ ನಿನ್ನವನೆನ್ನೋ || ೩ ||

೩೫

ರಾಗ-ಭೀಮಪಲಾಸ ತಾಳ ಝಂಪಾ

ನಿನ್ನ ಮಹಿಮೆಗಳೆಲ್ಲ ನೀನೇ ಬಲ್ಲೆಯ್ಯಾ ॥ ಚಿನ್ಮಯ ಗರುಡಗಿರಿ ಮಾನ್ಯ ತಿಮ್ಮಯ್ಯಾ || ಪಲ್ಲ || ನಿಜರಾಣಿಗಂಘ್ರಿ ನಖ, ನಿಜವು ತಿಳಿಯದ ಮಹಿಮ| ವ್ರಜದಿ ವದನದಿ ತಾಯ್ಗೆ, ತ್ರಿಜಗ ತೋರಿದ ಮಹಿಮ । ಅಜ ಫಣಿಗಳುಘ್ಘಡಿಸೆ ಅಜಮಿಳ ರಕ್ಷಕಮಹಿಮ। ಭಜಕರನು ಬಿಡದೆ ಸದಾ ಸಂರಕ್ಷಿಸುವ ಮಹಿಮ ॥ ೧ ॥ ನಿಲ್ಲುವ ಮುನಿ ಮನದಿ ಚಲ್ವಚರಣದ ಮಹಿಮ । ಬಲ್ಲಿದ ಬಲಿಯ ಕೆಳಗೊತ್ತಿದ ಮಹಿಮೆ । ಖುಲ್ಲರಿಗೆ ದೊರಕದ ಮಹಿಮೆ ಗೊಲ್ವೆಂಗಳೆರ । ಭುಲ್ಯೈಪ ಘನ ಮಹಿಮೆ, ಅಮಿತಸದ್ಗುಣ ಧಾಮ ॥೨॥ ವೈಕುಂಠ ಮಂದಿರದಿ ಮುಕುತ ರೊಂದಿತ ಮಹಿಮೆ | ಗೋಕಲದಿ ಗೊಲ್ಲರಾಕಳು ಕಾಯಿದ ಮಹಿಮೆ ಅ । ನೇಕ ಜಾಂಡದಿ ಪೂರ್ಣನಾಗಿ ತೋರಿದ ಮಹಿಮೆ, ಪ್ರಸ । ನ್ವೇಂಕಟಾದ್ರಿಯ ಮ್ಯಾಲೇ ಮೆರೆವ ಮಹಿಮೆ ॥೩॥

೩೬

## ಉಗಾಭೋಗ

ರಾಗ—ಬಹರಿ ತಾಳ-ಬಲಂದಿ

ನಿನ್ನ ಮಹಿಮೆಯನಾರು ಬಲ್ಲರು । ಚಿನ್ಮಯಾತ್ಮಕನಂತರೂಪನೆ ॥ ಮುನ್ನೆ ಕಮಲಜ ನಿನ್ನ ನಾಭಿಯೊಳುನ್ನತೋನ್ನತದಿ ॥ ಘನ್ನ ತಪವಂಗೈದು ಕಾಣನು । ಇನ್ನು ಶ್ರುತಿ ಸ್ಮೃತಿ ಅರಸಿ ಅರಿಯವು। ಪನ್ನಗೇಂದ್ರನು ಪೊಗಳಲರಿಯ ಪ್ರಸನ್ವೆಂಕಟನೆ ॥೧॥ ಹರಿಯೆ, ತ್ರಿದಶರ ಧೊರೆಯೆ, ಭಕತರ। ಶಿರಿಯೆ, ದಿತಿಜಾರರಿಯೆಽ ನವರತ । ಮರಿಯದಿಹ ಅಜ ಹರಯತೀಶ್ವರ

ರರಿಯರಿನ್ನುಳಿದ|| ಇರವು ಮನುಜ ನಾ ಕರಿಯ ಲಾಪಿಸೆ| ಪೊರಿಯೊ ಬಿಡದೆ ಪ್ರಸನ್ನವೇಂಕಟ| ಗಿರಿಯರಸೆ ಜಗಧೊರೆಯೆ ಸುರವರವರಿಯ ಮಾಸಹಸೇ ||೨|| ನಾಗರಿಪುಗಮ ನಾಗಭೃತ ಶುಭ| ನಾಗಪಕ್ಷಘನಾಗಮ ನಿಗಮ| ನಾಗಪತಿವದನೈಕಸ್ತುತ ಸುಗುಣಗುಣಾರ್ಣವನೆ || ನಾಗಹರ ಸಖ ನಾಗಗನ ಮಣಿ| ನಾಗಗ್ರಸಿತಭಾ ನಾಗದ್ವಿಟ ಮುಖ| ನಾಗಧರಸುತ ನಾಗ ಮಂದಹ ಪ್ರಸನ್ವೆಂಕಟೇಶಾ ||೩||

೩೭

ರಾಗ-ಸಾವೇರಿ ತಾಳ-ಅದಿ

ಪಾಲಯ ಸೀತಾರಾಮ ಭೌಮಾ ||ಪಲ್ಲ|| ದಶರಥನಂದನ ದಶಮುಖ ಭಂಜನ ತ್ರಿ| ದಶಭಯ ಶಮನ, ಸುಸ್ಮಿತ ವದನ ||೧|| ವಾತಜನುತ ಭವ, ಪಾತಕಹರ ವಿಧಿತಾತ, ಪು| ನೀತಪದ ಭೂತಪವರದಾ ||೨|| ದಿನ ಕುಲ ರಕ್ಷಾ ದೀನಜನರಕ್ಷ। ಮುನಿಜನ ತೋಷಾ ಪ್ರಸನ್ವೆಂಕಟೇಶಾ ||೩||

೩೮

ರಾಗ—ಮಲಹರಿ ತಾಳ—ಏಕ್ತಾ

ಪಾಲಿಸೊ ವನಮಾಲಿ ಮುಂದೆನ್ನ| ಬಾಲಕನಲೆ ಆಶಾಲೇಶದವನ ||ಪಲ್ಲ|| ಹದ್ದನೇರ್ವಾನಿರುದ್ಧ ನಿನ್ನಲ್ಲಿ| ಬುದ್ಧಿ ನಿಲ್ಲದು ಶುದ್ಧ ವೃತ್ತಿಲಿ || ಮುದ್ದು ಮಕ್ಕಳು ಮುಗ್ಧರಾದರಯ್ಯಾ| ತಧ್ಯಾನಾಲಾಪ ಬಿಟ್ಟದ್ದಲ್ಲಯ್ಯಾ ||೧|| ತುಲಸಿ ಪುಷ್ಪಾಂಜಲಿ ತರಲಿಲ್ಲಾ| ಪೊಳೆವಂಘ್ರಿಗರ್ಪಿಸಲು ಹೊತ್ತಿಲ್ಲ || ಬಲು ಧನಾ ಬಹ ಕೆಲಸ ಕೈಕೊಂಡೆ| ಕಲಿಕೂಡಾ ನಿರಯಪ ಭೋಗುಂಡೆ ||೨|| ಆಡುವ ಮಾತು ಮಾಡಲರಿಯೆ| ಬೇಡುವ ಗುಣ ನೀಡಲಿಕ್ಕರಿಯೆ || ಖೋಡಿಗುಂಟೀ ಸುಖ ಹೇಳು ತಂದೆ। ಹಾಡುವೆ ನಿನ್ನ ಕಾಡುವೆನಿಂದೆ ||೩|| ಹೆತ್ತತಾಯಿ ಕುತ್ತಿಗೊತ್ತಿದರೂ ।ಮತ್ತೆ ತಂದೆ ಮಾರಲಿತ್ತರೂ| ಪೃಥ್ವಿಪಾ ಸುಲಿದರೆ ಕೇಳುವರಾರು| ಕರ್ತನೀನಿಪ್ಪೆನ್ನೆತ್ತುವರಾರು ||೪|| ಕರಣವಾರಿಧಿ

ಕರುಣಿಸು ಗಡ| ಪರಮ ಭಾಗವತರಲ್ಲಿಡು ಪ್ರೌಢ|| ಪರಸನ್ನ ವೆಂಕಟ ಕರೆಸಯ್ಯಾ| ಮರಣ ಹೊಂದದರಮನೆಗೆ ಜೀಯ್ಯ ||೫||

೩೯

ರಾಗ— ತೋಡಿ-ವರಾಳಿ ತಾಳ— ಏಕ

ಪಾಲಿಸೊ ಶ್ರೀರಾಮಾ| ಪೂತ ನೀರದ ಶ್ಯಾಮಾ ||ಪಲ್ಲ|| ಕೌಶಿಕ ಪ್ರಿಯಾ ಸುಸತಿಸಹಾಯಾ| ಕೌಸಲ್ಯಪುತ್ರ ಕಮನೀಯ ಗಾತ್ರಾ ||೧|| ಪಶು ಪತಿವಂದ್ಯಾ ಪರಮಾನಂದಾ| ದೂಷಣ ಖರಾರೀ ದಶಶಿರಹಾರಿ ||೨|| ಋಷಿ ಹೃದಿ ಪೂರ್ಣ ರಘುಕುಲರನ್ನ| ಪ್ರಸನ್ವೆಂಕಟೇಶ ಪವನಜ ತೋಷಾ ||೩||

೪೦

ರಾಗ—ಶಂಕರಾಭರಣ ತಾಳ— ಆದಿ

ಪಾಹಿ ಮಾಂ ಪಾಹಿ| ಸೀತಾಪತೇ ||ಪಲ್ಲ|| ವಾಣಿಧವ ಪಿತ: ಘೋಣಿ ರಥಪದ| ಪಾಣಿ ನಂದಕೃಪಾಣಿ ಜಯ ಜಯ || ಘೋಣಿ ವಲ್ಲಭ, ಶ್ರೇಣಿ ಸುತ ಚಿ| ದ್ರೋಣ ವರಾಹಾಗ್ರಣಿ ಶ್ರೀರಾಮಾ ||೧|| ರಾಜಕುಲಾಂಬುಧಿ ರಾಜಾರಮಣ| ರಾಜತೇಜ ವೈರಾಜ ಜಯ ಜಯ| ರಾಜ ಸೂರ್ಯಾರ್ಚಿತ ರಾಜೇಶ್ವರ ಸುತ ರಾಜಾನುಜ ರಘು ರಾಜಾ ಶ್ರೀರಾಮಾ ||೨|| ಮಂದರಧರ ನಿಜ ಸುಂದರ ಚಿನ್ಮಯ| ಮಂದಿರ ನಿತ್ಯಾನಂದ ಜಯ ಜಯ|| ವೃಂದಾವನ ಚರ ವೃಂದಾರಕ ಮುನಿ| ವೃಂದ ನೃಪಾನ್ವಯ ವಂದ್ಯ ಶ್ರೀರಾಮಾ ||೩||

..........................................................................................

..........................................................................................||೪||

ಶ್ರೀಪದ ಶ್ವೇತದ್ವೀಪನಿಲಯ ಶ್ರುತಿ| ತಾಪಹರಣ, ನಿರ್ಲೇಪ ಜಯ ಜಯ || ಶ್ರೀಪ್ರಸನ್ವೆಂಕಟ ಭೂಪತಿ ಭುವನ| ವ್ಯಾಪಕಪೂರ್ಣ ಪ್ರತಾಪ ಶ್ರೀ ರಾಮಾ ||೫||

೪೧

ರಾಗ— ಧನಶ್ರೀ ತಾಳ—ಆದಿ

ಬಂದರದಕೋ ಬಲರಾಮ ಮುಕುಂದರು| ಬಂದರದಕೋ ಭಾವೆ ಕೆಲವುತಾ ನಲಿಯುತ ||ಪಲ್ಲ|| ನೀರಜಸಖನುದಯಾಗದ ಮುನ್ನ ರ್ಘೋಂ |

ಕಾರದೊಳಗೆ ಮೊತ್ತ ವೇಳದಮುನ್ನ || ಸಾರಸಕೆ ರಮೆಯುರ ಸ್ವರನದ ಮುನ್ನ | ನಾರಿಯರು ಮೊಸರಾ ಮಥಿಸುವದರಿತು ||೧|| ನವನವ ನೀತಕೆ ಮೆಚ್ಚಿ ಮನದಿಟ್ಟು | ತವಕದಿ ಗೋಡೆಯ ಧುಮುಕುತಲಿ || ಯುವತಿ ಗೊಲ್ಲತೆಯುರಾ ಮುರುಳು ಮಾಡುತ ಸ| ಣ್ಣವರೊಳು ತಾಳ ಮೇಳದ ಅಬ್ಬರದಲಿ || ೨ || ಸಾರ ಗೋರಸ ಚೋರ ಗೋಪಿ ಮಕ್ಕಳು | ಸೂರ್ಯಾಡುವರು ಮನೆ ಮೊಸಲಿಹ | ಸಾರಿ ಸಾರಿಗೆ ಪ್ರಸನ್ವೆಂಕಟ ಕೃಷ್ಣರಾ| ಚಾರು ವಡ್ಯಾಣ ಘಂಟಾರವನಾಲಿಸವ್ವ ||೩||

೪೨

## ಸತ್ಯಭಾಮೆ ಶ್ರೀ ಕೃಷ್ಣರ ಸಂವಾದ

**ರಾಗ- ಮಾರವಿ** **ತಾಳ— ಆದಿ**

ಬಂದೆ ಕೇಳೆ ಗೋವಿಂದ ನಾ| ಇಂದುಮುಖಿ ನಿದ್ರೆ ಬಿಟ್ಟೊ| ಬಂದು ನೀ ಬಾಗಿಲ ತೆರೆಯೆ ॥ ಗೋವಿಂದ ನೀ ಗೋವೃಂದ ಕಾಯುಲು ಹೋಗು ||ಪಲ್ಲ|| ಸೋಮಕ ಖಳನ ಕೊಂದು ನೇಮದಿ ವೇದವ ತಂದ|;ಶ್ರೀಮತ್ಸ್ಯಾವತಾರ ಬಂದೆನೆ ॥ ಮತ್ಸ್ಯನಾದರೆ ಆ ಮಹಾಂಬುಧಿಗೆ ಹೋಗು ||೧|| ಸಿಂಧು ಮಥನ ಕಾಲಕ್ಕೆ | ವೃಂದಾರಕರಿಗೊಲಿದ | ಸುಂದರ ಕೂರುಮ ಬಂದೇನೆ || ಸುಂದರ ಕೂರುಮನಾಗೆ| ಮುಂದರ ಹೊರಲು ಹೋಗು||೨|| ಪ್ರಳಯಾಂಬುಧಿಗಿಳಿದೊಬ್ಬನ ಸುಲಭದಿ ಕೋರಿಲಿ ಸೀಳ್ದು | ಚಲುವ ವರಾಹ ಬಂದೇನೆ || ಚಲುವ ವರಾಹನಾದರೆ, ಇಳೆಯ ಕೂಡ ಆಡ ಹೋಗು ||೩|| ಸೊಕ್ಕಿ ಕಂಬಾ ವದ್ದು ಗುದ್ದಿದ ರಕ್ಕಸನ ಕರಳ ಮಾಲೆಯ| ನಿಕ್ಕಿದ ನರಹರಿ ಬಂದೇನೆ ॥ ಇಕ್ಕಿದ ನರಹರಿಯಾದರೆ| ಚಿಕ್ಕವ ನೋಳಾಡ ಹೋಗು ||೪|| ಹೋಮವ ಮಾಡಿ ಮೀರಿದ| ಭೂಮಿಪನ ಸೊಕ್ಕು ಮುರಿದ| ನೇಮದ ವಾಮನ ಬಂದೇನೆ|| ನೇಮದ ವಾಮನನಾದರೆ| ನೇಮ ನಿಷ್ಠೆಗೆ ನೀ ಹೋಗು ||೫|| ಭೂಭಾರನಿಳುಹಿ ದ್ವಿಜರಿಗೆ ಶ್ರೀಭಾಗ್ಯವ ಕೊಟ್ಟ ಶೌರ್ಯ| ಶೋಭಿತ ಭಾರ್ಗವ ಬಂದೀನೆ|| ಶೋಭಿತ ಭಾರ್ಗವ ನಾದರೆ| ಆ ಭೀಷ್ಮನ ಅಂಜಿಸ ಹೋಗು ||೬|| ಸೀತೆಗಾಗಿ ರಾವಣನ| ಘಾತಿಸಿದೆ ಕೇಳೆ ವಾತ| ಜಾತವಂದ್ಯ ರಾಮ ಬಂದೇನೆ|| ಜಾತವಂದ್ಯ ರಾಮ

ನಾದರೆ ಸೇತುಬಂಧನದಲ್ಲಿರಹೋಗು ||೭|| ಸೋಳಾ ಸಾಸಿರ ಗೋಪೇರ | ನಾಳುವ ಸುಪ್ರೌಢ ಶ್ರೀಗೋ || ಪಾಲಕೃಷ್ಣ ನಾನೇ ಬಂದೇನೆ|| ಗೋಪಾಲ ಕೃಷ್ಣನಾದರೆ | ಗೋಪಾಂಗನೆರೊಳಾಡ ಹೋಗು ||೮|| ದೃಢದಲ್ಲಿ ತಪದಿದ್ದ ಮಡದೇರ ಮಾನವ ಕದ್ದ | ಕಡು ಮುದ್ದು ಬುದ್ಧ ಬಂದೇನೆ || ಕಡು ಮುದ್ದು ಬುದ್ಧನಾದರೆ ಒಡನೆ ಮಿಥ್ಯವ ಪೇಳಿ ಹೋಗು ||೯|| ಪದುಮಾ ಗಂಧೆ ನಿನ್ನಾರತಿ | ಗೊಡಗಿದೆ ಬಿಂಕವಿನ್ಯಾಕೆ | ಕುದುರಿ ಏರಿ ಕಲ್ಕಿ ಬಂದೇನೆ || ಕುದುರೆ ಏರ್ದ ಕಲ್ಕಿಯಾದರೆ| ಕದನಕ್ಕೆ ಜಾಣ ಸೀ ಹೋಗು ||೧೦|| ವಲ್ಲಭನ ನುಡಿಗಳ ಕೇಳಿ | ನಲ್ಲೆ ಸತ್ಯಭಾಮೆ ಹರಿಪದ | ಪಲ್ಲವಕೆರಗಿ ನಿಂದಾಳು || ಪಲ್ಲವಕೆರಗಿ ಪ್ರಸನ್ವೆಂಕಟ| ಚೆಲ್ವಾ ನೆಂದರಿಯೆನೆಂದಾಳು ||೧೧||

೪೩

ರಾಗ— ಶಂಕರಾಭರಣ ತಾಳ ಆದಿ

ಬಿಲ್ವೋದೇಶ್ವರ ಶ್ರೀಮಧು ಮಾರಿ | ವಲ್ಲಭ ಸತತಂ ಪಾಲಯ ಮಾಂ ||ಪಲ್ಲ|| ನಾಕಪ ವಂದ್ಯ ಕೃಪಾಕರ ಪಾಪಾ| ನೀಕ ನಿವಾರಕ, ಮೂಕಹರ | ಲೋಕೇಶೇಶ ನಿಶಾಕರಶೇಖರ| ಶ್ರೀಕರ ಕಾಯ ಪಿನಾಕಧರ ||೧|| ಗರ ಕಂಧರ ವೃಷಚರ ಅದ್ಭುತ ನಿ| ಕರ ಪರಿಚರ ಪಾಂಡುರಗಾತ್ರ || ಶಿರ ಮಾಲಾನ್ವಿತ ಸ್ಫುರತ್ಕಪಾಲಿಯೆ | ಹರ ಹರ ಭವ ಸುಖಕರ ಮಿತ್ರ ||೨|| ಭುಜಗಾಭರಣ ಗಜಮದಹರಣ | ಗಜ ಚರ್ಮಾಂಬರ ಸುಜನವರ || ದ್ವಿಜರ ವಿಮೋಕ್ಷ ಧ್ವಜ ಸಮಲೋಚನ | ರಜನೀಚರ ತ್ರಿಪುರಜ ಮಥನಾ ||೩|| ದುರ್ಧರ ಪಾಂಧಕಮರ್ದಕ ಶಂಭೊ | ನಿರ್ದೋಷ ಶ್ವೇತಾದ್ರಿ ಪ್ರಭೊ || ಸ್ವರ್ಧುನಿ ಸಹಿತ ಕಪರ್ದಿನ ಶಿವ ಶಿವ | ಊರ್ಧ್ವ ಪಟಾರ್ಚಕ ವರ್ಧಕ ಭೊ ||೪|| ಶಂಕರ ಸುಗುಣಾಲಂಕೃತ ಭಕ್ತಾ | ತಂಕ ವಿದೂರಕ ಶಂಕರಥಾ|| ಅಂಕಿತ ಶ್ರೀ ಪ್ರಸನ್ವೆಂಕಟ ಗಾಯಕ | ಕಿಂಕರ ಜನ ಪ್ರಿಯಾ ತ್ವಂ ಕೃಪಯಾ ||೫||

೪೪

ರಾಗ— ಸಾರಂಗ ತಾಳ— ಝಂಪಾ

ರಾಮರಾಮಾ, ಸೀತಾ | ರಾಮಾ ರಘುರಾಮಾ ||ಪಲ್ಲ|| ರಾಮರಾಮ ರಘುನಂದನ ತೋಷನ | ಅಮಿಷ ಪಾದಾಂಬುಜ ಪಾವನ|| ನಾಮವಿಮಲ

ಕಮಲಾಯುತ ಲೋಚನ | ಭೂಮಿಜಾರಮಣ ಸದಾ ಶುಭ ಮಹಿಮನೆ ||೧|| ದಂಡ ಕುಖರ ಹರವಂದಿತ ಸುಜಟಾ | ಮಂಡಿತ ಮೌಳಿ ಮುನೀಂದ ಕರಾರ್ಚಿತ || ಚಂಡಕುಲೇಶಾ ಖಳ ನಿಶಾಚರ | ದಂಡಿನ ವರ ಕೋದಂಡ್ರ ವಿದಾರಿ ||೨|| ವಾರಿದ ಶಾಮ ದಯಾಂಬುಧಿ ಭಕ್ತ ಸ | ಮೀರಜ ಸೇವ್ಯ— ವಿಭೀಷಣ ವರದ ಸು | ಸ್ಮೇರ ವದನ ಸಾಮ್ರಾಜ್ಯ ಪರಾಯಣ | ಭೂರಿ ಪ್ರಸನ್ವೇಂಕಟ ಕೃಷ್ಣ ನಮೋ ||೩||

೪೫

ರಾಗ—ದೇಶಿ ತಾಳ—ಆದಿ

ರಂಗ ಕುಣಿದಾ ಮುದ್ದು | ರಂಗ ಕುಣಿದಾ ||ಪಲ್ಲ|| ರಂಗ ಕುಣಿದಾ ಗೋಪಿ ಕಂಗಳ ಮುಂದೆ || ಪೊಂಗೆಜ್ಜೆರವದೊಳು | ಅಂಗಣದೊಳು ||೧|| ಗೆಳೆಯರೆಂದಿಸಿಪ ಏಳೆಮಕ್ಕಳ ಗೂಡಿ || ಬಳಕುತ ಬಾಗುತ ನಲಿನಲಿ ದಾಡೀ ||೨|| ಮೊಳೆವಲ್ಲು ಬಾಯ್ ಜೊಲ್ಲು ಗಿಳಿ ಸೊಲ್ಲಿನಿಂದಾಲಿ || ಕಳಕಳಿಸಿ ನಕ್ಕು ನಗಿಸಿ ಬಿದ್ದೆದ್ದು ||೩|| ಸುಳಿ ಗುಂಗುರುಳು ಪಣಿಯುಲಲಿ ದಾಡಲು || ಬಲರಾಮ ತಿದ್ದಿದಾರಳುತಾ ಅಳಕುತಾ ||೪|| ಅರಳೇಲಿ ಮಾಗಾಯಿ ಬೆರಳಾರನ್ನುಂಗುರ || ಕಿರುಗೆಜ್ಜೆ ಬಾರೆಂದು ತರಳಾರಿಗಿತ್ತು ||೫|| ಮಕ್ಕಳ ರತುನ ಶ್ರೀ | ಚಿಕ್ಕ ಕೃಷ್ಣಯ್ಯನು || ಬೆಕ್ಕಿಗೆ ಬೆದರದೆವಿಕ್ಕದೆ ನೋಡಿ || ೬ || ನಗುತಲೆ ಮುದ್ದೀಸಿ ಬಿಗಿದಪ್ಪಲೆಶೋದೆ || ಮಗ ಪ್ರಸನ್ವೇಂಕಟ ಬಿಗಿದುಡೆಯಲ್ಲಿ ||೭||

೪೬

ರಾಗ—ಶ್ರೀ ತಾಳ—ಆದಿ

ರಂಗ ಬಾ, ಮೋಹನಾಂಗ ಬಾ, ದೇವೊ | ತುಂಗ ಬಾರೆಂದು ಕರಿದಾಳು ಗೋಪಿ ||ಪಲ್ಲ|| ಚೀರುತ ಬಂದ ಚಿನ್ನ, ಹಸಿದನೆಂದು ಘೃತ | ಕ್ಷೀರ ವೆರಸಿ ಕೊಟ್ಟರೆ ಒಲ್ಲದೆ || ಚೋರತನಕೆ ಬಲು ಮೆಚ್ಚಿ ನಿನ್ನಾನು | ಸಾರುತ ನಿರುತ ಬಾಹರು ಗೋವಳೆಯರು ||೧|| ತುರುಗಾವೊ ನೆವದಲಿ ಪೋಗಿ ಗೋಪಾಲರ | ಕುರುಳಿಗೆ ತುರದ ಬಾಲಕೆ ಗಂಟಿಕ್ಕಿ | ದುರುಳಾ

ತನಂಗಳ ಮಾಡಿ ಮಾಡಿ ಮತ್ತೆ । ಅರಿಯದಂತೆ ಬಿಕ್ಕಿ ಬಿರಿಯ ಬ್ಯಾಡಲೆ ಕಂದ ॥೨॥ ಚಲ್ಲೆಗಂಗಳೆಯರ ಶಯನಕೆ ಪೊಂದಿಹಾ । ನಲ್ಲರ ಬಡಿದೋಡಿ ಬರುತಲಿಹೆ ॥ ಸಲ್ಲದು ನಿನಗಿದು ಬಾಲಕತನದೊಳು । ಫುಲ್ಲಲೋಚನ ಮುದ್ದು ಗೋಪಾಲ ಕೃಷ್ಣಾ ॥೩॥ ಶಕಟಾ ಪೂತನಿ ತೃಣಾವರ್ತ ಮೊದಲಾದ। ಶಕತ ದನುಜರಾ ಮರ್ದನ ಕೃಷ್ಣ ॥ ಭಕತರಾ ಭವಣೆಯ ನಳಿಯದಿದ್ದರೆ ಗಡ । ಸಕಲರು ಜಾರ ಚೋರೆಂದು ಸಾರುವರೋ ॥೪॥ ಎನ್ನ ಬೇಡು ನೀ ಮನದಣಿ ನೀಡುವೆ । ಅನ್ಯರಾ ಮನಿಗೆ ಪೋಗಲಿ ಬ್ಯಾಡವೊ ॥ ಚಿನ್ಮಯ ಮೂರುತಿ ಪ್ರಸನ್ವೆಂಕಟ ಕೃಷ್ಣಾ । ನನ್ನಾಣೆ ಮನೆಯಾ ಬಿಟ್ಟಗಲದಿರೋ ॥೫॥

೪೭

**ರಾಗ— ಧವಳ** **ತಾಳ—ಆದಿ**

ವಾಸುದೇವ ಶ್ರೀ, ವಾಸುದೇವ ॥ ವಾಸವ ಹರ ವಿಧಿಪತಿ ವಾಸುದೇವ ॥ಪಲ್ಲ॥ ಅಖಿಳ ಜಗದಂತರ್ಬಹಿ ವಾಸುದೇವ ॥ ಭಕುತ ಹೃದಯ ಮಂದಿರ ವಾಸುದೇವ ॥೧॥ ವೈಕುಂಠ ಕ್ಷೀರಸಾಗರ ವಾಸುದೇವ ॥ ಶ್ರೀ ಶರಾನಂತಾಸನ ವಾಸುದೇವ ॥೨॥ ಸ್ವಾಮಿ ಪುಷ್ಕರಣಿಜಲಸ್ಥಿರ ವಾಸುದೇವ। ಸ್ವಾಮಿ ಪ್ರಸನ್ವೆಂಕಟ ವಾಸುದೇವ ॥೩॥

೪೮

**ರಾಗ—ಶಂಕರಾಭರಣ** **ತಾಳ-ಏಕ**

ವೆಂಕಟಪತಿ ಶರಣು । ಹಾಹಾ । ವೆಂಕಟಪತಿ ಶರಣೂ ॥ಪಲ್ಲ॥ ಕಮಲ ಸಂಭವನುತ ಚರಣ, ಶುಭ । ಕಮಲಾರಿ ಕುಲಭರಣ ॥ ಕಮಲ ಸಖ ಸಂತಾರುಣ, ಕಿರಣ । ಕರುಣ ಸಂಪೂರಣ ॥೧॥ ಶಿರಿ ಭೂದೇವಿಯರ ರಮಣ, ದಿವ್ಯ । ಸರಸಾಕ್ಷ ಖಗವರಗಮನಾ ॥ ಸುರರಿಪು ಗಣಾಸುರ ದಮನ ಭವ । ಹರ ಸುರವರಸಮ ನಾಮ ನಮೊ ॥೨॥ ಶೇಷಗಿರಿಯ

ದಾಹಕನೆ ಬಾ । ಹೆಂಡರು ಹದಿನಾರುಸಾವಿರ ನೂರೆಂಟು ॥ ನೂರೆಂಟರ-ನಾಳುವ ಕದನ ಪ್ರಚಂಡ ಬಾ । ಉದ್ದಂಡೋದ್ದಂಡಾ ಬಾ । ಪುಂಡರ ಗಂಡಾ ಬಾರೆಂದು ಕರೆದರು ॥ ೧೦ ॥ ಮುತ್ತಿನ ನೊಸಲಿನವಳೇ ಬಾ ನವ । ರತ್ನದ ಭೂಷಣಳೇ ಬಾ ಮೋಹ । ಕಸ್ತೂರಿ ತಿಲಕದ ಪುತ್ಥಳಿಯೇ ಬಾ ॥ ಪುತ್ಥಳಿಯೇ ಅಳಿಕುಂತಳಿಯೇ ಬಾ । ಚಿತ್ತಜನ ಪೆತ್ತವಳೇ ಬಾ । ಸುಪ್ಪಾಣಿ ಮುತ್ತೆ ಬಾರೆಂದೂ ಹಾಸಿಗೆ ಕರೆದಾರೂ ॥ ೧೧ ॥ ತುರಗಾಸ್ಯನ ಆಳಿದನೆ ಬಾ ಮಂ । ದರ ಧರಿಸಿದ ವರಹನೆ ಬಾ ನರ । ಹರಿಯೆ ಬಾ ವಾಮನ ಭಾರ್ಗವ ರಾಮೂನೇ ಬಾ ॥ ರಾಮನೇ ಬಾ ಯಾದವ ಕೃಷ್ಣಯೋಗೀಶ ಬಾ । ಶಾಮಸುಂದರನೆ ಬಾರೆಂದು ಹಾಸಿಗೆ ಕರದಾರೂ ॥ ೧೨ ॥ ಶಂಕಿಣಿ ಪದ್ಮಿಣಿಯರು ರುಕ್ಮಿಣಿ । ಪಂಕಜನಾಭನ ಪೂಜಿಸಿ ರ । ತ್ನಾಂಕಿತ ಹರಿವಾಣದಲಿ ಆರತಿಯೆತ್ತಿ ॥ ಆರತಿ-ಯೆತ್ತಿ ಅಕಳಂಕ ಅಹಿ ಪರಿ । ಯಂಕ ಪ್ರಸನ್ವೆಂಕಟ ರಮಣಗೆ ಹರಸೀದಾರು ॥ ೧೩ ॥

೫೧

**ರಾಗ—ಕಲ್ಯಾಣಿ** **ತಾಳ—ಆದಿ**

ವೃಂದಾರಕ ವಂದ್ಯಾ ಯದುಕುಲಾಂಬುಧಿ ಚಂದ್ರಾ ॥ ಪಲ್ಲ ॥ ಮೃಗಮದ ತಿಲಕ ವಿರಾಜಿತ ಖಳಶೂಲ ॥ ಮೃಗ ನರರೂಪ ವಿಧೃತ ಸುಗುಣ ವಿಶಾಲಾ ॥ ೧ ॥ ಖಗಾಸನ ಕಮಲಾ ರಮಣ ಕಲಿನಾಶ ॥ ಖಗ ಮುಕ್ತಿದಾಯಕ ಕನಕ ನಗೇಶಾ ॥ ೨ ॥ ಮಣಿಮಯ ಭೂಷಣಾಮಿತ ಭೃತ್ಯಚಿಂತಾ ॥ ಮಣಿ ಕಲ್ಪ-ಕುಜಧೇನು ಮಹಿಮಾನಂತಾ ॥ ೩ ॥ ಸ್ವಾಮಿ ಪುಷ್ಕರ ವರ ಸನ್ನಿಧಿ ಸದನ ॥ ಸ್ವಾಮಿ ವರಾಹ ಹಿರಣ್ಯಾಂಬಕ ಮಥನ ॥ ೪ ॥ ರಾಕೇಂದು ಕೋಟಿ ಪ್ರಕಾಶ ಕಲುಷ ನಿ ॥ ರಾಕೃತ ನಮೋ ಶ್ರೀ ಪ್ರಸನ್ವೆಂಕಟೇಶಾ ॥ ೫ ॥

೫೨

**ರಾಗ—ಪಾಡಿ** **ತಾಳ—ಝಂಪಾ**

ಶ್ರೀ ವೆಂಕಟೇಶಾ ಸಲಹು ವೆಂಕಟೇಶಾ । ಭಾವಿಕ ಸೇವಕ ಭವಭಯ ನಾಶಾ ॥ ಪಲ್ಲ ॥ ಸುರಾರಿ ಗಜಗಳೆಂಬ ಗಣಕೆ ಕಂಠೀರವ । ಕರಿರಾಜ

ಸಂಕಟ ಭಿತ್ತ ದೇವಾ ॥ ಪರಮ ಭಾಗವತರ ಸಮೂಹ ಸಂಜೀವನ । ಪುರಹರ ವರ ಮತ್ತಾ ವೃಕಾಸುರ ಮಥನಾ ॥ ೧ ॥ ವನಜ ಭವ ಸಮೀರ-ರೊಡೆಯ ಶ್ರೀರಮಣ । ಮುನಿ ಹೃದಯಾಲಯ ಪರಿಪೂರಣ ॥ ಫಣಿ ವರ ಶಾಹಿ ಪರಾತ್ಪರ ಅಗಣಿತ । ಗುಣ ಗಂಭೀರ ಸಜ್ಜಗದ ದಾತಾ ॥ ೨ ॥ ಶುಕ ಶೌನಕ ಸನಕಾದಿ ದೇವ ಋಷಿ । ಸಕಳಸುರ ಭೂಸುರ ರಾಜಾಧೀಶಾ । ಭಕುತ ವತ್ಸಲ ಬಾದರಾಯಣ ಹರಿಹಯ । ಮುಖ ಪ್ರಸನ್ವೆಂಕಟ ಗಿರಿ ನಿಲಯ ॥ ೩ ॥

೨೪೩

ರಾಗ—ಸುರಟಿ ತಾಳ—ಆದಿ

ಸಾರಿ ಸ್ತುತಿಸಿ ಭೂರಿ ದ್ವಾರಕಿಯರಸನಾ । ಗಾರ ದ್ವಾರದ ಮುಂದೆ ॥ ಕ್ರೂರ ಖಳರೆದೆ ವಿದಾರಿಸುತಿದೆ ಯದು । ವೀರರಬ್ಬರ ಮುರಾರಿಯ ಪಾಳೆಯ ॥ ಪಲ್ಲ ॥ ಸೃಷ್ಟ್ಯಾದಿ ಕಾರಣ ಶಿಷ್ಟ ಸಂರಕ್ಷಣ । ದುಷ್ಟ ಮಥನ ಪೂರ್ಣ ತುಷ್ಟನ ॥ ಇಷ್ಟ ಜನರ ವೃತ್ಯ್ಯ ನಷ್ಟಕರ ಏಕೋ । -ವಿಷ್ಣು ವರಿಷ್ಟ ವಿಶಿಷ್ಟ ಸುಖದನೆಂದು ॥ ೧ ॥ ಸೂತ್ರ ರಾಮಾಯಣ ಪವಿತ್ರೋಪನಿಷದ್ವೇದ । ಗಾತ್ರ ಮಹಾಭಾರತ ಪಂಚರಾತ್ರ ॥ ಶಾಸ್ತ್ರೌಘ ಸನ್ಯಾಯಶಾಸ್ತ್ರ ಶ್ರುತಿ ನಿಕರ । ಸ್ತೋತ್ರಕ ಯಜ್ಞ ಗೋಪೀಪುತ್ರ ಶ್ರೀಕೃಷ್ಣನೆಂದೂ ॥ ೨ ॥ ವೇದೋದ್ಧಾರ ಕ್ಷೀರೋಧದಿ ಮಥನ ಧ । ರಾಧರ ಹಿರಣ್ಯಕಶತ್ರು ನೃಹರೀ ॥ ಪಾದತ್ರಯ ಖಳರ ಛೇದಕ ಯಕ್ಷೋಹರ । ಮಾಧವ ಬುದ್ಧ ಕಲ್ಕಿ ಶ್ರೀಕೃಷ್ಣನೆಂದೂ ॥ ೩ ॥ ಅನಂತಾಸನವಿದೆ, ಅನಾದಿ ಶ್ರೀವೈಕುಂಠ । ಅನಂತ ಶ್ವೇತದ್ವೀಪ ಸ್ಥಾನವಿದೇ ॥ ಆ ನಂದನಾ ಸೂನು ಆನಂದಮಯ ಬ್ರಹ್ಮ । ಮೌನಿ ಸುರನಿಕರ ಧ್ಯಾನಾ ಗೋಚರನೆಂದೂ ॥ ೪ ॥ ಪಾಂಡವ ಸ್ಥಾಪಕ ಲಂಡ ಕೌರವ ಹರ್ತ । ಗಾಂಡೀವಿ ಸಖ ಶೌರಿ ಜಯ ಶೌಂಡಾ ॥ ಚಂಡ ಚಂದ್ರಾನಂತಖಂಡ ಪ್ರಕಾಶ ಮಹ । ಪೌಂಡ್ರಕ ಸಾಲ್ವ ಮದಖಂಡ ಶ್ರೀಕೃಷ್ಣನೆಂದೂ ॥ ೫ ॥ ಮಂಗಳಾ-ನಂತ ಗುಣಂಗಳ ಶ್ರುತ ತ್ರಿಗು । ಣಂಗಳಿಂದೆಂದಿಗಸಂಗಾ ॥ ಗಾಂಗೇಯಾರ್ಚಿತ ಗಂಗಾನ್ವಿತ ಪಾದ । ತುಂಗ ವಿಕ್ರಮ ಯಜ್ಞಾಲಿಂಗ ಶ್ರೀಕೃಷ್ಣನೆಂದೂ ॥ ೬ ॥ ನೂರೆಂಟು ವೆಗ್ಗಳದಿನಾರುಸಾವಿರ ದಿವ್ಯಾ । ನಾರೀರಾಳುವ ಶ್ರೀಶೌರಿ ॥

ನಾರದನಿದರ ವಿಚಾರ ಮಾಡಲು ಬರೆ । ಮೂರುತಿ ಅನಂತನಾಗಿ ಬೆರೆದನೆಂದು ॥ ೭ ॥ ಬ್ರಹ್ಮ ರುದ್ರೇಂದ್ರಾದಿ ಸುಮ್ಮನಸರನಾಳ್ವ । ರಮ್ಮೆಯರಸ ಸರ್ವೋ- ತ್ತಮನು ॥ ಧರ್ಮೋದ್ಧಾರ ಅಧರ್ಮ ಛೇದಕ ಪರ । ಬ್ರಹ್ಮ ಮೂರುತಿ ಹರಿ ಬ್ರಹ್ಮಣ್ಯ ದೇವನೆಂದು ॥ ೮ ॥ ಧಂ ಧಾಂ ಧಂ ಧಣ ಧಾಂ ಧಿಮಿಕಿಟಿ ಧಿಮಿಕಿ । ಧಂ ಧಣಧಾಂ ಧಿಗ್ಮ್ರಧಾಂ ಧರಿ ಗಂಧಂ ॥ ತಮಾವೊ । ಹೆಕ್ಕೆಂ ॥ ಧೊಂ ಧೊಂ ಧೊಂ ಧೊಂ ಧೊಂ ಪ್ರಸನ್ವೆಂಕಟ । ಮಂದಿರಾನಂದ ನಿಲಯ ಭಕ್ತವತ್ಸಲನೆಂಮ ॥ ೯ ॥

೫೪

**ರಾಗ— ವರಾಳಿ** **ತಾಳ— ಝಂಪಾ**

ಸ್ವಾಮಿ ಪುಷ್ಕರ ತೀರ ನಿಲಯ ನಮೋ । ಸ್ವಾಮಿ ವರಹ ವೆಂಕಟ ನಾಯಕಾ । ಸ್ವಾಮಿ ಪಾಹಿ ಪಾಹಿ ತ್ರಾಹಿ । ಸ್ವಾಮಿ ವರಹ ವೆಂಕಟ ನಾಯಕಾ ॥ ಪಲ್ಲ ॥ ಯಜ್ಞ ಗಾತ್ರ ವಿಧಿನುತ ಪ್ರಭು ಶ್ರೀ । ಯಜ್ಞ ವರಹ ವೆಂಕಟ ನಾಯಕಾ । ಯಜ್ಞಭೋಕ್ತೃ ಹೇಮಾಂಬಕ ಹರ । ಯಜ್ಞ ವರಹ ವೆಂಕಟನಾಯಕಾ ॥ ೧ ॥ ಭೂ ಭಯ ದೂರ ಧರಾ ಮನೋಹರ । ಭೂ ವರಹ ವೆಂಕಟನಾಯಕಾ । ಶೋಭಿತ ಭಾಲಚಂದ್ರೋಪರಮಕ್ರೋಧ । ಭೂ ವರಹ ವೆಂಕಟನಾಯಕಾ ॥ ೨ ॥ ಶ್ವೇತಹಯವದನ ಶ್ವೇತಾಂಬರಧರ । ಶ್ವೇತವಾಹನಸಖ ಶ್ವೇತನಿಭಾ ॥ ಶ್ವೇತಾದ್ರೀಶಾರ್ಚಿತಪಾದಕಮಲ । ಶ್ವೇತ ವರಹ ವೆಂಕಟನಾಯಕಾ ॥ ೩ ॥

೫೫

**ರಾಗ—ಮಧುಮಾಧವಿ** **ತಾಳ—ಆದಿ**

ಸುಳಿದನ್ಯಾರೆ ಈಗ ಸುಳಿದನ್ಯಾರೆ । ಕೆಳದಿ ಎನ್ನಪ್ಪರಿಗೆಯ ಮುಂದೆ ॥ ಹೊಳವ ಹೊಂಬಕ್ಕಿಯ ಮ್ಯಾಲೆ । ಥಳಥಳಿಪ ಮಿಂಚಿನಂತೆ ॥ ಪಲ್ಲ ॥ ಎಸೆವ ಮಣಿ ಕನಕಾಭರಣಿಟ್ಟು । ನಸುನಗೆ ಬಳಗ ವೈಸರಿಸಿ ॥ ಬಿಸಜಾಕ್ಷಿಯ ಳೋರ್ವಳ ಕೂಡ । ಹೊಸಪರಿ ಸರಸವಾಡುತಲಿ ॥ ೧ ॥ ಮುಂದುಪ್ಪಡಿಪ ಸುರಸಂದೋಹ । ಹಿಂದಕ್ಕೆಳದೀ ಮುನಿಸಮ್ಮೋಹ ॥ ಅಂಗದಿ ಮುಂಗದಿರವ

ವಾದ್ಯ । ಸಂದಣೀಯ ಸೊಬಗೀನಲ್ಲಿ ॥ ೨ ॥ ಎನ್ನ ಮನದಿ ನೇಹವ ಬೀರಿ । ಇನ್ಯಾಕೆ ದೂರ ನೋಡಿದನೆ ॥ ಮನ್ನೀಸ್ಯವನ ತಾರೆ ಶ್ರೀಪ್ರ । ಸನ್ನವೆಂಕಟ ವರದನ ಬೇಗ ॥ ೩ ॥

೫೬

ರಾಗ—ಕನ್ನಡ ಕಾಂಬೋದಿ ತಾಳ—ಆದಿ

ಹಕ್ಕೀಯ ಹೆಗಲೇರಿ ಬಂದಾವಗೆ ನೋ । ಡಕ್ಕ ಮನಸೋತೆ ನಾನವಗೆ ॥ ಪಲ್ಲ ॥ ಸತ್ರಾಜಿತನ ಮಗಳಿತ್ತಿದ ಉ । ನ್ಮತ್ತ ನರಕದೊಳು ಕಾದಿದ ॥ ಮತ್ತೆ ಕೆಡಹಿದ ಅವನಂಗವ ಸತಿ । ಗಿತ್ತನು ತಾ ಆಲಿಂಗನವ ॥ ೧ ॥ ಹದಿನಾರು ಸಾವಿರ ನಾರಿಯರ ಶೆರೆ । ಮುದದಿಂದ ಬಿಡಿಸಿ ಮನೋಹರ ॥ ಆದಿತೀಯ ಕುಂಡಲ ಕಳಿಸಿದ ಹರ । ವಿಧಿಸುರ ನೃಪರನು ಸಲಹೀದ ॥ ೨ ॥ ಉತ್ತಮಾ ಪ್ರಾಗ್ಜೋತಿಷಾ ಪುರವಾ ಭಗ । ದತ್ತಗೆ ಕೊಟ್ಟವರಾಭಯವ ॥ ಕರ್ತ ಕೃಷ್ಣಯ್ಯನ ನಂಬೀದೆ ಶ್ರೀ । ಮೂರ್ತಿಯ ಪಾದವ ಹೊಂದೀದೆ ॥ ೩ ॥ ನರಕ ಚತುರ್ದಶಿ ಪರ್ವದ ದಿವ । ಹರುಷಾದಿ ಪ್ರಕಟಾದನು ದೇವ ॥ ಶರಣಾಗತ ಜನವತ್ಸಲಾ ರಂಗ । ಪರಮಭಾಗವತರ ಪರಿಪಾಲಾ ॥ ೪ ॥ ಹೊಗಳಿ ಕೃಷ್ಣಯ್ಯನ ಮಹಿಮೆಯಾ ಮುಕ್ತಿ । ನಗರದ ಅರಸನ ಕೀರ್ತಿಯಾ । ಜಗದೀಶ ಪ್ರಸನ್ವೆಂಕಟೇಶನು ಭಕ್ತ । ರಘುಹಾರಿ ರವಿಕೋಟಿ ಪ್ರಕಾಶನು ॥ ೫ ॥

೫೭

ರಾಗ—ಕೇದಾರಗೌಳ ತಾಳ—ಆದಿ

ಹೊರೆಯೋ ವಿಪಗಮನ । ಮಂಗಳ ಶರಧಿಜಾರಮಣ ॥ ಪಲ್ಲ ॥ ಸುರಕಾರ್ಯಕೆ ಪಕ್ಷಾ ಶಾರ್ವರಿ । ಚರವರ ಸದಾ ಶೀಕ್ಷಾ ॥ ಧರೆಜಾರಮಣ ಸತ್ರಾಜಿತಜಾವರ । ಶರಣಾಗತ ಭಯ ದುರಿತ ವಿದೂರ ॥ ೧ ॥ ಪೌಂಡ್ರಕಾಸುರ ವೈರೀ ನಿಜ ಕೃಷ್ಣಾ । ಪಾಂಡವರೋದ್ಧಾರೀ ॥ ಶುಂಡಲ ಚಾಣೂರ ಸಂಹಾರೀ ಮಹಾ । ಖಾಂಡವವನ ಘನ ದಹನಕಾರೀ ॥ ೨ ॥ ವಿದುರೋದ್ಧವ ಪೋಷಾ ಸುಖ ತೀರ್ಥ । ಹೃದಮಾನಸ ಹಂಸಾ । ಪದುಮನಾಭ ಪ್ರಸನ್ವೆಂಕಟೇಶ ಪಾಹಿ । ಸದಮಲ ಸದನ ಕ್ಷೀರಾರ್ಣವಶಾಹಿ ॥ ೩ ॥

೫೮

ರಾಗ— ತೆಲಗು ಕಾಂಬೋದಿ ತಾಳ— ಆದಿ

ಆ ಸುಖ ಹರಿಮರದವಗ್ಯೆಯೊ । ದೋಷಾಂಧ ತಮದೊಳಗೇನು ಸುಖಾ ॥ ಪಲ್ಲ ॥ ಕಂಠಿತ ವ್ಯಸನ ಹೊಲಬಿಲ್ಲದೆ ಧರ್ಮ । ಕಂಟಕ ಶಾಸ್ತ್ರ ವಿಚಾರಕಗೆ ॥ ಎಂಟು ವೃಷಭ ಹೂಡಿ ಮಹಾಶ್ರಮಿಸಿ ಬರೆ । ದಂಟು ಬೆಳದವನಿಗೇನು ಸುಖಾ ॥ ೧ ॥ ಅನಿರುದ್ಧಗಖಿಳನರ್ಪಿಸಿದಾನಲ್ಪ । ಗುಣವ ಮತಿ ದೃಢವಿಲ್ಲ ಮಾನವಗೆ ॥ ಹಣ ವೆಚ್ಚಿಸಿ ರಿಣದೆಗೆದಿಟ್ಟ ಧಾನ್ಯದ । ತೃಣಸಮ ವಿಕ್ರಿಸಲೇನು ಸುಖಾ ॥ ೨ ॥ ಶಂಖಪಾಣಿಯ ನಿಂದಿಸಿ ಕರ್ಮ ಶಕ್ತಿಯ । ಶಂಕರ ರವಿಗಣೋಪಾಸಕಗೆ ॥ ಸಂಖ್ಯೆ ಇಲ್ಲದಾ ವಸ್ತು ನಿಃಶೇಷದಿ । ಸುಂಕಕೆ ತೆತ್ತಿದರಾವ ಸುಖಾ ॥ ೩ ॥ ಆಧ್ಯಾತ್ಮಾನುಭವ ಗುರುಕೃಪೆ ಇಲ್ಲದೆ । ವಿದ್ಯೋನ್ಮತ್ತ ದಯಾ ಶೂನ್ಯಗೆ ॥ ನದ್ಯೋಲ್ಲಂಘಿಸಿ ದಡದಲಿ ನಾವೆ ಮುಳು । ಗೆದ್ದರೆ ಪ್ರಾಣಿಗಳಿಗೇನು ಸುಖಾ ॥ ೪ ॥ ಪ್ರಸನ್ನ ವೆಂಕಟ ಪದ ಸರೋರು ಹಗಳ । ಪ್ರಸನ್ನೀಕರಿಸದೆ ಸಾಹಸಬಡುವಾ ॥ ಅಶುಭ ದನುಜರು ತಪಮಾಡಿ ತುದಿಯಲಿ । ವಿಷಮಗತಿಗ್ಹೋಗಲೇನು ಸುಖಾ ॥ ೫ ॥

೫೯

ರಾಗ—ಪಂತುವರಾಳಿ ತಾಳ— ಅಟ್ಟ

ಇದೀಗ ಭಕುತಿಯೋ ಮತ್ತಿದೀಗ ಮುಕುತಿಯೋ ॥ ಮಧುದ್ವಿಷನ್ನ ಪದಕಮಲಕ್ಕೆ । ಮಧುಪನಂತೆ ಎರಗಿ ತೊಲಗ । ದಿದೀಗ ಭಕುತಿಯೊ ॥ ಪಲ್ಲ ॥ ಶ್ರೀಕಾಂತ ಮೂರುತಿ ಬಹಿರಂತರದಿ । ಏಕಾಂತದಿ ಸದಾನಂದ ತುಳುಕ್ಯಾಡಿ ॥ ಮುಖ ವಿಕಾಸದಿ ತನುವ ಮರೆದು । ವಿಕಳ ಭಾವದಿಂದುಬ್ಬಿ ಕುಣಿವದು ॥ ೧ ॥ ತಪಿತಾದಿ ಕಂಬುಲಾಂಛನವಿಡುವ । ಗುಪಿತ ಮಂತ್ರವನೊರೆವ ಗುರುಗ ॥ ಉಪದೇಶ ಕ್ರಮ ಮೀರದೆ ಇತರ। ಕಪಟ ದಾರಿಗೆ ಹೋಗದೆ ಸುಖಿಪದೀಗ ॥೨॥ ಡಂಬರ ಸೇರುಲಿಂದತ್ತ ಸರಿದು । ಕುಂಭಕ ಪೂರಕ ರೇಚಕ ನೇಮದಿ ॥ ಅಂಬುಧಿಶಾಯಿ ಪಾದಾಂಬುಜ ಲಕ್ಷಿಸಿ। ಬಿಂಬವ ಕಾಣುವ ಹಂಬಲವಿಡುವದೀಗ ॥ ೩ ॥ ಹೇಯವಾದ ಹೆಮ್ಮೆ ಜ್ಞಾನವ ಬಿಸುಟ । ವ್ಯಯನ ನಾಮವ ಚೀರುತ

ಸಂಕೀರ್ತ || ನೇಯಲ್ಲಿ ಕಾಲವ ಸಾರ್ಥಕ ಮಾಡಿ ನಿ | ಜಾಯು ವೃಥಾ ಹೋಗಲಾಡಿಸದಿರುವದೀಗ || ೪ || ಕಂಡರೆಲ್ಲರಿಗೆ ಕುಮಾನಸರಿಗೆ | ಮಂಡೆಯ ಬಾಗದೆ ಪರೇಶ ಕೊಟ್ಟಿದ್ದು || ಉಂಡು ಸುಜ್ಞಾನವನ್ನವಲಂಬಿಸಿ ಪಾ | ಷಂಡ ಸಂಭಾಷಣೆಗೋಕರಿಸುತ್ತಿಹದೀ || ೫ || .... .... .... .... || ೬ || ಸದ್ವ್ರತ ಸದ್ಧರ್ಮ ಮಾಡುತ ನೋಡುತ | ಸದ್ಗೋಷ್ಠಿ ಸಚ್ಛಾಸ್ತ್ರ ಹೇಳುತ ಕೇಳುತ || ದುಗ್ಧ ಸಮುದ್ರೇಶ ಪ್ರಸನ್ವೆಂಕಟೇಶಗೆ | ಇದ್ದ ಶ್ರೀ ಸಂಪದ ತಪ್ಪಾದೊಪ್ಪಿಪುದೀಗ || ೭ ||

೬೦

**ರಾಗ— ದೇಶಿ** **ತಾಳ—ಏಕ**

ಈ ಕಾರಣ ಹರಿನಾಮ ನೆನೆಯಲಿ | ಬೇಕಾಲಶ್ಯವಿಲ್ಲದಲೇ || ಭೀಕರ ಯಮ ಭಟರತ್ಯಧಿಕವಿಯಲಿ | ನೂಕುವದು ಆಸ್ತ್ರದಲಿ || ಪಲ್ಲ || ಷೋಡಶ ಉಪಚಾರದ ಪೂಜಾವಿಧಿ | ಮಾಡುವ ಪುರುಷಗೆ ಸಾಧ್ಯ | ಮಾಡೇನಂದ-ರಗಾಧಾ ಮುಂತಾಡಿದರೇ ಅಸಾಧ್ಯಾ || ರೂಢಿಲಿ ಶ್ರೀಹರಿ ಗುಣಸಂಕೀರ್ತನೆ | ಪಾಡಿದರತಿ ಆಲ್ಹಾದಾ || ೧ || ಸುಜ್ಞಾನಿಗಳ್ಹರಿ ಮೆಚ್ಚಿದರೆ, ಅನಭಿಜ್ಞರಿ-ಗೆಲ್ಲಿಯ ಜ್ಞಾನ ಭವ | ಸುಗ್ಗಿಯೊಳಿಲ್ಲಿ ಧ್ಯಾನಾ ವೈರಾಗ್ಯದ ನಡೆಯು ಕಠಿಣಾ ಅ | ನರ್ಘ್ಯದ ಭೋಜನ ದೊರಕದೆ ಹರಿ ನಾ ಮಂಗಳೆ ಅಮೃತಪಾನಾ || ೨ || ಈ ಜನುಮವ ಜಾರುವ ಮುನ್ನ ಖಗ | ರಾಜಗಮನ ರಂಗನ್ನ | ಮಾಜದೆ ಜಪಿಸುವನೇ ಧನ್ಯ ಸುಖ | ಬೀಜವಿದೆನ್ನ ಮೋಕ್ಷಕೆ | ತ್ರಿಜಗತ್ಪತಿ ಪ್ರಸನ್ವೆಂಕಟ ರಾಯನ | ಸೋಜಿಗ ನಾಮಗಳಣ್ಣಾ || ೩ ||

೬೧

**ರಾಗ—ಕಲ್ಯಾಣಿ** **ತಾಳ—ತ್ರಿವಿಡಿ**

ಈ ದೇಹ ಮನವೆ ಘಾಳಿ ದೀಪಾ || ಪಲ್ಲ || ನಳ ಪುರೂರವ ಹರಿಶ್ಚಂದ್ರ ಪುಣ್ಯಶ್ಲೋಕರು || ಇಳೆಯೊಳಿಲ್ಲಾದರಯ್ಯಾ || ೧ || ಹಂಬಲಾಗಡಲೊಳು ಮುಳುಗಲಿನ್ನಾವ ಸಖಾ || ಅಂಬುಜಾಕ್ಷಗೆ ಸಲ್ಲಲೀ ಲೆಖ್ಖಾ || ೨ || ಧರ್ಮವ ಹೇಳಿದು ಸತ್ಕರ್ಮವಾ ಜರಿದರೆ || ನಮ್ಮ ಪ್ರಸನ್ವೆಂಕಟ ದೂರಾ || ೩ ||

೬೨

**ರಾಗ—ಸಾರಂಗ (ಶಾರದಾ)** **ತಾಳ— ತ್ರಿವಿಡಿ**

ಎಲ್ಲೆಲ್ಲಿ ಭಾಗವತಾಂಶ । ಮತ್ತೆಲ್ಲೆಲ್ಲಿ ಹರಿ ಸನ್ನಿವಾಸ । ಎಲ್ಲೆಲ್ಲಿ ಕರದಾರಿ ದಾಸ । ರಲ್ಲಲ್ಲಿಗೆ ಬಾಹ ರಮೇಶಾ ॥ ಪಲ್ಲ ॥ ಆವೆಡೆ ಲಕ್ಷವಂದನೆಯು ಆ । ವಾವೆಡೆಗೆ ಭಕ್ತನರ್ತನೆಯು ॥ ಆವೆಡೆ ಸುಪ್ರದಕ್ಷಣೆಯು ಆ । ವಾವೆಡೆ ರಂಗನ್ನಾರಾಧನೆಯು ॥ ೧ ॥ ಎಂತು ದಂಡಿಗೆ ತಾಳ ಘೋಷಾ । ಎಂತೆಂತು ಕಥಾವೃತ ವರುಷಾ ॥ ಎಂತು ತತ್ವಾರ್ಥ ಜಿಜ್ಞಾಸಾ ಅಂ । ತಂತೆ ಶ್ರೀಕಾಂತನ ಹರುಷಾ ॥ ೨ ॥ ಎಷ್ಟು ತಂತ್ರಸಾರಾರ್ಚನೆಯು ಎ । ಷ್ಟೆಷ್ಟು ಶ್ರುತಿಸೂತ್ರಗಳ ಧ್ವನಿಯು ॥ ಎಷ್ಟು ತಾತ್ಪರ್ಯ ವರ್ಣನೆಯು, ಅ । ಷ್ಟಷ್ಟು ಕೃಷ್ಣನ ಕಂಠ ಮಣಿಯು ॥ ೩ ॥ ಏಸು ಶ್ರೀ ಹರಿವ್ರತ ಮೌನ ಏ । ಸೇಸು ಶ್ರೀ ಹರಿರೂಪ ಧ್ಯಾನ ॥ ಏಸು ಸದ್ವ್ಯಾಖ್ಯಾನಾ ದಾನ । ಆಸನಾ ಕೈವಲ್ಯ ನಿದಾನಾ ॥ ೪ ॥ ಎನಿತು ಗುರುಪಾದಗಳ ಸ್ಮರಣೆ ಎನಿ । ತೆನಿತು ಮಧ್ವ ಯತಿಗಳ ಸ್ಮರಣೆ ॥ ಎನಿತೇಕಾದಶಿಯ ಜಾಗರಣೆ ಅನಿ । ತನಿತು ಸುಲಭ ಹರಿಸ್ಮರಣೆ ॥ ೫ ॥ ಆರು ಆರೂರು ಮೆಟ್ಟಿಹರು ಮ । ತ್ತಾರೂರಸರ ಕಟ್ಟಿಹರು ॥ ಆರೀರ್ವರ ಪೊಡಮಟ್ಟಿಹರು ॥ ಆರಾರಾಗಲಿ ಕೃಷ್ಣನವರು ॥ ೬ ॥ ಹೇಗೆ ಸಜ್ಜನರ ಉಲ್ಲಾಸ ಹಾ । ಗ್ಹಾಗೇ ಮಹಾಮಹಿಮರಭಿಲಾಷಾ ॥ ಹೇಗೆ ಬುಧರ ಪರಿ-ತೋಷ ಹಾ । ಗಾಗುವದು ಪ್ರಸನ್ವೆಂಕಟೇಶಾ ॥ ೭ ॥

೬೩

**ರಾಗ—ಧನಶ್ರೀ** **ತಾಳ— ಆದಿ**

ಕೇಳಿ ಮರೆವದು ಮನ ಕುಶ-ಶಯನ ॥ ಆಳು ಕಂಡಿದಂತೆ ಚಂದ್ರಮೌಳಿ ಹೇಳಿದಂತೆ ॥ ಪಲ್ಲ ॥ ಮುಂಜಾವದಿ ಗುರುಮಧ್ವಾಮತ ಮಹಿಮಾಹರಾ ಪಾದಾ । ಕಂಜಗಳು ಬಲಗೊಂಡು ಕಲಿಯಾನಕೆಂದು ॥ ೧ ॥ ಕುಂಜರ ವರದನ ನಾಮಾಕೀರ್ತನೆ ಮಾಡೆಂದು । ಮಂಜುಳಾ ಶಾಸ್ತ್ರ ಶ್ರವಣ ಮಹಿಮೆ ಪುರಾಣಾ ॥ ೨ ॥ ಪ್ರಸನ್ವೆಂಕಟೇಶನ ಪಾದ ಪಿಡಿದವರಿಗಾಲ್ಹಾದಾ । ನಿಶಿದಿನಾ ಸಂಸಾರ ನಿಃಸಾರಾ ಘೋರಾ ॥ ೩ ॥

೬೪

**ರಾಗ— ತೆಲಂಗ** **ತಾಳ—ಅಟ್ಟ**

ಚಂಚಲಿಸದೆ ನೀನು ಚತುರನಾಗು ॥ ವಂಚಿಸದೆ ಸಕಲನೊಪ್ಪಿಸು ಹರಿಗೆ ಮನವೆ ॥ ಪಲ್ಲ ॥ ಆರು ನಿನ್ನವರೆಂಬಿ ಅವರಗಲಿದರು ಕಡೆಗೆ ॥ ಭೂರಿ ಸಂಚಿತ ಸಂಪದೆರವಾಯಿತೊ ॥ ಜಾರುತಿವೆ ಕ್ಷಣಲವಗಳೀಗಾಗ ತಿಳಿಯದು । ನಾರಸಿಂಹನ ನಂಬೊ ನಿಷ್ಠೆಯಲಿ ಮನವೆ ॥ ೧ ॥ ಅಲ್ಪ ಸುಖಕಾಗಿ ನೀ ಅನೇಕ ಸುಖ ಮರೆವರೇ । ಕಲ್ಪಕಲ್ಪಕೆ ನಿರಯನುಣಲಿಬಹುದೇ ॥ ಅಲ್ಪರುಪ ದೇಶದಲಿ ಭ್ರಾಂತನಾಗದೆ ಶೇಷ । ತಲ್ಪನ್ನ ಮೊರೆಹೋಗು ತಡೆಯದಲೆ ಮನವೆ ॥ ೨ ॥ ನಿನ್ನಿಂದ ಭವಬಂಧನವು ಮೋಚನವು ನೋಡೋ । ನಿನ್ನಿಂದ ಪ್ರಸನ್ವೆಂಕಟೇಶನೊಲಿವ ॥ ಇನ್ನೆನ್ನ ದಣಿಸದಿರು, ಇದರಿಂದೆ ಮೀರಿದರೆ ಘನ್ನಗುರು ಮಧ್ವೇಶನಾಣೆ ನಿನಗೆ ॥ ೩ ॥

೬೫

**ರಾಗ—ಆನಂದಭೈರವಿ** **ತಾಳ—ಅಟ**

ತಪ್ಪುಗಳೆಲ್ಲ ಪರಿಹರಿಸುವ ನ । ಮ್ಮಪ್ಪನಲ್ಲವೇ ನೀನೂ ॥ ಒಪ್ಪಿದ ಬಳಿಕವಗುಣ ನೋಡದ ತಿ । ಮ್ಮಪ್ಪ ನಲ್ಲವೇ ನೀನು ॥ ಪಲ್ಲ ॥ ಬೆಳಗಿನ ಜಾವದಿ ಹರಿ ನಿನ್ನ ಸ್ಮರಣೆಗೆ । ಹೊಲಬುಗಾಣದ ತಪ್ಪೂ । ಮಲಮೂತ್ರ ವಿಸರ್ಜನೆಯ ವೃತ್ತಿಕೆಯಲಿ । ಮಲಿನವ ತೊಳೆಯದ ತಪ್ಪೂ । ತುಲಸಿ ವೃಂದಾವನ ಗೋಸೇವೆಗೆ ತನು । ಅಲಸಿಕೆ ಮಾಡಿದ ತಪ್ಪೂ ॥ ನಳಿನ ಸಖೋದಯಗರ್ಘ್ಯವನೀಡದ । ಕಲಿವ್ಯಾಸಂಗದ ತಪ್ಪೂ ॥ ೧ ॥ ದಿನದಿನ ಉದಯದಿ ಸ್ನಾನವ ಮಾಡದ । ತನುವಂಚನಿಯ ತಪ್ಪೂ । ಮುನಿಸುರ ಭೂಸುರರಾರಾಧಿಸದೆ । ಧನವಂಚನಿಯ ತಪ್ಪೂ ॥ ವನಜಾಕ್ಷನೆ ನಿನ್ನ ಪಾದಕೆ ವಿಮುಖದಿ । ದುರ್ಜನಸಂಗದ ತಪ್ಪೂ ॥ ೨ ॥ ಕಣ್ಣಿಲಿ ಕೃಷ್ಣಾಕೃತಿ ನೋಡದೆ ಪರ । ಹೆಣ್ಣು ನೋಡಿದ ಕಂಣು ತಪ್ಪೂ । ನಿನ್ನ ಕಥಾಮೃತ ಒಲ್ಲದೆ ಹರಟೆಯ । ಮನ್ನಿಸಿದಾ ಕಿವಿ ತಪ್ಪೂ । ಅನ್ನವ ನಿನಗರ್ಪಿಸದಲೆ ಹರುಷದಿ । ಉಣ್ಣುವ ನಾಲಿಗೆ ತಪ್ಪೂ ॥ ಚಿನ್ಮಯನೇ ನಿನ್ನ ಚರಣಕ್ಕೆರಗದೆ । ಉನ್ಮತ್ತವಾದ

ತಲೆ ತಪ್ಪೂ ‖ ೩ ‖ ಶ್ರೀನಿರ್ಮಾಲ್ಯದ ವಿರಹಿತ ಸುರಭಿಯ । ಘ್ರಾಣಿಪ ನಾಶಿಕ ತಪ್ಪೂ । ಆನಂದದ ಸಂಕೀರ್ತನೆ ಮಾಡದೆ । ಹೀನವಾದದ ಬಾಯ ತಪ್ಪೂ । ಶ್ರೀನಾರಾಯಣ ವೇಶ್ಮಕೆ ಹೋಗದೆ । ನಾನಾಟಣೆಯ ಪಾದ ತಪ್ಪೂ ‖ ಶ್ರೀನಾಥಾರ್ಚನೆ ಇಲ್ಲದ ಮನೆಯ । ನಾನಾ ಊಳಿಗದ ಕೈ ತಪ್ಪೂ ‖ ೪ ‖ ಯಜ್ಞಾತ್ಮಗೆ ಯಜ್ಞಾರ್ಪಿಸದೆ ರತಿ । ಮಗ್ನದ ಮೇಂಢ್ರದ ತಪ್ಪೂ ‖ ಅಗ್ರ ಕರ್ಮದ ಶೌಚವ ಜರಿವ ಸ । ಮಗ್ರ ಗುಹ್ಯಕೃತಿ ತಪ್ಪೂ ‖ ಅಜ್ಞಾನ ಜ್ಞಾನದಿ ಕ್ಷಣಲವ ಶತ । ವೆಗ್ಗಳಘ ಘಳಿಸುವ ತಪ್ಪೂ । ಯಜ್ಞೇಶ ಪ್ರಸನ್ವೆಂಕಟ ಕೃಷ್ಣ ನಾ । ಮಾಗ್ನಿಗೆ ತೃಣವೀ ತಪ್ಪೂ ‖ ೫ ‖

೬೬

**ರಾಗ—ಶಂಕರಾಭರಣ** **ತಾಳ—ಏಕ**

ನೆನೆ ಮನವೆ, ದಾನವಾರಿಯಾ ‖ ಹಿತಕಾರಿಯಾ । ಶ್ರಿತಧೊರೆಯ ‖ಪ‖ ಹೀನಪಾಪಾಖ್ಯ ವಿ । ಪೀನದಾವಕೃಶಾನು ‖ ಸಾನಾತನನಾರಾಯಣ । ಶ್ರೀನಾಥನ ‖ ೧ ‖ ಘೋರ ನಿರಯ ವಿ । ದೂರ ಕರುಣಾ ಪಾರ । ವಾರಿಜಾಸನವಂದ್ಯ, ಸುರಶ್ರೇಷ್ಠನ । ಸುರವೀರನಾ ‖ ೨ ‖ ತನ್ನವರಿಗೆ ಪ್ರ । ಸನ್ನ ವೆಂಕಟಕೃಷ್ಣ ‖ ಮನ್ಯ ಸದ್ಭಕ್ತರ ಪಾವನ್ನನಾಮನ ‖ ೩ ‖

೬೭

**ರಾಗ—ಕೇದಾರಗೌಳ** **ತಾಳ—ಅಟ್ಟ**

ಬಿಡು ನಾಚಿಕೆಯನು । ಝಾಡಿಸು ಚಕ್ರಿಯನು ‖ ಹಿಡಿಯೈ ವೈಕುಂಠಾ ಜಾ । ವಡಿಯವನಡಿಯಾ ‖ ಪಲ್ಲ ‖ ಎಳೆತನ ಯೌವನ ಮುಪ್ಪೆಂದಾ ಜಪಿಸಿ । ಹೆಬ್ಬುಲಿಯಂಥಾ ಮೃತ್ಯು ಗಂಟಲ ಬಲಿಗೆ ‖ ತಿಳಿದೂ ತಿಳಿದೂ ಸಂದುಗಡಿಯದ ಲೇಖವ । ನಳಿಯೆ ರಾಮನನು । ಹೊಗಳೋ ಜೀವನವೇ ‖ ೧ ‖ ಅಹಂಕಾರ ವಾರಿಧಿಯಲ್ಲಿಶ್ಯಾಡಿ ಬರೆ । ಬಹಿರ ಸದ್ಗುಣದಿ ನಿರಯಕೆ ಪೋಗದೆ ‖ ಅಹರ್ನಿಶಿ ಶ್ರೀನಾಥ ನೊಲಿವಂತೆ ಭಕುತಿಯ। ಸಹಸ ಸಾಧಿಸು ಡಂಭವ್ಯಾಕಿನ್ನು ಮನವೆ ‖ ೨ ‖ ಯೋಚನೆಗೊದಗದಾನಂತಾ ಮಹಿಮನಿರೆ । ವಾಚಿಸವನ ಗುಣ ಕರ್ಮಗಳ ‖ ನಾಚದೆ ಪ್ರಸನ್ವೆಂಕಟಾನ । ಮುಂದೆ ಕುಣಿದಾಡೊ ‖ ೩ ‖

೬೮

**ರಾಗ— ಸಾರಂಗ** **ತಾಳ—ಆದಿ**

ಬುದ್ಧಿ ಧೃತಿಯೆಂಬ ನಾರೇರು, ಶ್ರೀ । ಮುದ್ದು ಕೃಷ್ಣನ ಒಲಿಸಿ ಕೊಂಡಾರು ॥ ಪಲ್ಲ ॥ ಅಕ್ಕ ಬುದ್ಧಿವಂತೆ ತಂಗೀಗೆ ಬಲು । ನಿಕ್ಕರದಲಿ ಹಿತವಾಡಿದಳು ॥ ಚಿಕ್ಕವಳೆಂದಂಜದೆ ಧೃತಿಯಳು ತ । ಮ್ಮಕ್ಕನೊಳು ಬಡಿವಾಡಿದಳು ॥ ೧ ॥ ಕಟ್ಟಲೆ ಮೀರಿ ಮಾತಾಡದಿರೆ ತಂಗಿ । ಸಿಟ್ಟು ಬರುತೀದೆ ಕಾಡದೀರೆ ॥ ಕಟ್ಟಲೆ ಮೀರಿ ಮೊದಲೆ ನವೆದೆ ನಿನ್ನ । ಕಟ್ಟನೊಳಗೆ ಸಿಕ್ಕು ಬಲು ದಣಿದೆ ॥ ೨ ॥ ವಗತಾನ ದಾರದೆ ಸಣ್ಣವಳೇ ನೀ । ಜಗಳಾಕೆ ನಿಂತೆ ದೊಡ್ಡಿ ಡೆಯವಳೆ ॥ ನಗೆಗೇಡು ಮಾಡಿಕೊಂಡೆಲೆಯಕ್ಕಾ ನಿ ನ । ಗೊಗತನ ನನ್ನಿಂದ ತೀಳಿಯಕ್ಕ ॥ ೩ ॥ ಹರಿ ನಿನಗೆ ದಕ್ಕಿದನೆಂದು ನುಣ್ಣ । ಗುರಿಯ ಬೇಡಲೆ ತಂಗಿ ಹೋಗಿಂದು ॥ ಅರಸ ದಕ್ಕುವನೆ ಇನ್ಯಾರಿಗೆ ಅ । ಕ್ಕರೆ ಕರಳು ಮಾತ್ಯಾಕೆ ಹಿರಿಯಳಿಗೆ ॥ ೪ ॥ ನನ್ನ ಹಿರಿಯತನ ಕೆಣಕಿದೆಲ್ಲಾ ನನ್ನ । ಕಣ್ಣಮುಂದೆ ನಿನ್ನೆ ಬಂದವಳೀ ॥ ಹುಣ್ಣಿವೆ ಚಂದ್ರ ದಿನಕೆ ಹಿರಿಯ ಜಗ । ಮನ್ನಣೀಗೆ ಬಾಲಚಂದ್ರನಲ್ಲೆ ॥ ೫ ॥ ಪಟ್ಟ ನನ್ನದು ಮೊನ್ನೆ ಬಂದವಳೇ ನಿನ್ನ । ಧಿಟ್ಟತನವನೇ ನಾ ಹೇಳಲೆ ॥ ಕೃಷ್ಣ ನಿನಗೆ ದೂರನಲ್ಲೆ ಅಕ್ಕ ಹಿರಿಯ । ಗುಟ್ಟೇನ ಮೋಹವೆ ನನಗೇತಕಕ್ಕ ॥ ೬ ॥ ತಂಗಿ ಮನವ ನೋಯಿಸ್ಯಾಡದೀರೆ ಶ್ರೀ । ರಂಗಗೆನಗೆರವು ಮಾಡದಿರೆ ॥ ಮಂಗಳ ಮಹಿಮ ಮುರಾರಿಯ ಅ। ರ್ಧಾಂಗಿಯೆ ನಾ ನಿನಗೆ ಸರಿಯೇ ॥ ೭ ॥ ಹಿರಿಯ ಕಿರಿಯ ಳಲ್ಲಾ ಸರಿ ಕೇಳೆ ಹರಿ । ಗೆರವಿನಾ ಮಾತಿಲ್ಲಾ ಖರೆ ಕೇಳೆ ॥ ಪರಮ ಪುರುಷ ವಾಸುದೇವನೇ ಕೊಟ್ಟಾ । ವರಕೆಂದು ತಪ್ಪದೆ ಕಾವನೆ ॥ ೮ ॥ ಕನ್ಯೆ ಲಕು ಮಿಯಾ ರಮಣನೇ ಸ್ವಾಮಿ । ತನ್ನನ್ನಂಬಿದವರಾ ಹೊರೆವನೆ ॥ ಪುಣ್ಯಗೋಪಿ ಜನಜಾರಾನೆ ಪ್ರ । ಸನ್ನ ವೆಂಕಟಪತಿ ಧೀರಾನೆ ॥ ೯ ॥

೬೯

**ರಾಗ—ವಸಂತ** **ತಾಳ—ಆದಿ**

ಬೇಸರದೆಂದೂ ಸದಾಶಿವನೆನ್ನಿ । ಕಾಶಿಯ ಪ್ರಭು ವಿಶ್ವೇಶ್ವರ ನೆನ್ನಿ ॥ ಪಲ್ಲ ॥ ನಂದಿ ವಾಹನ ಆನಂದಯೆನ್ನಿ । ಸುಂದರ ಗಣಪನ ತಂದೆಯು

ಎನ್ನಿ ॥ ೧ ॥ ನಂಬೆ ಭವಾಂಬಧಿ ಅಂಬಿಗನೆನ್ನಿ । ಅಂಬಿಕೆಯರಸು ತ್ರಿಯಂಬಕನೆನ್ನಿ ॥ ೨ ॥ ಕರ್ಪೂರಭಾಂಗ ಕಂದರ್ಪಹರೆನ್ನಿ । ಸರ್ಪಭೂಷಣಗೆ ಸುಖಾರ್ಪಣವೆನ್ನಿ ॥ ೩ ॥ ಬೇಡಿದ ಭಾಗ್ಯವೀಡಾಡುವನೆನ್ನಿ । ಬೇಡನ ಭಕುತಿಗೆ ಕೂಡಿದನೆನ್ನಿ ॥ ೪ ॥ ಶಂಭು ಗಜದ ಚರ್ಮಾಂಬರನೆನ್ನಿ । ಸಾಂಬ ಸುಗುಣ ಕರುಣಾಂಕನೆನ್ನಿ ॥ ೫ ॥ ಎಂದಿಗೂ ಭಾವಿಕ ಮಂದಿರನೆನ್ನಿ । ಇಂದುಶೇಖರ ನೀಲಕಂಧರನೆನ್ನಿ ॥ ೬ ॥ ದುರ್ದನುಜಾಸುರ ಮರ್ದಕನೆನ್ನಿ ಕ । ಪರ್ದಿ ಕಪಾಲಿ ತೇ ವರ್ಧಕನೆನ್ನಿ ॥೭॥ ಶರಣು ಸುರಾರ್ಚಿತ ಚರಣನೆ ಎನ್ನಿ । ಪರಮ ಭಕ್ತರನು ಪೊರೆಯುವನೆನ್ನಿ ॥೮॥ ತ್ರಿಪುರಾಂತಕ ನಿಷ್ಕಪಟನು ಎನ್ನಿ । ಅಪಮೃತಿಹರ ಖಳರಪಹರನೆನ್ನಿ ॥ ೯ ॥ ದಕ್ಷನ ಯಜ್ಞ ವಿಶಿಕ್ಷಕನೆನ್ನಿ ॥ ಪಕ್ಷಿಗಮನ ಭಟರಕ್ಷಕನೆನ್ನಿ ॥ ೧೦ ॥ ಈ ಪರಿ ನೆನೆದರೆ ಪಾಪ ದೂರೆನ್ನಿ । ಶ್ರೀ ಪ್ರಸನ್ವೆಂಕಟೇಶಗೆ ಪ್ರಿಯನೆನ್ನಿ ॥ ೧೧ ॥

೭೦

**ರಾಗ—ಧನಾಶ್ರೀ** **ತಾಳ—ಅಟ**

ಮರಿಯದಿರು ಮನವೆ ಮಾಧವನಾ । ನಮ್ಮ । ದುರಿತ ದಾರಿದ್ರವನು ಹರಿಸಿ ಹೊರುವವನಾ ॥ ಪ ॥ ಆಳರಿತು ಊಳಿಗವ ಕೊಂಡು ದಣಿವಂತೆ । ಮೇಲಾಗಿ ಜೀವ ಕೊಡುವ ದೇವನ ॥ ಕಾಲಕಾಲಕೆ ಮಾಳ್ಪ ನಡೆ ತಪ್ಪು ನುಡಿ ತಪ್ಪು ॥ ಆಲೋಚಿಸದೆ ಕರುಣಿಸುವ ಕರುಣನಾ ॥ ೧ ॥ ಮೂಢ-ನಾಗಲಿ ಮತಿಯುಳ್ಳವನಾಗಲಿ । ಪಾಡಿದಾಕ್ಷಣ ಭೃತ್ಯನೆಂದೊಲಿದು ॥ ಕೂಡಿಕೊಂಬುವ ಧೊರೆಗಳಲಿ ಹರಿಯಲ್ಲದ । ನಾಡಾಡಿ ಭಣಗು ಕಲ್ಲುಗಳ ಬೇಡುವರೇ ॥ ೨ ॥ ಮುನ್ನಾರು ಅನ್ಯದೇವರ ಭಜಿಸಿ ಭವಗೆದ್ದ । ರಿನ್ನಾರು ಹರಿಯೊಲಿಮೆಯಲಿ ದಣಿವರೂ ॥ ನಿನ್ನ ಗುರುಗಳಿಂದರಿತು ನೆನೆ ನಂಬಿ ಪ್ರ । ಸನ್ನಾ ವೆಂಕಟ ಪತಿಯ ಪದವನು ಈವ ॥ ೩ ॥

೭೧

**ರಾಗ—ಅಸಾವೇರಿ** **ತಾಳ—ಆದಿ**

ಮುಂದೋರುವನು ಮುರಾರಿ ॥ ಎಂದೆಂದು ಕುಜನಕೆ ದೂರನು ಶೌರಿ ॥ ಪಲ್ಲ ॥ ಘನ ಭಾಗವತವ ಶ್ರವಣ ಮಾಳ್ಪರಿಗೆ । ವನಜನಾಭನ ಕೀರ್ತನ

ಕಾಮೇಷ್ಟರಿಗೆ ॥ ಮುನಿವಂದ್ಯ ಕೃಷ್ಣನ ಮನಸೀಲಿ ಮರಿಯಾದೆ । ಗುಣ ಕರ್ಮಗಳ ಸಂಸ್ಮರಣಿಯಲಿ ಹರಿಗೆ ॥ ೧ ॥ ಶ್ರೀ ವಾಸುದೇವಾಂಘ್ರಿಸೇವಾ-ಸಕ್ತರಿಗೆ । ಶ್ರೀವರನರ್ಚನೆ ಸದ್ಭಾವಯುಕ್ತರಿಗೆ ॥ ಸಾವೀರಬಿಧಾನದ ದೇವ ದೇವಗೆ ಸರ್ವ । ದಾ ವಂದಿಸುವ ವ್ಯಾಸಂಗಾವಿಡವರಿಗೆ ॥ ೨ ॥ ಶೇಷಶಯನನಾ ಸದ್ದಾಸರಾದರಿಗೆ । ದೋಷಾದೂರನ ಸಖರಾಹ ಜೀವರಿಗೆ ॥ ಪ್ರಸನ್ವೆಂಕಟ ವಾಸಗೆ ತನ್ನಾಸರ ಅ । ರ್ಪಿಸಿ ಮುಕುತಿ ಮನೆಯಾಶೆವಂತರಿಗೆ ॥ ೩ ॥

೭೨

**ರಾಗ—ಶಂಕರಾಭರಣ** **ತಾಳ—ಅದಿ**

ಮೋಕ್ಷೋಪಾಯಕಾನಂದ ಮುನೀಂದ್ರನ । ಶಿಕ್ಷಾ ಮಾರ್ಗಹುದಯ್ಯಾ । ಲಕ್ಷಣಕೆ ಲಕ್ಷಣವನು ಹೇಳೇನು । ಲಕ್ಷ್ಯದಿ ಗುಣವಿಲ್ಲವಯ್ಯಾ ॥ ಪಲ್ಲ ॥ ಸುಕೃತ ತಾನಾದಕೆ ಚಿರಕಾಲಕೆ ಒಮ್ಮೆ । ಧಿಕೃತವಹ ಭವ ತುಷ್ಟೀ । ಸುಖ-ವೆಂಬವ ಸ್ವರೂಪಾನಂದನವ । ವಿಕಸಿತಾಗುವ ಜ್ಞಾನದೃಷ್ಟೀ ॥ ಸುಖವಾಪೇ ಕ್ಷಿಸಿ ಪ್ರಕೃತನುದಾಸಿಪ । ಅಖಿಳ ಮಹಾತ್ಮರಭೀಷ್ಟೀ ॥ ಸಕಳಾನಿಷ್ಟವ ಸಾಗಿಸುವ ಶ್ರೀ । ಸುಖತೀರ್ಥರ ಶುಭಗೋಷ್ಠೀ ॥ ೧ ॥ ಕಿವಿಯಲಿ ಸಚ್ಛಾಸ್ತ್ರ ಕೇಳಿ ಧ್ಯಾನವುನ। ನವ ಸಾಧಿಪುವೆ ದೇವಸ್ಪರ್ಥಿ। ಕುವಲಯುಸುರ ಕುಲತಿಲಕರು ಮೆಚ್ಚಿಹ ।, ನವಭಕುತಿಯು ಪಥಕೀರ್ತಿ । ಅವಿರಳ ಎದೆಗದ್ದಿಗೆಯೊಳು ಮೆರೆವನ । ಸವಿಗುಣ ನಿರ್ಣಯ ವಾರ್ತಿ ॥ ವಿವರಿಸಿ ವಾರಂವಾರ। ವರದ ಮಧ್ವ । ದಿವ ಜಗದ್ಗುರು ವರಮೂರ್ತಿ ॥ ೨ ॥ ಈಶ್ವರ ಸಾಕ್ಷಾತ್ಕಾರದ ಭೇದ ರ । ಹಸ್ಯ ವಿಚಾರ ಕುಯೋಗೀ । ನಶ್ವರ ನಶ್ವರವುತ ವೈರಾಗ್ಯದ । ಐಶ್ವರ್ಯಾನ್ವಿತ ಭೋಗೀ । ಶಾಶ್ವತ ಪ್ರತ್ಯಕ್ಷಾದಿ ತ್ರಿಪ್ರಮಾಣ । ಭಾಷ್ಯಕ ಶ್ರೀಪದ ಯೋಗಿ ॥ ವಿಶ್ವದೊಡೆಯು ಪ್ರಸನ್ವೇಂಕಟ ಪತಿಪದ । ವಿಶ್ವಾಸಿಕ ಮುನಿಯೋಗಿ ॥ ೩ ॥

೭೩

**ರಾಗ—ನಾಮಕ್ರಿ** **ತಾಳ—ಅಟ್ಟ**

ಯೋಗವೆಂದರೆ ದಾವುದು ಮಾನಿಸಾಗೆ । ಯೋಗವೆಂದರೆ ದಾವುದು ॥ ನಾಗಶಯನನ ನಾಮವ ಕೂಗುವದೆ ಮಹಾಯೋಗ ॥ ಪ ॥ ಪೂಸರಳನ

ಬಲಿಗೆ ಸಿಲುಕಿ ದೃಢ । ಆಸನ ಬಲಿದು ಮಿಗೆ ॥ ಹಾಸ್ಯವದನೆಯರ ಲೇಶ ಹಾರೈಸದೆ । ದಾಸಾಗಿ ಹರಿಯ ಸದಾ, ಧ್ಯಾಸವೇ ಮಹಾಯೋಗ ॥ ೧ ॥ ವಾಗಾದಿಂದ್ರಿಯ ಕಟ್ಟಾದೆ, ಕುಂಭಕವೆಂದು । ಮೂಗಿನುಸಿರಕಟ್ಟಿದ ॥ ಭೋಗಾ ಬಯಸದೆ ತಾನಾಗಿ ಬಂದದನುಂಡು । ಲೋಗರ ಹಣ ಹೆಣ್ಣಿನ, ತ್ಯಾಗವೇ ಮಹಾಯೋಗ ॥ ೨ ॥ ಭಾವ ಶುದ್ಧಿಯ ಮಾಡದೆ, ಯೋಗಮಾರ್ಗದ । ಠಾವಸಿದ್ಧಿಯ ಮಾಡಿದ ॥ ದೇವ ಪ್ರಸನ್ವೆಂಕಟಾ ವರದನ, ಸ । ದ್ಭಾವುಕರ ಪಾದಾಂಬುಜ ಸೇವೆಯೇ ಮಹಾಯೋಗ ॥ ೩ ॥

೭೪

## ಶ್ರೀ ತುಳಸೀ ಮಹಿಮೆ

**ರಾಗ—ಉದಯ** **ತಾಳ—ಅಟ್ಟ**

ಶ್ರೀ ತುಳಸೀಮಹಿಮೆಯನ್ನು ॥ ಶ್ರೀ ತುಳಸೀಮಹಿಮೆಯನು ಪೇಳ ಲೋಶವಲ್ಲ, ಶ್ರೀ । ನಾಥನಾರಾಯಣನ ಅರ್ಚಕರಿಗೆ ಸದಾ । ಪ್ರೀತಿಕರಳಾಗಿ ರಾಜಿಪಳು ಕಲಿಯುಗದಲ್ಲಿ । ನೋತವರ ಭಾಗ್ಯವೆಂತೋ ॥ ಪಲ್ಲ ॥ ಶ್ರೀಮದಾರ್ಚಿತ ಕ್ಷೀರವಾರಿಧಿಯ ಮಥಿಸುತಿರೆ । ಆ ಮಹಾ ವಿಷ್ಣುವಿನ ನೇತ್ರದಿಂದಲಿ ಪೊರಟು । ಪ್ರೇಮಜಲ ಉದ್ಭವಿಸಿ ನಳನಳಿಸುತಿಹ ದಿವ್ಯ । ಆಮೋದ ಪೂರ್ಣಳಾಗಿ । ಭೂಮಿ ಪಾವನವ ಮಾಡುತಲಿ ಭೂಮಿಪಾಲಕರ । ಧಾಮಧಾಮಗಳಲ್ಲಿ ವೃಂದಾವನದಿ ನೆಲಿಸಿ । ಕಾಮಿತ ಫಲವನೀವ ಕಲ್ಯಾಣ ಕೃಷ್ಣನಿಗೆ । ನೇಮದಿಂ ಪ್ರೀಯಳಾದ ॥ ೧ ॥ ಈ ಮನುಜ ದೇಹದಲಿದಾವ ಪ್ರಾಣಿಯು ಪಿತೃ । ಸ್ತೋಮವನುದ್ಧರಿಪೆನೆಂದರೆ ಸುಲಭ ಸಾಧ್ಯ । ಕೋಮಲ ದಳವನೊಂದು ತಂದು ಶ್ರೀಮಾಧವನ । ತಾಮರಸಚರಣಕರ್ಪಿಸೋದು ॥ ತಾ ಮುನ್ನಮಾಡಿದಘ ಪಂಚಕಗಳೊಂದೊಂದು । ಆ ಮಹಾತುಲಸಿ ವೃಂದಾವನವ ಸೊಂಕಿ ಬಂ । ದಾ ಮರುತದಿಂದಾ ದೇಶ ಗ್ರಾಮ ಪಾವನವು । ಧೀಮಂತ ಮಾನ್ಯಳಾದಾ ॥ ೨ ॥ ತುಳಸಿಯಾ ನೆಳಲಲ್ಲಿ ಅಂಕುರಗಳಿದ್ದಲ್ಲಿ । ಕಳೆದ ಪಿತೃಗಳಿಗೆ ಅನ್ನವಿತ್ತರೆ ಅಕ್ಷಯ ಫಲವು । ಊರ್ಧ್ವ ಪುಂಡ್ರವು । ತಳದ ಮೃತ್ತಿಕೆಯ ನಿಟ್ಟರೆ ಕೋಟಿತೀರ್ಥಗಳ । ಮುಳಗಿರ್ದ ಫಲಸಿದ್ಧವೂ ॥

ನಿಲಯುದಲಿ ಪತ್ರವೃತ್ತಿಕೆ ಕಾಷ್ಠವಿರಲಲ್ಲಿ । ಕಲಿ ಮುಟ್ಟಲಂಜಿ ತೊಲಗುವದು, ಮಣಿಸರಗಳನು ಕೊರಳಲ್ಲಿರೆ । ಕಲುಷ ಸಂಹರವು ನಿಜಸಲೆ ವಿಷ್ಣುಪದವ ನೀವಾ ॥ ೩ ॥ ಶತಸಾವಿರಪರಾಧವಿರಲಿ ಈ ವೃತ್ತಿಕೆಯ ಲಿ । ಪಿತಕಾಯೆನಿಗೆ ಬಹ । ಜನ್ಮನೋಡೆ ವಿಘ್ನಗಳ । ಸ್ಥಿತಿಯ ಗತಿಯುಡಿಗಿ ದುಷ್ಟ ಗ್ರಹಗಳನು ಕೂಲ । ಗತಿಯಾದ ಫಲವ್ಹೂ ॥ ಪ್ರತಿದಿನದಲಿ ನಾಭಿ ಕರ್ಣದಲಿ ಶಿರದಲಿ ಶ್ರೀ । ಪತಿಯ ನಿರ್ಮಾಲ್ಯದಳ ಧರಿಸಿಹನ ಪಾದ । ತೀರ್ಥಗಳೊಮ್ಮೆ । ಸೇವಿಸಿದವರ ಮುಕ್ತಿಕರತಳವಕ್ಕು । ಪತಿತಪಾವನಿ ಎನಿಸುವಾ ॥ ೪ ॥ ದರುಶನದಿ ಸ್ಪರುಶನದಿ ಧ್ಯಾನದಿಂ ಕೀರ್ತನೆಯು । ನಿರುತ ಪ್ರಣಾಮಂಗಳು ಸ್ತೋತ್ರ ದಾರೋಪಣವು । ಪರಮಜಲಶೇಚನಾರ್ಚನ ನಿಷ್ಠೆಯಿಂದ ನವ । ಪರೀಕ್ಷೆಯನು ಮಾಡಲೂ ॥ ಹರಿಚರಣ ಕಮಲರತಿ ದೊರಕಿ ಯುಗಕೋಟಿ ಸಾ । ಸಿರಕಾಲ ತಿರುಗಿ ಬಂದರೆ ಸತತ ಮಾಂಗಲ್ಯ । ಹರಿಯ ಮನೆಯಲ್ಲಿ ನಿಜ ಹರುಷನುಂಬರು । ಮುರಿರಾವರದಂತೆ ಪದವಾ ॥ ೫ ॥ ಒಂದೊಂದು ದಳವ ಕೋಟಿ ಸ್ವರ್ಣಭಾರಕೆ ಮಿಗಿಲು । ಎಂದು ವಿಶ್ವಾಸದಲಿ ತಂದು ಸಾಸಿರನಾಮ । ದಿಂದ ಗೋವಿಂದಗರ್ಪಿಸಿದರಲ್ಲಿಹ ಭವ । ದಂದುಗವು ಮಾನುಷರಿಗೆ ॥ ಸುಂದರ ತುಲಸಿ ಮೂಲವನ್ನು ತೊಡಕಿರ್ದ ಕಳೆ। ಎಂದಿಗಿದು ಶಾಖೋಪಶಾಖದಿ ವೃದ್ಧಿಗಾ । ನಂದವಿದು ನೂರೊಂದು ಕುಲಕೋಟಿಗಳ ನರಕ । ಹೊಂದಲೀಸದು ಪುಣ್ಯವ್ಹೂ ॥ ೬ ॥ ಶ್ರೀವಿಷ್ಣು ವಲ್ಲಭೆಯ ಮೂಲದಲಿ ತೀರ್ಥಗಳು । ಬಾವನ್ನಗಂಧಿಯುಳ ಮಧ್ಯದಲಿ ಸುರನಿಕರ । ಪಾವನಿಯುಳಾದವಳ ಕೊನೆಯುಲಿ ಶ್ರುತಿ ಸಮೂಹ । ಲಾವಣ್ಯ ಗುಣ ರಾಶಿಯೂ ॥ ಭಾವಶುದ್ಧಿಯಲಿ ಉದಯದಿ ಸ್ಮರಿಸಿ ನಿರುತದಿಂ । ದಾವ ಕಾರ್ಯಕೆ ಗೆಲವು ಇಹಪರದಿ ಸೌಖ್ಯವಿ । ತ್ತಾವ ಕಾಲಕೆ ಹೊರುವ ಶ್ರೀ ಪ್ರಸನ್ವೆಂಕಟ । ದೇವನಂಗದೊಳೊಪ್ಪುವಾ ॥ ೭ ॥

## ೭೫

**ರಾಗ—ಕಲ್ಯಾಣಿ** **ತಾಳ—ಝಂಪಾ**

ಶ್ರೀ ವೆಂಕಟೇಶನ ಬಿಡಬ್ಯಾಡಿ ॥ ಪಲ್ಲ ॥ ಹಲವು ದೈವಕೆ ಹಲ್ಲು ತೆರೆಯಾದೆ ಹೊಗಳದೆ । ಛಲ ಮನದಣಿ ಕೊಂಡಾಡಿ ಶ್ರೀ- ॥ ೧ ॥ ಸುರಭಿಯ

ಬಿಟ್ಟು ಕಂಡಾವಿನಾ ಬೆಂಬೊತ್ತಿ । ತಿರುಗಾಡಿ ಕಣ್ಣದಣಿ ಬೇಡಿ ॥ ೨ ॥ ಸ್ಥಿರವಲ್ಲಾ ಮಿಕ್ಕವರ ವರಗಳ ಕೇಳದೆ । ಪರಸನ್ನ ವೆಂಕಟಪತಿಯ ಬೇಡಿ ಶ್ರೀ– ॥ ೩ ॥

೭೬

ರಾಗ—ಬಹುಳಿ

ತಾಳ—ಜಲದ ಎಕ್ಕ

ಸರಿಸರಿದೋಡುತಿವೆ ಲವ ತೃಟಿಗಳು । ತಿರುಗಬೊಲಿಟ್ಟಡಿಯ ॥ ಹರಿ ಜರುಪರತಿಯಾ ದೊರಕಿಸು ಪ್ರಾಣಿ । ಕಿರಿಯರೆಲ್ಲ ಮಾನವರು ಪ್ರಾಣಿ ॥ ಪಲ್ಲ ॥ ಪರದಾರ ಪರಶಿರಿ ಪರನಿಂದೆ ನಿರುತದಿ । ಚಿರರತಿ ಬೆರೆಶೆಲ್ಲೊ । ಪರ ಉಪಕಾರಾ ದರೆ ನರಿಯದ ಬರಿಕೋಣ । ಗರುವಿಲಿ ಇರುವೆಲ್ಲೊ । ನರಹರಿ ಚರಣವಾ-ದರಿಸದೆ ಸ್ಮರಿಸದೆ । ನರರನುಸರಿಪೆಲ್ಲೊ ॥ ಶರೀರಾ ಸಿಂಗರಿಸಿ ಸತ್ಕಾರಿಯ ಬಾಹಿರನಾಗಿ ॥ ನಿರಯಕೆ ಗುರಿಯಾದೆಲ್ಲೊ ಪ್ರಾಣಿ ॥ ೧ ॥ ಸುಖಗಳ ಕಕುಲತೆಗಖಿಳನಾ । ಧಶನಾದೆ । ಭಕುತೆ ಫಳಿಕೆ ದೋರೈ । ಬಕ ವೃತ್ತಿಯಾ ಕಲಿತು ಮುಖವ ಮುಸುಕಿದೆ । ವಿರಕತೆ ಸರಕ ದೋರೈ ॥ ಲೋಕದ ಮೋಹಕ ಜ್ಞಾನಾಧಿಕನಾದೆ ಅಕಳಂಕಾ । ಸುಖತೀರ್ಥ ವಾಕುದೋರೈ । ಸಕಲ ಕಳೆ ಕಲಿತು ಶ್ರೀ ಕದಂಬ ಸಖನಾದೆ । ಮುಕುತಿ ಹೊಂದಿಕೆದೋರೈ ಪ್ರಾಣಿ ॥ ೨ ॥ ಅಶನ ದುರ್ವ್ಯಸನಕೆ ನಿಶಿದಿನ ವಶನಾದೆ । ಶ್ರೀಶ ಭೃತ್ಯನೆನಿಸಿಕೊಳ್ಳೊ । ಹುಸಿಪ ದೇಶಾಧ್ಯಾತ್ಮ ವಿಷಯದಿ ಘಾಸಿಯಾದೆ । ದಶವಾವರಿಸಿಕೊಳ್ಳೈ । ವಿಷಯ ಬಯಸಿ ವೃಥ ಹುಸಿ ವರ್ಣಿಸದೆ ನೀ । ವ್ಯಸನ ದಹಿಸಿಕೊಳ್ಳೈ ॥ ಹಸು ತೃಷಿ ಘಸಣಿಗೆ ಬೇಸರದೆ ಪ್ರಸನ್ವೆಂಕ। ಟೇಶನ ಒಲಿಸಿಕೊಳ್ಳೈ ಪ್ರಾಣಿ ॥೩॥

೭೭

ರಾಗ—ಶ್ರೀ

ತಾಳ—ಆದಿ

ಸ್ಥಿರವಲ್ಲೀ ಕಾಯಾ ಸ್ಥಿರವಲ್ಲಾ ॥ ಹೀ । ಗರುಹಿದ್ದು ಹರಿಪಾದ ಮರೆ-ವರೀ ಪ್ರಾಣಿ ॥ ಪಲ್ಲ ॥ ಅಟ್ಟಡಿಗೆ ಎರವು ಉಟ್ಟುಡಿಗೆ ಎರವು । ಇಟ್ಟರಿ ಸಂತತಿ ಸಿರಿಯರವು ॥ ಕಟ್ಟೊಡೆದು ಬೆಮರಿಡಿಸಿ ಜವನವರೊಯ್ಯೆ । ಇಟ್ಟಿರುವ ಧಾನ್ಯ

ಧನವೆಲ್ಲ್ಯೋ ಪ್ರಾಣಿ ॥ ೧ ॥ ಕೃಪಣತೆಯೊಳಗಿನ ನಿಪುಣತೆ ಬಾರದು । ಸ್ವಪನ ಸುಖ ಭೋಗಕೆ ಬಾರದು ॥ ವಿಪಿನ ದಹನ ಮೃಗದಂತಾಪ್ತರು ಬರರು । ನೃಪಸಾರಾಧನೆ ಫಲವು ಸ್ಥಿರವೆಲೋ ಪ್ರಾಣಿ ॥ ೨ ॥ ಹರಿ ಕೊಟ್ಟಾಗಲೇ ಧರ್ಮ ದೊರಕಿಸಬೇಕು । ಸರಕಿಷ್ಟು ತಿರುಕ ಬುದ್ಧಿಯನು ಬಿಡು ॥ ಅರಿಕುಳ್ಳವರ ಕೂಡಿ ಕೋಟಿ ಜತನ ಮಾಡು । ಪುರುಗಲಿಬೇಡ ಮುತ್ತಿಗೆ ಬಂತು ಪ್ರಾಣಿ ॥ ೩ ॥ ಹವಳ ಮುತ್ತಿನಂಥ ಅವಳಿ ಮಕ್ಕಳ ನಂಬಿ । ಕುವಲೇಶನ ಪ್ರಿಯ ಕುಲೇಶನ ಪುರದೆ ॥ ಲವಲವಿಕೆಯ ನಿರಯ ವಾರ್ತೆ ಜರೆವಾರೆ ತ । ನ್ನವಳಿ ತನಗೆ ಓಕರಿಸುವಳೋ ಪ್ರಾಣಿ ॥ ೪ ॥ ಫಣಿತಲ್ಪಗೊಪ್ಪಿಸಿ ಹಣ ತೃಣ ಮಾಡದ । ಹೆಣ ತನ್ನ ತಾನೆ ಹೊಗಳಿಕೊಂಡರೆ । ಎನಿತು ಕಾಲಕೆ ಮೆಚ್ಚ ಪ್ರಸನ್ವೆಂಕಟಪತಿ । ಘನ ತಪ್ಪಕಾಯ ತನ್ನವರನು ಪ್ರಾಣಿ ॥ ೫ ॥

೭೮

**ರಾಗ—ಯಮುನ** **ತಾಳ—ಝಂಪಿ**

ಸುಕಾಲಕೆ ಧರ್ಮವ ಮಾಡುವದೇ ಲೇಸು ॥ ಪಲ್ಲ ॥ ಯವ್ವನವೆಂಬ ಸುಕಾಲಕೆ ಸುರಮುನಿ । ಸೇವ್ಯನ ಭಾಗವತರನ ಮೆಚ್ಚಿಪ ॥ ದಿವ್ಯ ಜ್ಞಾನ ವೈರಾಗ್ಯ ಭಕ್ತಿ ಇರಲಿಬೇಕು । ಹವ್ಯಾಸ ನಡಿಯದು ಮುಪ್ಪು ದುಷ್ಕಾಲಾ ॥ ೧ ॥ ಧನದಾಗಮದ ಸುಕಾಲಕೆ ಮಹಾಸತ್ಪಾತ್ರ । ರನು ಕರೆದು ಅರ್ಚಿಸಿ ಉಣಿಸಿ ಕೃಷ್ಣಾ ॥ ಪೂರ್ಣಬುದ್ಧಿಯಿಂದ ಸರ್ವಸ್ವನೊಪ್ಪಿಸಬೇಕು । ತನ್ನಗಿಲ್ಲದಾಗೆ ದಾರಿದ್ರ್ಯದುಷ್ಕಾಲಾ ॥ ೨ ॥ ವೃತ್ತಿ ಕ್ಷೇತ್ರಿದ್ದ ಸುಕಾಲಕೆ ಶ್ರೀಮಧ್ವ । ಶಾಸ್ತ್ರ ವ್ಯಾಖ್ಯಾತರಿಗಿತ್ತು ಧನ ॥ ಸಾರ್ಥಕ ಮಾಡಿ ಸಂತೋಷದಲ್ಲಿರಬೇಕು । ತಾ ಸ್ಥಾನಭ್ರಷ್ಟನಾಗಿಹುದೆ ದುಷ್ಕಾಲಾ ॥ ೩ ॥ ಸಂಸಾರಾವಸ್ಥೆಯ ಸುಕಾಲಕೆ ಸಜ್ಜನಕೆ । ಹಂಸವಾಹನ ಪಿತನ ಅಂಘ್ರಿಪದುಮ ॥ ಪಾಂಸು ಲಭ್ಯವು ಕೇಚಿತ್ ಕಾಲಕೆ ಹರಿಯಲ್ಲಿ । ಸಂಶಯಭಕ್ತಿಯವನಿಗೆ ದುಷ್ಕಾಲಾ ॥ ೪ ॥ ಮುಕ್ತ ಮಹಿಮಗೆ ಜ್ಞಾನವೇ ದ್ರವ್ಯ ವಿಷಯ ವಿ । ರಕ್ತಿಯೇ ಸೌಭಾಗ್ಯ ಸಕಲ ವಿಜಯ ॥ ಭಕ್ತವತ್ಸಲ ಪ್ರಸನ್ವೆಂಕಟೇಶನ ಸೇವಾ । ಸಕ್ತಿ ಇಲ್ಲದಾಗುವ ಕಾಲ ದುಷ್ಕಾಲಾ ॥ ೫ ॥

೭೯

ರಾಗ— ಕೇದಾರಗೌಳ ತಾಳ—ಝಂಪೆ

ಹರಿದಿನಾ। ಇಂಥ ಹರಿದಿನಾ ॥ ಪಲ್ಲ ॥ ಹರಿದಿನದ ಮಹಿಮೆ ಹೊಗಳಲಗಾಧ। ಪರಮ ಭಾಗವತರಾಚರಣಿಗಾಲ್ಹಾದ ॥ ದುರಿತ ದುಷ್ಕೃತ ಪರ್ವತಕೆ ವಜ್ರವಾದ। ಮರುತ ಸದ್ವ್ರತಕೆಲ್ಲ ಶಿರೋರತ್ನವಾದ ॥ಅನು ಪಲ್ಲ॥ ಭಕುತಿಗೆ ಮೊದಲು ವಿರಕತೆ ಬೀಜವೆಂಬ। ಸಕಲ ತಪದೊಳೆಲ್ಲಾ ಮೇಲೆನಿಸಿ ಕೊಂಬ ॥ ಮಖಕೋಟಿಗಧಿಕ ಫಲಸ್ಥಿರ ಸ್ತಂಭ। ಮುಕುತಿ ಸೋಪಾನ ನಿದಾನತ್ವದೆಂಬ ॥ ೧ ॥ ತ್ವಕ್‌ಚರ್ಮ ಅಸ್ಥಿ ಮಜ್ಜ ಮಾಂಸ ರುಧಿರ। ಯುಕತ ಸಪುತ ಧಾತುಗಳಿಹ ಶರೀರ। ನಖ ಕೇಶ ಕಫ ಸ್ವೇದ ಮಲಮೂತ್ರ ಗಾರ। ಈ ನಿಖಿಳ ಪಾವನ ಮಾಡುವ ನಿರಾಹಾರ ॥ ೨ ॥ ವರವಿಪ್ರ ಕ್ಷತ್ರಿಯ ವೈಶ್ಯ ಶೂದ್ರ ಜನರು। ತರಳಯವ್ವನ ವೃದ್ಧನರರು ನಾರೀಯರು ॥ ಕಿರಾತ ಪುಲತ್ಸ್ಯಾಂಧ್ರ ಹೂಣಜಾತಿಯರು। ಹರಿವ್ರತ ಮಾತ್ರದಿ ಮುಕುತಿ, ಯೈದುವರು ॥ ೩ ॥ ದ್ವಿಜ ಗೋವುವಧ ನೃಪರನು ಕೊಂದ ಪಾಪ। ನಿಜ ಗುರುಸತಿಯರ ಸಂಗದ ಪಾಪ ॥ ಅಜಲಪಾನದ ದಿನದುಣ್ಡ ಮಹಾಪಾಪ। ನಿಜ ನಾಶ ಮೋಕ್ಷ ಪ್ರಾಪ್ತಿಯು ಸತ್ಯಾಲಾಪ ॥ ೪ ॥ ಯಾಮಿನಿಯಲಿ ಅನಿಮಿಷದ ಜಾಗರವು। ಶ್ರೀಮದ್ಭಾಗವತ ಶ್ರವಣ ಗೀತಾ ಪಠಣ ॥ ಪ್ರೇಮ ವಾರಿಧಿಲಿ ಮುಳುಗಿ ಸಂಕೀರ್ತನೆಯು। ಧಾಮತ್ರಯದ ಸುಖಕಿದೇ ಕಾರಣವು ॥ ೫ ॥ ಅರ್ಘಕೋಟಿ ತೀರ್ಥಸ್ನಾನವೆಲ್ಲಾ ಅ। ಜಸ್ರ ಪ್ರಯಾಗ ಕಾಶಿವಾಸವೆಲ್ಲಾ ಸ ॥ ಹಸ್ರಕೋಟಿ ಭೂಪ್ರದಕ್ಷಿಣೆಯೆಲ್ಲಾ। ಸುಶ್ರದ್ಧೆ ಸಹ ಜಾಗರಕೆ ಸರಿಯಲ್ಲಾ ॥ ೬ ॥ ಪಂಚಮಹಾಪಾಪ ಪ್ರಪಾಪವವಗೆ। ವಂಚಕ ಪಿಶುನ ಜನರ ಪಾಪವವಗೆ ॥ ಮಿಂಚುವ ಕ್ಷೇತ್ರವಳಿ ಪಾಪವವಗೆ। ಪಂಚಕ ವೃತ ಪೆತ್ತವ್ರತ ಉಲ್ಲಂಘಿಪಗೆ ॥ ೭ ॥ ಸರ್ಪಶಯನಗೆ ನೀರಾಜನವೆತ್ತಿ ನೋಡಿ। ಉಪವಾಸದಿ ಭಗವಜ್ಜನ ನೃತ್ಯವಾಡಿ ॥ ಚಪ್ಪಾಳಿಕ್ಕುತ ದಂಡಿಗಿ ಮುಟ್ಟಿಪಾಡಿ। ತಪ್ಪೇನಾ ಇಳನರ್ಕ ಫಲಕೈಗೂಡಿ ॥ ೮ ॥ ಶ್ರುತಿ ಪಂಚ ರಾತ್ರಾಗಮವು ಸಾರುತಿವೆ। ಯತಿಮಧ್ವರಾಯರುಕುತಿ ಪೇಳುತಿವೆ ॥ ಕ್ರತುಸೇವ್ಯಪ್ರಸನ್ವೆಂಕಟ ಕೃಷ್ಣಮತವೆ। ಕ್ಷಿತಿಪತಿ ಸುರರತಿಶಯದ ಸದ್ ವ್ರತವೆ ॥ ೯ ॥

೮೦

ರಾಗ—ಸೂರಟ ತಾಳ—ಏಕ್ಕ

ಹೀಗಾದರೆ ದೂರಾ, ಪರಗತಿ । ಹೀಗಾದರೆ ದೂರಾ ॥ ಪಲ್ಲ ॥ ತಾನೊಳ್ಳೆದ್ದುಂಡು ವಿ । ಪ್ರಾಸೀಕಕೊಂದು ॥ ಹೀನ ದಯದಿ ಮಹಾ । ಜ್ಞಾನಿಯಾಗಿದ್ದರೂ ॥ ೧ ॥ ಆತುರದಲಿ ಧ । ರ್ಮೋತ್ತರ ತಡವು । ಯಾತಕ ಸಲ್ಲದ । ಮಾತಿನ ಮಡವು ॥ ೨ ॥ ಭೂರಿಗುಣಜ್ಞ ಉ । ದಾರವ ನರಿಯಾ । ಆರಿಗೆ ಪ್ರಸನ್ವೆಂಕ । ಟಾ ಕಾಯೊ ದೊರೆಯಾ ॥ ೩ ॥

೮೧

ರಾಗ—ಸೂರಟ ತಾಳ—ಏಕ

ಹೀಗಿದ್ದರೆ ಲೇಸು । ಜ್ಞಾನಿಗೆ । ಹೀಗಿದ್ದರೆ ಲೇಸು ॥ಪಲ್ಲ॥ ಸತಿ ಇದ್ದರೆ ಸಮುಹಿತದವಳಾಗಿ ॥ ಸುತನಿದ್ದರೆ ನಿಜ ಮತದವನಾಗಿ ॥ ೧ ॥ ಧನವಿದ್ದರೆ ಸಜ್ಜನಕೆ ವಿಭಾಗ ॥ ಮನೆ ಇದ್ದರೆ ಮಧ್ಯಾಹ್ನಕನ್ನತ್ಯಾಗ ॥ ೨ ॥ ಭಕುತಿ ಇದ್ದರೆ ಡಂಭಕವನಳಿದು ವಿ । ರಕುತಿದ್ದರೆ ಭವದಾಶೆಯ ಕಳಿದು ॥ ೩ ॥ ಮತಿ ಇದ್ದರೆ ಶುಭಮತಿಯವನಾಗೀ । ಧೃತಿ ಇದ್ದರೆ ದುಷ್ಕೃತಿಗಳ ನೀಗಿ ॥ ೪ ॥ ಪ್ರಸನ್ವೆಂಕಟೇಶನ, ಪ್ರಸಾದವನುಣುತ । ವಿಷಮ ಜನನ ಮೃತಿ ಘಸಣೆ ತಪ್ಪಿಸುತ ॥ ೫ ॥

೮೨

ರಾಗ—ತೆಲಗ ಕಾಂಬೋದಿ ತಾಳ—ಆದಿ

ಜ್ಞಾನಿಯಾಗಬೇಕು ಅಜ್ಞಾನ ನೀಗಬೇಕು । ತತ್ವ। ಜ್ಞಾನದಿಂದಿರಬೇಕು ಮುಕ್ತಿ, ತಾನೇ ಆವಾಗಕ್ಕು ॥ ಪಲ್ಲ ॥ ಅಬ್ಜನನನ್ನಾ ಪಾದಾಬ್ಜಾ ನಂಬಿರೆನ್ನೆ। ಕು । ಶಬ್ದಗುಂದಿರಣ್ಣಾ ಭವಾಬ್ಧಿ ದಾಟಿರಣ್ಣ ॥ ೧ ॥ ಮಾಡಿ ಸಾಧುಸಂಗ ಈ । ಡಾಡಿ ಖಳರಾ ಹಂಗ ನೀವು ॥ ನೋಡಿ ಅಂತರಂಗ ಕೈ । ನೀಡುವನು ರಂಗಾ ॥ ೨ ॥ ತ್ಯಾಗ ಭೋಗ ಸರ್ವ ಶ್ರೀಹರಿಗೆ ಒಪ್ಪಿಸಿರುವ ಆ ॥ ಯೋಗಿಯನ್ನು ಕರೆವಾ, ಶ್ರೀ । ನಾಗಶಯನ ಹೊರೆವಾ ॥ ೩ ॥

ತಿದ್ದಿ ನೋಡಿ ವರ್ಮಾ ಅಸಾಧ್ಯ ಶರ್ಮಾವರ್ಮಾ ಜೀ। ಗೆದ್ದು ಬಿಡಿಯು ಧರ್ಮಾ ನಿನ್ನದು ಶುಭಕರ್ಮಾ ‖ ೪ ‖ ದಾಸರ ಜೀವನ್ನಾ ಭಕ್ತ ಪೋಷಕಾ ಪಾವನ್ನಾ ಶ್ರೀ। ಪ್ರಸನ್ನ ವೆಂಕಟ ಪ್ರಸನ್ನ ಅಭಿಲಾಷೆ ಸಂಜ್ಞಾನೆ ಧನ್ಯಾ ‖ ೫ ‖

೮೩

## ನೀತಿಯು ಪದಗಳು

**ರಾಗ—ರಾಮ ಶ್ರೀ** **ತಾಳ— ಆದಿ**

ಅಂದೆ ನಿಂದೆನ್ನೈಯ್ಯಾ ಶ್ರೀ ಅರ। ವಿಂದ ನಾಭನ ಹಗೆಯುವ ಅಸುರ ‖ ಎಂದಿಗೆ ಮತಿಕವಲಿಲ್ಲದೆ ಹರಿಪದ। ಹೊಂಡಿದಗೆ ಮುಕ್ತಿಯುವಸರಾ ‖ ಪಲ್ಲ ‖ ಅಂದಿಗೆ ಹರಿ ಮಹಿಮೆಗಳನ್ನು ಆ–। ನಂದದಿಂದ ಕೇಳದವ ದ್ವೇಷಿ ‖ ಇಂದೆ ಹರಿ ಕಥೆ ತಾತ್ವಿಕ ಜನರನು। ನಿಂದಿಸುವವನೆ ನಿಜ ದ್ವೇಷಿ ‖ ೧ ‖ ಸರ್ಪ ಕೃಷ್ಣಾಕೃತಿಗೆ ವೈರ್ಯಾಗಿ ಬಹು। ಗರ್ವಿಪ ಕಂಸನು ಅತಿ ತಾಮಸ ‖ ಉರ್ವಿಲಿ ನರಹರಿ ಚರಣಪರ್ಚಿಸದೆ। ಸರ್ವೋತ್ತಮನೆಂಬವ ತಾಮಸ ‖ ೨ ‖ ವಾಸು ದೇವನ ಪಾಶದಿ ಬಿಗಿಸುವೆನೆಂದು। ಆಶಿಸಿ ಕೆಟ್ಟ ಕೌರವ ಕುಮತಿ ‖ ದೋಷ ಧರ್ಮವನೆಲ್ಲ ಸರಿ ಮಾಡಿ ಶಾಕ್ತನಾ। ಗ್ಯಾಸುರಿ ಪೂಜಿಪ ಹೊಲೆ ಕುಮತಿ ‖ ೩ ‖ ರುಕ್ಮಿಣಿದೇವಿಯೇ ಲಕ್ಷ್ಮ್ಯೆಂದು ತಿಳಿಯದ। ರುಕ್ಮನು ಮದ ಸೊಕ್ಕಿದ ಪಾಪಿ ‖ ಲೆಖ್ಖವರಿಯದೆ ಜೀವೇಶರು ಸಮರೆಂದು। ಲೆಕ್ಕಿಸುವವ ನರರೊಳು ಪಾಪಿ ‖ ೪ ‖ ಕೃತಕ ಹಕ್ಕಿಯನೇರಿ ವಾಸುದೇವನೆಂದು। ಅತಿ ಕ್ಲೇಶವುಂಡ ಪೌಂಡ್ರಕ ಕಲಿಯು ‖ ಸಕಳ ಜಗದೊಡೆಯ ಪ್ರಸನ್ವೆಂಕಟೇಶನ। ಭಕತನಾಗದೆ ನಾನೆಂದವಾ ಕಲಿಯು ‖ ೫ ‖

೮೪

**ರಾಗ— ದೇಶಿ** **ತಾಳ—ಆದಿ**

ಆರೆನ್ನ ಉಳುಹುವರೈ ಎಲೋ ರಂಗಾ ‖ ಘೋರಾರಣ್ಯ ಭವದಿ ಸಿಕ್ಕಿದೆ ರಂಗಾ ‖ ಪಲ್ಲ ‖ ಎಂಟು ಕಾಡಾನೆ, ಎಂಟು ಕಡೆಯಲಿ ನಿಂತಿವೆ। ಗಂಟ ನಿಕ್ಕಿವೆ ಮೂರು ದಲ್ಲುರಿಯ ‖ ಸುಂಟರ ಗಾಳ್ಯೆಬ್ಬರಿಸಲು ಗಿಡ। ಗಂಟು

ಬಿದ್ದೆ ನೀನಲ್ಲದೆನ್ನಾ ॥ ೧ ॥ ಹುಲಿಯೊಂದು ಗುಡುಗುಡಿಸುತಿದೆ ಭಯಂಕರ। ತೋಳೆರಡು ಕೆಕ್ಕರಿಸುತಿವೆ ॥ ಸಲುಗೆಯ ಕೋತಿ ಒಂದಣಕಾಡುತಲಿದೆ। ಮೇಲೆ ಕರಡಿಯು ಹತ್ತೆಳವುತಿದೆ ॥ ೨ ॥ ಕಾಳುರಗನ ಕಟ್ಟು ವೈತುಂಬ ನನ್ನ। ನಾಲಿಗೇಳದು ನಿನ್ನ ಕರೆಯಲಿಕೆ ನಿ- ॥ ನ್ನಾಳನು ಕರೆಸಿಕೊಳ್ಳೋ ತಂದೆ ನಾ। ಗೋಳಟ್ಟಿ ಪ್ರಸನ್ನ ವೆಂಕಟ ಬಂಧು ॥ ೩ ॥

೮೫

ರಾಗ—ದೇಶಿ ತಾಳ—ಏಕ

ಈಗಾಗೋ ಇನ್ನಾವಾಗೋ। ಈ ಗಾತ್ರಾ ಅಸ್ಥಿರವಣ್ಣಾ ॥ ಹೇಗಾದರೂ ಹೊಗಳಾಡಲಿ ಬೇಕು। ನಾಗಾರಿ ಗಮನನ್ನ ॥ ಪಲ್ಲ ॥ ಮನಹರಿದತ್ತಲೆ ಹರಿಹರಿದಾಡೀ। ದಿನ ಹೋದವು ವೃಥ ನೋಡಿ ॥ ದುರ್ಧನದಾಶೀಲಿ ಬಾಡಿ। ದುರ್ಜನರಾರಾಧನೆ ಮಾಡಿ ॥ ಈ ತನು ಚಪಲತೆ ಹೋಗಾಡದೆ ಶ್ರೀಹರಿ ಗುಣ ಕುಣಿದು ಕೊಂಡಾಡಿ ಮನುಜ ॥ ೧ ॥ ತುಂಬಿದ ಶಿರಿ ಬಿಡಿಸೀ ಸೆರೆ ಒಯಿವರು ಅವ। ಲಂಬಿಸದೆ ಜವನವರೂ ॥ ಕೃಪೆಯೆಂಬುದು ಅರಿಯರು ಅವರು। ಹಲಪ್ಟಂಬಲ ರೊದವಾರು॥ ಸುಡು ನಂಬಲಿ ಬಾರದು ಸಂತೆಯವರ। ಅಂಬುಜನಾಭನ ಸಾರು ಮನುಜ ॥ ೨ ॥ ಸಕಳಾಗಮ ವೇದೋಕ್ತಿ ವಿಚಾ- ರಕೆ। ಮುಖವೆನಿಸುವದಾಚಾರ ॥ ಆ ಸುಖವೇ ಧರ್ಮದ ಸಾರಾ। ಅಖಿಳಕೆ ಪ್ರಭು ಯದುವೀರಾ ॥ ಭಕತ ವತ್ಸಲ ಪ್ರಸನ್ವೆಂಕಟ ರಾಯನಾ। ಸಖ ವಿಡಿದರೆ ಭವದೂರ ಮನುಜ ॥ ೩ ॥

೮೬

ರಾಗ—ದೇಶಿ ತಾಳ—ಝಂಪಿ

ದಾಟುವೆನೆಂದರೆ ದಾಟು ಹೊಳೆಯು। ಕೈಟಭಾಂತಕ ಘಟರಾಗೆ ಭವ ಜಲವ ॥ ಪಲ್ಲ ॥ ಪೂರ್ವಯಾಮದಿ ಹರಿಗುಣ ಕರ್ಮನಾಮ। ನಿರ್ವಚನದಿ ಕೀರ್ತನೆ ಮಾಡುವ ಮಹಿಮ ॥ ಉರ್ವಿಯ ಮೇಲಿದ್ದು ಒಲಿಸಿಕೊಂಡವ ಸುರ। ಸಾರ್ವಭೌಮನ ಸೀತಾರಾಮ ನಮ್ಮಮ್ಮಾ ॥ ೧ ॥ ಜಲದಲಿ ಮೀದೋರ್ಧ್ವ ತಿಲಕವಿಟ್ಟು ನಲಿದು। ತುಲಸಿ ಕುಸುಮ ಗಂಧ ಅಗ್ರದ ಜಲದಿ ॥ ನಳಿನೇಶ-

ನಂಘ್ರಿಗರ್ಪಿಸಿ ಸಹಸ್ರ ಶ್ರೀನಾಮಾ | ವಳಿಯಿಂದಾ ಧೂಪ ದೀಪಾರತಿ ಬೆಳಗಿ || ೨ || ಪರಮಾನುಯಾಗಾಹ್ವನಿ ವಿಸರ್ಜನೆಯು | ಸ್ಮರಣೆ ವಂದನೆ ಪ್ರದಕ್ಷಿಣೆಯು ನರ್ತನೆಯು || ವರಗೀತಾ ಪಠಣೆ ಭಾಗವತದ ಶ್ರವಣ | ತ್ವರೆಯಲ್ಲಿ ಭೂತಕೃಪೆಯಲ್ಲಿ ಮನವು || ೩ || ಗುರುಪಾದಪದ್ಮದಲ್ಲಿ ಬಲಿದು ವಿಶ್ವಾಸ | ಗುರುಕೃಪೆ ಇಲ್ಲದ ಪುಣ್ಯ ನಿಶ್ಶೇಷಾ || ಗುರು ಬೆನ್ನಟ್ಟಿದ ಕರಿಗಡ್ಡಾ ಹಾಸ ಹಾಸಾ | ಗುರುಗಳ ಮರೆದಕತಿ ನೊಂದಿದ ಶ್ವಾಸಾ || ೪ || ಈ ಪರಿ ಹರಿಪದ ದಾರಿಯ ತೊಲಗಿ | ಕಾಪುರುಷರು ಭವಮಡುವಿಲಿ ಮುಳುಗಿ || ಆಪತ್ತು ಪಡುವರ ನೋಡಿ ಬೆರಗಾಗೀ | ಶ್ರೀ ಪ್ರಸನ್ನವೆಂಕಟಪತಿ ನಕ್ಕನಾಗೀ || ೫ ||

೮೭

ರಾಗ--ರೇಗುಪ್ತಿ ತಾಳ--ರೂಪಕ

ನಗಲಿಬಹುದು ನಗಲಿಬಹುದು ನಗು ನಗು ರಂಗಯ್ಯಾ | ಜಗದ ಮಾತು ಅಘದ ಧಾತು, ಬಗೆಯನರಿತು ಮುಗುಳುನಗೆಯ || ಪಲ್ಲ || ಒರೆದು ಒರೆದು ಭಾರತದರ್ಥವ ಅರಿದು | ಅರಿದು ವರ ಭಾಗವತ | ಪರಿಯ ಪರಿಯ ಪುರಾಣ ಶ್ರುತಿಯ | ಪಾರಾಯಣ ಮಾಡಿ ಕುರುಡ ಬಧಿರ || ನರರ ತೆರದಿ ಅರಹು ಮರಹು | ಬೆರತು ಬೆರತು ತರತಮಿಲ್ಲದೆ | ಹರಿಹರಜರು ಬ್ಯಾರೆ ಬ್ಯಾರಿಲ್ಲೆಂಬ | ಪರಮ ಪಾತಕರಿರವ ನೋಡಿ || ೧ || ಮಕ್ಕಳ ಮಡದಿ, ಅಕ್ಕರಬಡಿಸಿ | ರೊಕ್ಕದ ಮದದಿ ಸೊಕ್ಕಿ ಸಜ್ಜನರ | ಲೆಕ್ಕಿಸದವಗೆ ರಕ್ಕಸರಂತೆ | ನಿಕ್ಕರ ನುಡಿದು ಕಕ್ಕಸದಿಂದ || ಪುಕ್ಕಟೆ ಪುಣ್ಯದ ಲೆಖ್ಖವ ಕಳೆದು | ಘಕ್ಕನೆ ಜವನೊರಿಕ್ಕಿದ ಬಲಿಗೆ | ಸಿಕ್ಕಿ ಬಳಲುತ ನಕ್ಕವನುಂಬಂಥ | ಮೂರ್ಖರ ತಾಮಸ ಮುಖ್ಯರ ನೋಡೀಗ || ೨ || ಸುಂದೋಪಸುಂದ ಜಲಂಧರ ಕೀಚಕ | ಕಂಧರ ದಶಕ ಸೈಂಧವ ಜಟಾದ್ಯ | ರಂದು ಪರಸ್ತ್ರೀಯ ಸೌಂದರ್ಯಕೆ ಮತಿ | ಗುಂದಿ ಲಯವಾದರೆಂದು ಕೇಳಿ || ಇಂದುಮುಖಿಯರ ಛಂದಕ್ಕೆ ಹುಚ್ಚಿಟ್ಟು | ಕಂದರ್ಪ ವಿಶಿಖವೃಂದ ವಶಾಗಿ ನೂ | ರೊಂದು ಕುಲ ಯಮ ಮಂದೀರ ಹೊಂದಿಪ | ಮಂದ ಮಹಾಮದೋನ್ಮತ್ತರ ನೋಡೀಗ || ೩ || ಸುರರ ಸಂಪದ ಪರಮ ಪದಕೆ | ಕಾರಣವಾಗಿರೆ ಸುರೇತರೆಲ್ಲರೂ |

ಇರುಳೆ ಹಗಲೆ ಸೈರಿಸಲಾರದೆ। ಸೊರಗಿಹೋದ ವಿವರ ಕೇಳಿ || ದುರುಳ ಕೌರವ ಮಹಾಪಾಂಡವರ | ಶಿರಿಯು ತಮ್ಮದೆಂದ್ಹರಿದು ಹೋಗಿರೆ | ಪರರ ದ್ರವ್ಯಕ್ಕೆ ಮರುಗಿ ಬಯಸಿ | ನರರು ಕಿಡುವ ಪರಿಯು ನೋಡೀಗ || ೪ || ಪ್ರತಿದಿನ ನಿನ್ನ ಪ್ರತಿಮೆ ಪೂಜೆ ಸದ್ | ವ್ರತವ ಮಾಡಿ ಸತ್ಕಥೆಯಾ ಶ್ರೀಮಧ್ವ | ಮತ ಮಹಿಮೆಯನತಿಕ್ರಮಿಸಿ ಕು | ಚ್ಛಿತವೆನಿಸುವ ಪಥದಲಿ || ಪತಿತರಾಗಿ ಸದ್ಗತಿಯ ಕಾಣದಾ| ಚತುರ ಬರಿಯು ಮಿತ ಭಾಷಕರ| ಸ್ಥಿತಿಯರಿತು ನಾಥ ಪ್ರಸನ್ವೆಂಕಟ | ಪತಿಯೇ ನೀ ಮಂದಸ್ಮಿತದಲೀಗ || ೫ ||

೮೮

**ರಾಗ--ವರಾಳಿ** **ತಾಳ--ಆದಿ**

ಮಾಡು ಸಾಧು ಸೇವೆಯ ಅನುದಿನ | ಬೇಡು ಹರಿಗೆ ಅಭಯ || ಕೂಡು ಸಂತರಾ ನೀ ನಿರಂತರಾ } || ಪಲ್ಲ || ಸಂತರೊಳು ಕೃತಕಾಗೆ ಕ | ಲ್ಪಾಂತರಕೂ ನರ್ಕ ಭೋಗ। ಸಂತರೊಳು ಉಗ್ರ ಮನಸು ಆ। ದ್ಯಂತ ಪಾಪದ ಬೆಳಸು। ಸಂತರಾಕೂಡ ದುಶ್ಚಿತ್ತಾ ದೇ। ಹಾಂತ ನಿನಗೆ ಪ್ರಾಯ-ಶ್ಚಿತ್ತಾ। ಸಂತರಾಧೀನನಾದರೆ ಹರಿ ತಾನು। ಸಂತೋಷದಿಂದಾ ಬೇಗ ಒಲಿವನು || ೧ || ತೀರ್ಥದಿ ಸ್ನಾನವು ಹಲವು ಕಾ। ಲೋತ್ತರಕಾಗ್ವದ್ಯು ಫಲವು। ಮೂರ್ತಿಗಳೌಪಾಸನವು ಧ। ರ್ಮಾರ್ಥ ಮುಂದಣ ಅನುವು। ಅರ್ಥಗಳ ವಿತರಣವು ಶೂ। ನ್ಯಾರ್ಥ ಸಮಯಕೆ ದಣಿವು || ಸಾರ್ಥಕವು ಸಧ್ಯ ಸಾಧು ನಿಕರದ | ಗಾತ್ರ ಕ್ಷೇತ್ರದ ಯಾತ್ರೆಯ ಬಿಡದೆ || ೨ || ಸಾಧು ಸಂಗವಗಿಲ್ಲ, ಮುಕ್ತಿ। ಹಾದಿ ಅವಗೆ ತೋರ್ವದಿಲ್ಲಾ | ಸಾಧುರಾದಾವ ಹಳು-ವಾತು। ಮುಸುಕೈದುವದು ಅವನ ಕುಲವು || ಸಾಧು ಕೃಪೆ ದಾವಗುಂಟು ಎಲ್ಲಿ। ಗ್ಹೋದರಾನಂದದ ಗಂಟು || ಸಾಧುಪ್ರಿಯ ಪ್ರಸನ್ನವೆಂಕಟರಮಣನು | ಸಾಧುಗಳಿಗೆ ಮೆಚ್ಚಿದವರಿಗೆ ಮೆಚ್ಚುವನು || ೩ ||

೮೯

**ರಾಗ--ಪಾಡಿ** **ತಾಳ--ಅಟ**

ಹೋಯಿತೆಲ್ಲಾಯುಷ್ಯಾ ಹೋಯಿತೆಲ್ಲ || ಆಯಾಸ ಬಟ್ಟೇ ಭವದಿ | ಶ್ರೀಯರಸನ್ನ ನಂಬದೆ || ಪಲ್ಲ || ಪಶ್ಚಿಮಾ ಜಾಗರದಿ ಕಾ | ಕುತ್ಸನ

ಪ್ರೀತಿಗೆ | ದುಶ್ಚಿತ್ತ ವೃತ್ತಿನೀಗಿ ನಿಶ್ಚಿತನಾಗೀ || ಸಚ್ಚಿದಾನಂದನಾ ಆಶ್ಚರ್ಯಕರ ನಾಮುವ | ಉಚ್ಚರೀಸದೆ ನಿದ್ರೆ| ಮೆಚ್ಚಿ ಘುರಿಘುರಿಸುತಾ || ೧ || ತುಲಸೀ ಮಂಜಿರ ಪುಷ್ಪ | ಅಲಸಾದೆ ತಂದು ಶ್ರೀ | ನಳಿನ ನೇತ್ರನ ನಾಮಾವಳಿ ಗಳಿಂದಾ || ಸಲೆ ಅವನಂಘ್ರಿ ಕಮಲವನರ್ಚಿಸದೆ ಸದಾ| ಲಲನೆ ಸಂಪದಾಬ್ಧಿಯಲಿ | ಮುಳುಗಿದ್ಯಹೋರಾತ್ರಿಯಲ್ಲಿ || ೨ || ಸತತ ಶಕ್ತ್ಯಾನುಸಾರ ವ್ರತಧರ್ಮಾಚರಿಸದೆ| ಪತಿತರೊಳಗೇ ಸೇರಿ ಮತಿಕೆಟ್ಟು ಬಾಳಿದೆ || ಅತಿಸ್ನೇಹ ಬಳಸುತ | ಹಿತಬಿಟ್ಟೆ ವೃಥಾ ಕೆಟ್ಟೆ| ಗತಿಗಾಣಿಸೆನ್ನಾ ಶ್ರೀ| ಪತಿ ಪ್ರಸನ್ವೇಂಕಟ || ೩ ||

೯೦

## ಸಜ್ಜನರ ಸಂಗದ ಪದಗಳು

**ರಾಗ--ಸಾವೇರಿ** **ತಾಳ--ಝುಂಪಾ**

ಎಂದಿಗ್ಹರಿ ಭಟರು-ಕೆಡರೂ || ಇವರಿಗೆ ಮು| ತೆಂದಿಗಿಲ್ಲೆಡರು, ತೊಡರು || ಪಲ್ಲ || ಘಟಜನೋಕ್ತಿಯಲಿ ಕರಿ | ಘಟ್ಟಿಕೂಗಿ ಪ್ರಾಣಸಂ || ಕಟ ಬಡಲು ನಕ್ರನ | ತುಟಿ ಹರಿದು ಗಜ ಪೊರದ || ೧ || ಮುನಿ ಕನಲಿ ಅಂಬರೀಷನ ದಣಿಸುತಿರೆ ಚಕ್ರ || ವನು ಕಳುಹಿ ವೈಷ್ಣವನ | ಛಲವನ್ನು ಗೆಲಿಸಿದ || ೨ || ಎಣೆಯಿಲ್ಲದ ಪಾಪ | ಎಣಿಸಿ ಬರೆ ಯಮನವರ || ಹಣಿದು ವಿಪ್ರಾಜಮಿಳನ | ವನಜಾಕ್ಷ ಪುರಕೊಯ್ದ || ೩ || ಕಪಟಿ ಕೌರವ ಪಾಂಡು| ನೃಪರ ರಾಜ್ಯವ ಕೊಳಲು || ಕುಪಿತನಾಗಲೆ ಬಂದು | ಕೃಪೆಯಿಂದ ಕಾಯ್ದ ಗಡ || ೪ || ಶ್ರೀಪ್ರಸನ್ವೆಂಕಟನ | ಶ್ರೀಪದವ ನೆನೆದರೆ | ಪಾಪಶಾಪಗಳು ಸಂ | ತಾಪೇನು ಮಾಡುವವೂ || ೫ ||

೯೧

**ರಾಗ--ಸೂರಟ** **ತಾಳ--ಏಕ್ಕ**

ಏನು ಗತಿಯೊ ಮುಂದೆನಗೆ ಗೋವಿಂದ| ಶ್ರೀನಿವಾಸ ರಕ್ಷಿಸದಿರೆ ದಯದಿಂದ || ಪಲ್ಲ || ನಿಶಿದಿನ ಹಸು ತೃಷಿ ಸುಡುವ ಕುಮುರಿಯು ||

ಮಸಿವರ್ಣಮಾಡಿ ಕೇರಿಡಿವ ಮೂರುರಿಯೂ ‖ ೧ ‖ ನಾಚಿಕಿಲ್ಲದ ವಿಷಯೊಸೆಯಸಹ್ಯ ‖ ನೀಚ ದುರುಕ್ತಿಯಾಸ್ತ್ರದ ಘನಘಾಯ ‖ ೨ ‖ ಮಾಯಾದ ಕಡಲೊಳು, ಕಟ್ಟೀಹ ಕೊರಳು ‖ ಆಯಾಸ ಬಡುತ ಬಡುತ ಬಿದ್ದಿತುರಲು ‖ ೩ ‖ ಎಳ್ಳನಿತು ಜ್ಞಾನ, ಅಹಂಕಾರ ಬಹಳ ‖ ಘಲ್ಲನೆ ತಗಲುವ ಜ್ಞಾನದ ಶೂಲ ‖ ೪ ‖ ಮರಹು ಮದಗಳೆಂಬ ಮುಸುಕೀದ ಮೆಳೆಯು । ಪರದಾರ ಪರನಿಂದಾದಗ್ನಿಯ ಮಳೆಯು ‖ ೫ ‖ ಬೇಡಿದ ಬಯಕೆ ಸಾಧ್ಯಾಗದ ನೋವು । ಮೂಢತನದಿ ದಿನ ನೂಕುವ ಸಾವು ‖ ೬ ‖ ಇನ್ನಾರೆ ಸಜ್ಜನ ಸಂಗಕೌಷಧ ‖ ಮುನ್ನ ಕೊಡಿಸೊ ಪ್ರಸನ್ವೆಂಕಟ ಮುಕುಂದ ‖ ೭ ‖

೯೨

ರಾಗ--ದೇಶಿ ತಾಳ--ಅಟ್ಟ

ಕೃಪಣದಿ ಧನ್ಯರು ಎಂದೀಗೆ, ಸುಖಿ । ಕೃಪಣಾರವರುಪಕಾರಿಗಳೊ । ನಿನ್ನ ವಾರಣರು ಕೃಷ್ಣಯ್ಯಾ ‖ ಪಲ್ಲ ‖ ಸಂಚಿತಾದಿ ಹೊನ್ನು ಬಂಡವಲ ಹೋಗಾಡಿ । ಕಂಚುಕಾಂಚನವಾಗೆ ನಿನ್ನವರು ‖ ಕಿಂಚಿತ್ತು ವ್ರಯವಿಲ್ಲ ನಿಕ್ಷೇಪಾಕ್ಷೆಯ ‖ ಸಂಚಕಾರವ ಕೊಟ್ಟಾರಿಲ್ಲಾ ಮಂದಿರಕೆ ‖ ೧ ‖ ಅಂಗಾನೆ ತನುಭಾವ ರಂಗಾದೆ ಮುಂಗೂಡೆ । ಹಿಂಗಿ ನಿರ್ವಾಣದಿ ನಿನ್ನವರೂ ‖ ಜಂಗುಳಿ ಧನಧಾನ್ಯ ಮಣಿಯಂತೆ ಬಚ್ಚಿಟ್ಟು । ಸಂಗಾತಿಯವರು ಸಂಸಾರ ಕಟ್ಟಿದರು ‖ ೨ ‖ ಮನ್ನಣೆ ನೀಗಿ ಪಾತ್ರೆ ಹುಟ್ಟುವಾರುತ । ಸಣ್ಣಾರ ಕೂಲವಿಟ್ಟರು ನಿನ್ನವರು ‖ ಬಣ್ಣಬಣ್ಣಗೆ ಉಟ್ಟು ಬಳಗ ಸಹಿತ ಭವ । ನುಣ್ಣಿತ ನಿನ್ನ ಮಗನ ಉದ್ಯಮದವರೂ ‖ ೩ ‖ ಹಿಂದೆ ಮುಂದಿಲ್ಲದೆ ಭಿನ್ನಭಿನ್ನಾತ್ಮರು । ನಿಂದ್ಯಾ ಸ್ತ್ರಾಕಳಕುವ ನಿನ್ನವರು ‖ ಬಂಧು ಬಲ್ಲಿದರು ಭಾಗ್ಯಾನ್ವಿತ ಚಪಲರೂ । ಎಂದೆಂದಜರು ಮದಮತ್ತ ಮಾನಿಸರು ‖ ೪ ‖ ಚನ್ನೀಗರಲ್ಲಾ ಚಲುವರಲ್ಲಾ ಜಗವ ಪಾ । ವನ್ನಮಾಡುವರು ನಿನ್ನವರು ಪ್ರ । ಸನ್ವೆಂಕಟಪತಿ ನಿನ್ನಾ ಮದ್ದಾನೆಗಳು । ಕುನ್ನಿಗೂಗಿಗೆ ಕಡೆಗಾಹವೆ ಕೃಷ್ಣಾ ‖ ೫ ‖

೯೩

ರಾಗ--ಕಾಂಬೋದಿ ತಾಳ--ಝಂಪಾ

ಸತತ ಕಲ್ಯಾಣ ಅಚ್ಯುತ ಭಟರಿಗೆ || ರತಿ ಪತಿ ಪಿತನಂಘ್ರಿರತ ಮಹಾತ್ಮರಿಗೆ || ಪಲ್ಲ || ಆದಿ ವ್ಯಾಧಿಗಳಿಲ್ಲ, ಅಶುಭ ವಾರ್ತೆಗಳಿಲ್ಲ | ಕ್ರೋಧ ನೃಪಭಯವಿಲ್ಲ, ಕಾಕುಮತಿಯಿಲ್ಲ || ಖೇದವೋದಗಳಿಲ್ಲ ಖಿನ್ನತೆಯು ಮುಖಕಿಲ್ಲ | ಶ್ರೀಧವನ ನವಭಕುತಿ ಶೀಲ ಜೀವರಿಗೆ || ೧ || ಅರಿಗಳೀ ಸಖರಕ್ಕು, ಅತಿ ವಿಷವಮೃತವಕ್ಕು | ಉರಗ ಪೂಮಾಲ್ಯಕ್ಕು ಉರಿತಂಣಗಕ್ಕು|| ಶರಧಿ ಗೋಷ್ಪದವಕ್ಕು ಶರಘಾತ ಬೆಂಡಕ್ಕು | ನರಹರಿಯ ನಾಮವನು ನಂಬಿ ತುತಿಪರಿಗೆ || ೨ || ಪಾಪತಾಪಗಳಿಗೋಟ, ಪಿರಿದು ಬಹ ಎಡಗೋಟ | ಆಪತ್ತುಗಳಿಗೋಟ ಆಲಸ್ಯಕೋಟ || ಕೋಪದಾರಿದ್ರ್ಯಕೋಟ, ಕಲಿವ್ಯಸನ ಮದಕೋಟ | ಶ್ರೀಪ್ರಸನ್ವೆಂಕಟನ, ಭಜಿಪ ಭಕ್ತರಿಗೆ || ೩ ||

೯೪

ರಾಗ--ಬಾಗೇಶ್ರೀ ತಾಳ--ರೂಪಕ

ಸಂಗವಾಗಲಿ, ಸಾಧು | ಸಂಗವಾಗಲಿ || ಸಂಗದಿಂದ ಲಿಂಗದೇಹ ಭಂಗವಾಗಲಿ || ಪಲ್ಲ || ಅಚ್ಯುತಾಂಘ್ರಿನಿಷ್ಠರಾ ಯ | ದೃಚ್ಛಾಲಾಭ ತುಷ್ಟರಾದ || ನಿಚ್ಚ ಜ್ಞಾನವಂತರಾದ | ಅಚ್ಚ ಭಾಗವತರ || ೧ || ತಂತ್ರಸಾರ ಅಷ್ಟಮಹಾ | ಮಂತ್ರ ಪರಿಪೂರ್ಣ ಸ್ನೇಹ || ಯಂತ್ರದಿಂದ ಮೂಜಗತ್ ಸ್ವ | ತಂತ್ರನ ಗುರಿಮಾಡುವರ || ೨ || ಪಂಚ ಸಂಸ್ಕಾರ ಭೇದ | ಪಂಚಯುಕ್ತರಾಗಿ ಪ್ರ || ಪಂಚ ಸೂರಿ ಪ್ರಸನ್ವೆಂಕಟ | ಪಂಚ ಬಾಣನೈಯ್ಯನವರ || ೩ ||

೯೫

ರಾಗ--ಶಂಕರಾಭರಣ ತಾಳ--ಅಟ್ಟ

ಸಂತರವರೆ ನೋಡಿರೈ | ಕೈವಲ್ಯದ || ಸಂತರವರೆ ನೋಡಿರೈ || ಪಲ್ಲ || ಸತ್ಯ ರಮೇಶ ಸೃಷ್ಟಿಯು ಸತ್ಯ | ಹತ್ತೆರಡೈದು ತತ್ವವು ಸತ್ಯ || ಸತ್ಯಾತ್ಮೇಶ

ಭೇದವು ಸತ್ಯ । ಸತ್ಯಾತ್ಮಕನಾ ಪದ ಸತ್ಯೆನುವ ‖ ೧ ‖ ಹರಿಭಕ್ತರ ಕಂಡಪ್ಪುವರು ನಿರುತ । ಹರಿಸಲ್ಲಾಪ ಕಥಾಶ್ರವಣ ಬಲಿದು ‖ ಹರಿಭೃತ್ಯರಿಗ ನ್ನೋದಕ ನೀವರು । ಹರಿಸಂಕೀರ್ತನೆ ಮನೆಮನೆಯುವರು ‖ ೨ ‖ ಆನಂದಕೆ ಕವಲಿಲ್ಲದ ಸುಖ ದುಃ । ಖಾನಂದವನನುಭವಿಸಿ ಬಿಡುವರು ‖ ಆನಂದ ಮುನಿಯ ಮತ ಪ್ರೀಯರು ನಿತ್ಯ । ಆನಂದ ಪ್ರಸನ್ವೆಂಕಟ ಪತಿಯುವರು ‖೩‖

೯೬

ರಾಗ—ಶಂಕರಾಭರಣ ತಾಳ—ಅಟ್ಟ

ಸಂತಾರೆ ಭವದೂರರು। ಹಿತಕಾಯರು ‖ ಪಲ್ಲ ‖ ಸಂತರ ಸೇವೆ ಶ್ರೀಹರಿ ಸೇವೆ । ಸಂತರ ಮತವೆ ಹರಿ ಸಮ್ಮತವು ‖ ಸಂತರ ಮತಿಯೇ ಮುಕುತಿಯ ಗತಿಯು । ಸಂತರ ಪಾದಾ ಚಿಂತನಿಗಾಲ್ಹಾದಾ ‖ ೧ ‖ ಸಂತರ ಗಾತ್ರ ಭುವನ ಪವಿತ್ರ । ಸಂತರ ನೋಟಾ, ಪಾಪಗಳೋಟ ‖ ಸಂತರ ವಚನ ಧರ್ಮವಿರಚನ । ಸಂತರ ಸಂಗ ತೋಷತರಂಗ ‖ ೨ ‖ ಸಂತರಿಂದಹಿ- ಕಾಮುಷ್ಮಿಕ ಸೌಖ್ಯ । ಸಂತರ ಅಭಯಾ ವಿರತಾವ ಭಯಾ ‖ ಸಂತರ ಕಂಡವ ಸುಖವನುಂಡವ। ಸಂತ ವಿಯೋಗ ತಮಸಿನ ಭೋಗ ‖ ೩ ‖ ಸಂತರ ಭೇದ, ವಂಶ ವಿಚ್ಛೇದಾ। ಸಂತರ ಪ್ರೀತಿ, ಶುಭಪದ ಪ್ರಾಪ್ತಿ ‖ ಸಂತರ ವಾರ್ತೆ, ಖಿಳ ಪುರುಷಾರ್ಥ। ಸಂತರ ಮಹಿಮ, ಹೊಗಳ್ವತಿ ಪ್ರೇಮ ‖ ೪ ‖ ಸಂತರ ಊರು ಎನ್ನ ತವರೂರು। ಸಂತರ ಗತಿ ಗೋತ್ರರು ಎನಗಾಗಿ‖ ಸಂತರ ಪದವನೊಪ್ಪಿದರೊಲಿವ । ಸಂತರಿಗರಸಾ ಪ್ರಸನ್ವೆಂಕಟೇಶಾ ‖ ೫ ‖

೯೭

ರಾಗ—ಶಂಕರಾಭರಣ ತಾಳ—ಆದಿ

ಹಾ ಹಾ ಸಾಧು ಜನರು ಮೆಚ್ಚದನಕ ‖ ಹರಿ ಗುರುವೂ ಮೆಚ್ಚ ‖ಪಲ್ಲ‖ ನನ್ನ ಗುಣಕೆ ನಾ ಮೆಚ್ಚಿದೆ ಬರಿದೆ। ಪುಣ್ಯವಂತನೆಂದನ್ಯರ ಜರಿದೆ ‖ ಉನ್ನತ ಸೂಕ್ಷ್ಮ ಸುಧರ್ಮವ ತೊರದೆ। ನನ್ನೊಳು ನಾ ವೃಥಾ ಹಿಗ್ಗಿ ಬಹು ಮೆರದೆ ‖ ೧ ‖ ಜನದೊಳು ದಣಿಯದೆ ಜ್ಞಾನವನೊರೆದೆ । ಘನ ವೈರಾಗ್ಯಕೆ ಹಿಂದಕೆ ಸರಿದೆ ‖ ತನು ಮನ ಕದ್ದು ಭಕುತಿಯೋಳಿದ್ದೆ । ಹೆಣಗಾಡುತ ಭಾಗವತ-

ನೆನಿಸಿದ್ದೆ ॥ ೨ ॥ ಸಂತರು ಒಪ್ಪಿದ ಜ್ಞಾನವಸಂತ । ಸಂತರಿಗಾಗದ ವಿರಕುತಿಯು ಭ್ರಾಂತ ॥ ಸಂತರ ಕೂಡಿದ ಭಕುತಿಯೇ ಮುಕುತಿ । ಸಂತರ ಪ್ರಿಯ ಪ್ರಸನ್ವೆಂಕಟನುಕುತಿ ॥ ೯೮ ॥

೯೮

## ಆರ್ತಭಾವದ ಪದಗಳು

ರಾಗ--ಕೇದಾರ ತಾಳ--ಝಂಪಾ

ಕರುಣಿಸಿನ್ನಾದರೆ ರಂಗಾ ಸುರಾರಿ ಭಂಗಾ। ಕರುಣಿಸಿನ್ನಾದರೆ ರಂಗಾ ॥ ಪಲ್ಲ ॥ ಹುಳ ಹಕ್ಕಿ ನಾಯಿ ನರಿ ಗಿಡ ಹುಲ್ಲು ಮುಳ್ಳು । ಗಳ ಜನ್ಮನಾಂತು ನಾ ಬಳಲೀದೆ ರಂಗಾ ॥ ನೆಲೆಗಾಣೆನಿನ್ನ ಮಾನಸನಾಗಿ ವ್ಯಥನಾದೆ। ಗುಳದ ಹಣ್ಣಿಗೆ ಸೊರಗಲ್ಯಾಕೊ ರಂಗಾ ॥ ೧ ॥ ತುದಿ ಮೊದಲಿಗೆ ಮದ ಮತ್ಸರವೆಂಬೆ । ಗುದಿಗೊಂಡು ನಿನ್ನಂಘ್ರಿ ಮರೆದೆನೋ ರಂಗಾ ॥ ಪದುಮನಾಭನೆ ನನ್ನ ಹೊರೆಯಲರಿಯ ಹುಲ್ಲೆ । ವದನಕೆ ಮೊಳಗದ ವಾಣ್ಯಾಕೊ ರಂಗಾ ॥ ೨ ॥ ಮಲತವನಾದರೊದಿಯೋ ನಿನ್ನಾ ಗಣದೊಳು । ತೊಳಲುವ ನಾಯಿಗೆ ಕ್ಲೇಶವು ಸಲ್ಲಾ ರಂಗಾ ॥ ಹಲವು ದುಷ್ಕೃತ ನಿನ್ನ ನಾಮ ಘೋಷಣೆಯಲ್ಲಿ । ನಿಲಬಲ್ಲವೇ ಪ್ರಸನ್ವೆಂಕಟ ರಂಗಾ ॥ ೩ ॥

೯೯

ರಾಗ--ಕೇದಾರ, ಧನಾಶ್ರೀ ತಾಳ--ಆದಿ

ನನಗೆ ಮನಕೆ ಬಡಿದಾಟಿಳೆದಾಟಾ । ಶ್ರೀ । ಸನಕಾದಿ ವಂದ್ಯ ಬಿಡಿಸಿ ಕಾಯೋ ದಿಟ ॥ ಪಲ್ಲ ॥ ಸಲಿಲ ಸ್ನಾನವ ಮಾಡಿ ಊರ್ಧ್ವ ತಿಲಕವನಿಟ್ಟು । ನಳಿನಾಕ್ಷ ನಿನ್ನಂಘ್ರಿ ಜಪಿಸೆಂದರೆ ॥ ಛಲದಿಂದೆ ವಿಹಿತವಲ್ಲದ ದಾರಿಗೊಯ್ದೆನ್ನ । ತೊಳಲಿಸಿ ನೆಲೆಗಾಣಿಸದ ಛಲಾವಿಡಿದೀದೆ ॥ ೧ ॥ ಬೇಡಿಕೊಂಡರೆ ಕೇಳದಾಡಿಕೊಂಡರೂ ಕೇಳ । ದೀಡ್ಯಾಡಿ ಬಿಸುಟೆನ್ನ ದಣಿಸುತಿದೆ ॥ ಕಾಡಿ ನಾನಾಕ್ಲೇಶ ಮಾಡಿತೆಂಬುದಕೆ । ಬಾಡಿ ಬಳಲಿದೆ ನಿನ್ನ ಕರುಣಿಲ್ಲವಿದಕೆ ॥ ೨ ॥ ಮನ ಪಶು ಕಟ್ಟಲು ಜ್ಞಾನದ ದೃಢವಿಲ್ಲ । ಘನ ವೈರಾಗ್ಯದ ಕಟ್ಟು

ದೃಢವಿಲ್ಲವು । ಮಿನುಗುವ ಭಕುತೆಂಬ ಎಳೆ ಹುಲ್ಲಿನಾಶಿಲ್ಲ । ನಿನ್ನ ವಶಮಾಡಿ-ಕೊಳೋ ಪ್ರಸನ್ವೆಂಕಟೇಶಾ ॥ ೩ ॥

೧೦೦

ರಾಗ--ವರಾಳಿ ತಾಳ--ತ್ರಿಪುಟ

ನೋಡು ನೋಡು ದಯಮಾಡು ಮಾಡಿನ್ನ ॥ ಪಲ್ಲ ॥ ನೋಡು ವೈರಾಗ್ಯ ಭಾಗ್ಯವಿಹೀನನ್ನ॥ ಕಾಡುತಿದೆ ಮನ ಕರಣ ಸಂಪನ್ನ ॥ ಅ. ಪ. ॥ ಸ್ನಾನ ಸಂಧ್ಯಾವಂದನೆ ಸುಚ್ಛೈಲದಿ ಧ್ಯಾನ ಮೌನವ ಹಿಡಿಸೀ । ದಾನ ಧರ್ಮ ಕೈವಲ್ಯ ದಾರೆಂದು ನಿದಾನ ತುಷ್ಟೀಯ ಬಡಿಸೀ ॥ ತಾನರಕ್ಷಣ ಸ್ವಸ್ಥವಿರದೆಲ್ಲ ಕ್ರಿಯ । ಹೀನಗೈಸಿ ಕಷ್ಟ ಕೊಡಿಸಿ ॥ ನಾನಾವಿಷಯಕೆನ್ನಾಧೀನಗೈಸಿ ಬಹು । ಹಾನಿ ಮಾಡಿತೆನ್ನ ಚಿತ್ತವ ಕೆಡಿಸೀ ॥ ೧ ॥ ಸಾಲಂಕೃತ ಬಾಲನೊಯ್ದಡವಿಲಿ ಕೊಲ್ವ । ಆಲಯದ ಕಳ್ಳನಂತೆ ಬಾಲೆಯನ್ನಾಳದೆ ಷಂಢ ಘನಕೂಪದೋಳು ನೂಕಿಸುವಂತೆ । ಪೇಳಲೇನು ದುರ್ಬಲರನು ಅರಸು ತಾ ಶೂಲಕಿಕ್ಕಿಸುವಂತೆ ॥ ಮೇಲೆ ಮೇಲೆ ದುರ್ವಿಷಯಾಟವಿಯೊಳು । ಕಾಲ ಕಟ್ಟಿನ್ನ ಕೆಡಹುತ್ತಿದೆ ॥ ೨ ॥ ಕನ್ನಿಕೆಗೆ ವರನೊಪ್ಪಿದರೆ ತೊತ್ತಿ । ಗನುಕೂಲ ಪ್ರತಿಕೂಲವೇನು । ಪುಣ್ಯ-ಶ್ಲೋಕನ ಅಭಯವಿರಲು ಸುಖಗಳಿ । ಗನ್ಯ ತೊಡರು ಏಕಿನ್ನು । ತನ್ನಯ್ಯನ ಪಾದವಿಡದೀಹ ಮಡದೀ । ಗನ್ಯರಾತಂಕವೇನು ಪ್ರ ॥ ಸನ್ನ ವೆಂಕಟಸ್ವಾಮಿ ನೀ ಒಲಿದಾರೆ । ಕುನ್ನಿಮನ ಕಾಡಿ ಮಾಡುವದೇನೋ ॥ ೩ ॥

೧೦೧

ರಾಗ--ಧನಾಶ್ರೀ ತಾಳ--ತ್ರಿವಿಡಿ

ಬಂದೀದೆ ದುರಿತಾಘ ಸಂಗ ಶ್ರೀರಂಗಾ । ಮಂದಾ ಮತಿಯೆಂದು-ಪೇಕ್ಷಿಸದುಳುಹೋ ॥ ಪಲ್ಲ ॥ ಒಲ್ಲೆನೆಂದರೆ ಬಿಡದೀ ಮನ ತಿಳಿದತ್ತೀ । ಹೊಲ್ಲ ವೃತ್ತಿಯ ಸೇರಿ ಬಿಡಲೊಲ್ಲದೋ ॥ ಕಲ್ಲು ಕಟ್ಟಿದೆ ಪುಣ್ಯ ಮಾರ್ಗಕ್ಕೆ ಇದರೊಳು । ಫುಲ್ಲನಾಭನೆ ಆವತೆರದಿಂದ ಸಲಹೋ ॥ ೧ ॥ ಕೆಂಡವಕೊಂಡು ಮಂಡೆಯ ಬಾಚುತಿದೆ ಪರ । ಹೆಂಡರು ವಿತ್ತದಾಸೆಗೆ ತೊಡಕೀ ॥ ಕಂಡರೆ ಸಹಿಸದು ಭಕುತಿ ವೈರಾಗ್ಯವ । ಪುಂಡರೀಕಾಕ್ಷನೆ ಗತಿ ನೀನೇ ಬಲ್ಲೆ ॥ ೨ ॥

ಮೆಲ್ಲಮೆಲ್ಲನೆ ದುಷ್ಕರ್ಮ ಸಾಧಿಸಿ | ಬಲ್ಲಿದ ಜವನರ ಬರಮಾಡಿದೆ || ವಲ್ಲಭ ಪ್ರಸನ್ವೆಂಕಟಕೃಷ್ಣ ಮನದಿ | ನಿಲ್ಲಿಸು ನಾಮವ ನಾಲಿಗೆಯಲ್ಲಿ || ೩ ||

೧೦೨

ರಾಗ—ಬ ತಾಳ—ರೂಪಕ

ಬಾರನ್ಯಾತಕೆ ನೀರಜಾನನೇ || ಶ್ರೀ | ಮಾರಜನಕ ಸಕಳ ಸುಖಕೆ ಕಾರಣನು ತಾನೇ ಕರುಣಿಸಿ || ಪಲ್ಲ || ಭುವನೇಶನಿನಿಯಳಣುಗ, ತಾ ಪಿಡಿದು ಜರಿದ ಬಲಗೆ | ಹ್ಯಾವಿಲ್ಯಳಿದವನೊಳು ಕಾದಿ | ತಾವೊಲಿದ ದೊರೆಯ ನಮಿಸೀ | ಭಾವ ಕದಿದು ಇಷ್ಟ ಪಡದನ || ಜನನಿ ಸುತರ | ಜೀವರೆಡರು ಬರಲಿ ಕಳಿದನೇ, ರಂಧ್ರ ಮೊಳಲಿ || ದೇವ ಭಗಿನಿ ತುತಿಯ ಕೇಳ್ದನೇ | ಇಂದುವದನೇ || ೧ || ಹರಿಪದಸ್ಥರಿರಿಯನಿಂದ | ಹರುಷಮೋರದ ಪುರುಷ-ನುಗ್ರ | ಕರೆಯ ಮಯ್ಯು ಬರಲಿ ಕಳದ | ನರಹುನುಳ್ಳವನು ಭಯವಿಲೀ | ಉರಗೊಲಿಸಿ ಎಬಡ ಗಡ ವೆಂಣ್ಣಿನಾ ಪಡಲ ಪೊಡಿಯು | ಉರಿಯಲರಿದ ಶಿರಿಯವರದನೇ | ಬಹಳ ರುಚಿಯು | ಳ್ದರಿಯನಟ್ಟಿ ಜವದಿ ಕಾಯ್ದನೇ, ಕುಂದರದನೇ || ೨ || ಭೂರಮಣನ ಅಗ್ರಜಳ ಕಿಶೋರ ಬಾಣ ಪ್ರಿಯಜನಪ್ಪ | ತಾರನರಮುನೀಗೆ ಒಲಿದು | ವಿಷದ್ವಿಜನ್ನಧ್ವಜ ಕರೆದರೆ || ಬಾರದೇನೆ ಮೂಗ ಮುರಿದನೇ ತನ್ನ ನಂಬಿ | ಸಾರಿದವರ ಮನದೊಳಿರುವನೇ, ಪ್ರಸನ್ವೆಂಕಟ || ಧೀರನೊಬ್ಬ ಜಗಕೆ ಚಲುವನೇ | ಭಾಮಿನಿಯೇ || ೩ ||

೧೦೩

ರಾಗ—ರೇಗುಪ್ತಿ ತಾಳ—ಆದಿ

ರಂಗನ್ಯಾಕೆ ತಿರುಗಿ ಬಾರನೆ, ಅಂತ | ರಂಗ ಪೀಠದಿ ಮೊಗದೋ-ರನೆ || ಪಲ್ಲ || ಮಂಗಳಂಗನೊಳು ಮಾತಾಡದೆ ಸತಿ | ಕಂಗಳ ದಣಿಯಾದೆ ನೋಡೆ || ಅಂಗನೆ ಹ್ಯಾಗೆ ಜೀವಿಸಲೆಮ್ಮಾಯ | ನ್ನಿಂಗಿತ ವಾರಿಗುಸುರ ಲೆಮ್ಮಾ || ೧ || ಕಲ್ಲೆದೆಯಾದೆ ಇಸಿತು ದಿನಾ ಜೀವ | ಕೊಲ್ಲದು ಹೋಯೆಂಬರೋದನ || ಫುಲ್ಲನಾಭನ ಯಂಜಲುಂಡರೆ, ಕಷ್ಟ | ವಿಲ್ಲದ ಸುಖ ಕಣ್ಣು ಕಂಡರೆ || ೨ || ಕೃಷ್ಣನ ಶುಭಗುಣ ಹೊಗಳುತ ಬಹು | ಕಷ್ಟಾ

ನೀಗಿದೆ ನಕ್ಕು ತತ್ವತಃ ॥ ಸೃಷ್ಟೀಶ ಪ್ರಸನ್ವೆಂಕಟೇಶ ನೆನ। ವಪ್ಪುರೊಳಗೆ ಮಾಯವಾದನೆ ॥ ೩ ॥

೧೦೪

ರಾಗ—ಕಾಂಬೋಧಿ ತಾಳ—ಧ್ರುವ

ವಿಠಲಾ ಪಿಡಿ ಎನ್ನಕೈಯ್ಯಾ । ವಿಠಲ ಪಂಢರಿರಾಯಾ ॥ ವಿಠಲಾ ಭಕ್ತ ವತ್ಸಲ ವಿಠ್ಠಲಾಹರಿ ವಿಠ್ಠಲಾ ॥ ಪಲ್ಲ ॥ ಧಿಟ್ಟಾ ಪುಂಡಲೀಕ ತನ್ನಾ। ಪುಟ್ಟಿಸಿದವರ ಮನ ॥ ಮುಟ್ಟಿ ಭಜಿಸಲು ಚಿತ್ತ। ಗೊಟ್ಟು ಬಂದೆಯಾ ವಿಠ್ಠಲಾ ॥ ೧ ॥ ಕೊಟ್ಟಾ ಮಾತಿಗೆ ಭಕ್ತರ। ಕಟ್ಟನೊಳು ಶಿಲುಕಿ ಕಂ ॥ ಗೆಟ್ಟೆಯ ಭವಾಬ್ಧಿಲಿ ನಿನ್ನ। ಗುಟ್ಟು ತೋರಯ್ಯಾ ವಿಠ್ಠಲಾ ॥ ೨ ॥ ಬಿಟ್ಟು ಬರಲಾಗದ ನಿನಗೆ । ಥಟ್ಟನೆ ನೀಡಲು ಚಲುವ ॥ ಇಟ್ಟೆ । ಗೆ ಮೇಲೆ ಅಂಘ್ರಿ ಪದ್ಮ। ಇಟ್ಟು ನಿಂತೆಯಾ ವಿಠ್ಠಲಾ ॥ ೩ ॥ ನೆಟ್ಟನೆ ವೇದವ ತಂದು। ಬೆಟ್ಟವೆತ್ತಿ ಇಳಿಯಾ ಪೊತ್ತಿ ॥ ಸಿಟ್ಟು ತಾಳ್ದ ವಟುವೇ ಖಳರ। ಸಿಟ್ಟಲ್ಯಾಳ ದೆಯಾ ವಿಠ್ಠಲಾ ॥ ೪ ॥ ಕಟ್ಟಿ ಕಡೆಯಲಿ ಜಗ। ಜಟ್ಟೀ ಗೋಪನಾಗಿ ಬುದ್ಧಾ। ಧಿಟ್ಟ ಕಲ್ಕ್ಯಾವತಾರ ತಾಳಿ। ಕೃಷ್ಣ ಪ್ರಸನ್ವೆಂಕಟ ವಿಠ್ಠಲ । ೫ ॥

೧೦೫

## ವೈರಾಗ್ಯ ಭಾವದ ಪದಗಳು

ರಾಗ—ವರಾಳಿ ತಾಳ—ಆದಿ

ಆಶಾವಿಡಿದು ಬಂದಿಹೆ। ದೇಶಿಗ ನಾನು ಅಭಿ॥ ಲಾಷೆ ಪೂರಿಸೆ ಮ್ಮಯ್ಯಾ। ಶೇಷಗಿರಿಯ ತಿಮ್ಮಯ್ಯಾ ॥ ಪಲ್ಲ ॥ ಘೋರ ಭವಾರಣ್ಯದಲ್ಲಿ। ದಾರಾಪತ್ಯ ಭಜನರೆಂಬಾ। ಕ್ರೂರ ಮೃಗಾಸಿಗೆ ಸಿಲಿಕಿ ದಾರಿವರಿಯೆ ॥ ನಾರಸಿಂಹ ನಿನ್ನವರು ತೋರಿದರು ಶ್ರೀಮಂಗಳ। ಮೂರುತಿಯ ಕಂಡು ಸುಖ। ಸಾರಾಮೃತ ನುಣ್ಣಲಾಗಿ ॥ ೧ ॥ ಒಡಲಿಗೋಸುಗ ವೃತ್ತಿ ಹಿಡಿದು। ತಡವರಿಸುತ। ಕಡೆಗಾಣದೊರಲಿ ಅಂಜ್ಯೋಡುತಿರಲು ॥ ಒಡೆಯಾ ನಿನ್ನಯ ಸಿರಿ । ಸಡಗರ ನಾಮ ಕೇಳಿ। ಹುಡುಕೂತ ನಲಿವಿಂದ ಬಡತನ ಹಿಂಗಲೆಂದು ॥ ೨ ॥ ಈಗಿದೇ ವೈಕುಂಠವೆಂದು ! ಭೋಗಿ - ವಾಸುದೇವನೆಂದು । ಬಾಗಿ

ಶ್ರುತಿ ಸ್ಮೃತಿಗಳು ಕೂಗುತಲಿವೆ ॥ ಯೋಗಿ ಪ್ರಸನ್ವೆಂಕಟ। ಭಾಗವತರ ಪ್ರೀಯನೆಂದು। ಹೀಗೆ ಘನಘೋಷಿಡುತ ನಾ। ನೀಗುವೆ ಚಿಂತೆಯ ನೆಂದು ॥ ೩ ॥

೧೦೬

ರಾಗ—ಭೈರವಿ ತಾಳ—ಅಟ್ಟ

ಕಾಯೋ ಗೋವಿಂದಾ। ಕಾಯೋ ಮುಕುಂದಾ। ಮಾಯದ ತಡಿಯಾ। ತಪ್ಪಿಸೋ ನಿತ್ಯಾನಂದಾ ॥ ಪಲ್ಲ ॥ ನಾನಾಯೋನಿಯ ಸುತ್ತಿ। ನೆಲೆಗಾಣದಂತಾದೆ। ನೀನೊಲಿದಿಂದೀ ಜನ್ಮವ ಪಡದೇ ॥ ಜ್ಞಾನ ಹೊಂದ-ಲಿಲ್ಲಾ। ಧರ್ಮದಾಚರಣಿಲ್ಲಾ। ಏನು ಗತಿಯೋ ನನಗೆ ಮುಂದೆ ಶಿರಿಎಲ್ಲಾ ॥ ೧ ॥ ಮರ್ಕಟಗೆ ಹೊನ್ನ ಕೊಡ ದೊರೆದಂತಾಯಿತೋ। ಮೂರ್ಖ ವೃತ್ತಿಯಲ್ಲಿ ಆಯುಷ್ಯ ಹೋದಿತೋ ॥ ಸರ್ಕಸಾಧನ ಬಗೆ ಘನವಾಯಿತೋ ಪುಣ್ಯ ಸಂ। ಪರ್ಕ ಕಾಣೆನೈ ಕರುಣಿಗಳರಸೆ ಕಾಯೋ ॥ ೨ ॥ ಎನ್ನ ತಪ್ಪಿನ ಹೊಳೆ ಒಳಕೊಂಬುದು ಒಂದೇ। ನಿನ್ನಯ ದಯದ ಶರಧಿಯಲ್ಲವೇ ॥ ಅನ್ಯಮಾರ್ಗವು ಶಿಲುಕದು ತಂದೆಯೇ ಪ್ರ। ಸನ್ವೆಂಕಟ ಪತಿ ಹರಿ ದೀನ ಬಂಧೂ ॥ ೩ ॥

೧೦೭

ರಾಗ—ಬಹಿರಿ ತಾಳ—ಆದಿ

ಚಿಂತೆಯಾ ಪರಿಹರಿಸೋ, ತಿಮ್ಮಯ್ಯಾ ॥ ಚಿಂತಾಯಕ ಕಂತು ಕಮಲೆಯ ರಾಯಾ ॥ ಪಲ್ಲ ॥ ಸಾಧ್ಯವಲ್ಲದುದನ್ನು ಹಂಬಲಿಸಿ। ಬುದ್ಧಿ ಭ್ರಾಂತಿಲಿ ಬಲು ಸುಖ ಬಯಿಸಿ ॥ ಕದ್ದ ಕಳ್ಳನಂತೆ ವೃಥಾ ಕುದಿದೆ, ಮದ್ದು ಮೆದ್ದಿಲಿಯಂತೆ ಬಳಲಿದೆ ॥ ೧ ॥ ತಿಳಿದು ಮಾಯದ ಬಲಿಗೆ ಮೈಗೊಟ್ಟೆ। ಬೆಲೆಗಟ್ಟಿ ವೃಥ ಹುಚ್ಚು ದೈನ್ಯ ಬಟ್ಟೆ ॥ ಆಲಿಸಿ ಮೋಕ್ಷದ ನೆಲೆಯ ಕೇಳದೆ ನಾ। ಕಳವಳಗೊಂಬೆ ಕರುಣ ಸಂಪನ್ನ ॥ ೨ ॥ ಚಿಂತೆಗೆ ಚಿಂತಿ ಸಹಾಯವಾಗಿ। ಅಂತರಂಗದ ಕ್ಲೇಶ ಹೇಸಿತು ಬಾಗಿ॥ ಶಾಂತ ಮೂರೂತಿ ಪ್ರಸನ್ವೆಂಕಟೇಶಾ ಏ। ಕಾಂತ ದಾಸರಾ ನೆಳಲನೇ ತೋರಿಸೊ ॥ ೩ ॥

೧೦೮

**ರಾಗ—ವರಾಳಿ** **ತಾಳ—ತ್ರಿವಿಡಿ**

ದಾರು ದಾರಿಲ್ಲೆಲ್ಲೋ ರಂಗಾ | ದಾರಿಗೆ ದಾರಿಲ್ಲ ಸಂಗ || ನೀರಜಾಕ್ಷ ನೀನೇ ಭವಸಾಗರ | ತಾರಿಸಿ ಕೀರ್ತಿ ಪಡೆಯೋ ಪಾತಾರ || ಪಲ್ಲ || ಮೀನವು ವಿಷನುಂಡಂತೆ, ಸುಖ | ಮಾನಿನೆಯರ ತಡಿಯು | ಧೇನು ಜರಿಯಾದಂತೆ ಎಳೆಯ ಸೂನುಗಳ ಬಿರಿನುಡಿಯು | ಏನು ಬಳಗಾ ವ್ಯಗದಗ್ಧಾ ವಿ | ಪೀನದ ಸ್ನೇಹದ ಕಿಡಿಯು | ಪ್ರಾಣ ಪಯಣಕೆ ಬುತ್ತಿಲ್ಲ ಭವ ಸಂ | ಧಾನ ಹರಿದಾರಿ ಆರಿಲ್ಲ ಒಡೆಯಾ || ೧ || ಏಸು ದಿನಗಳಿಂದ ನೆಚ್ಚಿದೀ ಕಾಯಾ | ಹೇಸಿಕೆ ಘನವಾಯಿತು | ಆಶೆ ಬಟ್ಟಾರ್ಥಾ ವೃಥವ್ರುಯಲ್ಲ | ಕಾಸು ನಾಶಾಯಿತು | ಲೇಶಮಾತ್ರ ಹಿತವೂ ಹೊಂದದೆ ಮನ | ದ್ವೇಶಿಯು ತಾನಾಯಿತು | ಆ | ಯುಷ್ಯ ಸೂತ್ರ ಹರಿದರೆ ಭವರೋಗ | ಭೇಷಜವಿಲ್ಲದಂತಾಯಿತು || ೨ || ಕುನ್ನಿ ಸಂತೆಗೆ ಹೋದಂತೆ ಬಹು | ಜನ್ಮ ನೋವಾದವು | ಮಣ್ಣಿನ ಹಾಲಕೊಡ ಒಡೆದಂತೆ ನನ್ನ ಧರ್ಮಕರ್ಮವು | ನನ್ನೆಚ್ಚರ ನನಗಿಲ್ಲಾವು ನಿ | ನ್ನೆಚ್ಚರವೆಲ್ಲಿ-ಯದು ಪ್ರ || ಸನ್ನವೆಂಕಟ ನಿನ್ನ ಯಾತ್ರೆಗೆ | ನೀನೆ ಬೆನ್ನುತೋರೆ ಎನಗಿಲ್ಲ ಗೆಲವು || ೩ ||

೧೦೯

**ರಾಗ—ಪೂರ್ಯಾ** **ತಾಳ—ಅಟ್ಟ**

ಹರಿಶರಣು ಮಧ್ವಗುರು ಶರಣೆಂಬೋದೇ ದಿವ್ಯ ಮಂತ್ರಾ|| ಇಹಪರಕಿದೇ ಸಾಧನವೆಂದು ನಂಬಿ ಬಿಟ್ಟೆ, ಹಲವು ತಂತ್ರಾ ||ಪಲ್ಲ|| ಹರಿ ಕೊಡದೆ ಯಾರು ಕೊಡುವದಿಲ್ಲಾ | ಪರರನ್ನು ಬೇಡಲ್ಯಾಕೆ || ಹರಿ ಕೊಟ್ಟರುಂಟು ಹಗಲಿರುಳು ಒಣ ಹಂಬಲ್ಯಾಕೆ || ೧ || ಇದು ನನ್ನದದುನನ್ನದೆಂದು ಬರಿದೆ ಹೊತ್ತು, ಹೋಯಿತಲ್ಲ ಶ್ರೀ|| ಪದುಮನಾಭನ ಭಜನಿಯ ದಾಸರ ಪಾದ ಪಿಡಿಯಲಿಲ್ಲಾ || ೨ || ಎರಮಿನ ಸತಿ ಸುತ ಪಶು ಧಾನ್ಯಾ ಒಂದೊಂದೇ ಅಗಲುವಾಗ || ಗತ ಹರುಷನಾಗಿ ರಂಗನಂಘ್ರಿ ಮರೆದುಂಡೆ ನಿರಿಯ ಭೋಗ || ೩ || ಕರ್ಮತ್ರಯಂಗಳು ಕರಗವೇ ಶ್ರೀನಿವಾಸ, ನೊಲಿಮೆಯಿಂದ ದು || ಷ್ಕರ್ಮ-

ರಣ್ಯವು ಸುಟ್ಟು ಹೋಗದೆ ನಾವಾಗ್ನಿಯಿಂದ || ೪ || ಬೇಡಿದರೀವ ಪ್ರಸನ್ನ ವೆಂಕಟೇಶನ್ನ ಬೇಡಬೇಕು, ಅವನ || ಹಾಡುತ್ತ ಹರಸುತ್ತ ಜನ್ಮಾಯುಷ್ಯ ಪೋಗಾಡಬೇಕು || ೫ ||

೧೧೦

## ವ್ಯಾಕುಲಭಾವದ ಪದಗಳು

**ರಾಗ—ಕಾಂಬೋಧಿ** **ತಾಳ—ಝಂಪಾ**

ಎಂತು ಜೀವಿಸಲಮ್ಮ ರಂಗನಗಲಿ, ಎ || ನ್ನಂತರಪರಾಧವ ನೋಡ- ದೊದಗನ್ಯಾಕೆ || ಪಲ್ಲ || ಎಂದೆಂದು ತನ್ನ ಪೊಂದಿದ ಮಂದ ಮುಗ್ಧೆಯನು | ಕಂದರ್ಪ ಶರಕೆ ಗುರಿ ಮಾಡಬಹುದೇ || ಇಂದು ಕಾಂತಿಯು ಅಗ್ನಿಯಂದ- ದಾಯಿತು ಹರಿಯೇ | ಮಂದಸ್ಮಿತ ಸುಧೆ ಎನಗೆ ದೊರೆಯದಿರಲೂ || ೧ || ಶೃಂಗಾರ ಸೊಬಗ್ಯಾಕೆ ರಂಗನೀಕ್ಷಿಸದಿರಲು | ಅಂಗದಲ್ಲಿಲದೆ ಪ್ರಾಣಸುಖ- ವಾರಿಗೆ || ಕಂಗಳು ದಣಿಯೆ ಅಘ, ಭಂಗನ ದಿಟ್ಟಿಸಿ ನೋಡಿ | ಪೊಂಗಳೊಲ ಸಂವಿರವವ ಕೇಳದಿರೆ ನಾನೂ || ೨ || ವಿಪುಳ ತಾಪದಿ ಬಾಲೆ ನೊಂದಳೆಂಬ ಮಾತು | ಅಪಕೀರ್ತಿ ತನಗೆ ಅಲ್ಲವೇನೆ ? ತಂಗೀ || ಶ್ರೀಪತಿ ಪ್ರಸನ್ವೆಂಕ- ಟೇಶನು ನೆರದ ಸಂಭ್ರಮಕೆ | ನಾ ಪಾವನನಾದೆನೇ ಜಾಣೆ ನಿನ್ನಾಣೆ || ೩ ||

೧೧೧

**ರಾಗ—ಭೈರವಿ** **ತಾಳ—ಅದಿ**

ನೀ ಕರುಣಿಸೋ ಸಿರಿವಿಠಲಾ | ಇನ್ಯಾಕಾಲಸ್ಯವು ಹರಿವಿಠಲಾ ||ಪಲ್ಲ|| ದೋಷಿಗಳೊಳಗೆ ಹಿರಿಯನು ನಾ | ನಿರ್ದೋಷಿಗಳರಸು ನೀ ರಂಗಯ್ಯಾ || ಸಾಸಿವೆಯಷ್ಟು ಭಕುತಿ ನಾನರಿಯೆ | ಶೇಷಶಾಯಿ ನೀ ರಂಗಯ್ಯಾ || ೧ || ಭವಸಾಗರ ನಾ ಮುಣುಗುವೆ ಸುಮ್ಮನೆ | ಅವಲೋಕಿಪರೆ ನೀ ರಂಗಯ್ಯಾ | ನವವಿಷಯಕೆ ಮುಗ್ಗುತಲಿದೆ ಎನ್ನ ಮನ | ಬವಣೆಯ ಬಿಡಿಸೋ ನೀ ರಂಗಯ್ಯಾ || ೨ || ತನುಸಂಬಂಧಿಗಳತಿಶಯ ಸ್ವಾರ್ಥರು | ಎನಗಾರಿ ಲ್ಲೆಲೋ ರಂಗಯ್ಯಾ || ಬಿನುಗು ಮಾನವರನುಸರಣೆಯಲಿ | ದಣಿಸಿದ

ರಯ್ಯಾ ರಂಗಯ್ಯಾ ।। ೩ ।। ನಿಶಿದಿನ ಅಶನಾ ವಸನಕೆ ಹೆಣಗುವೆ । ಹುಸಿ ಸಂಗ್ರಹಿಸಿದೆ ರಂಗಯ್ಯಾ ।। ನಿಷಿದ್ಧಗಳಂಜಿಕೆ ಇಲ್ಲವು ನರ್ಕದ । ಘಸಣಿಗೆ ಅಂಜುವೆ ರಂಗಯ್ಯಾ ।। ೪ ।। ಝುಷಾವಕೆ ಸಾವಿರ ಮಾಡುವೆ ತಪ್ಪನು । ಕಾಯೊ ದಯಾಂಬುಧಿ ರಂಗಯ್ಯಾ । ನಾ ವಡಲ್ಗೊಕ್ಕೆನೊ ಪ್ರಸನ್ವೆಂಕಟಪತಿ । ಜೀವಕೆ ಹೊಣೆ ನೀ ರಂಗಯ್ಯಾ ।। ೫ ।।

೧೧೨

**ರಾಗ—ವರಾಳಿ** **ತಾಳ – ಆದಿ**

ಬ್ಯಾಡಿರೆವ್ವಾ ಎನ್ನ ಕಂದನ್ನ ದೂರ ಬ್ಯಾಡಿರೆ ।। ಗಾರು ಮಾಡಿ ಚೋರನೆಂದು । ಸಾರಿ ತಂದ ದುರುಳನೆನ್ನಾ ।। ಪಲ್ಲ ।। ಹಸಿದೆ ಮಗುವೆ ಹಸಿದೆ ಚಿನ್ನಾ। ಶಿಶುವೆ ಪಾಲ್ಗುಡಿಯಾ ಬಾರೆನ್ನೆ। ಮಿಸುನಿ ಬಟ್ಟಾಲೋಳಿಪ್ಪ ಪಾಲಿನ । ಬಿಸಿಗೆ ಬೋವ್ವೆಂದ ಬೆದರುವ ।। ಮೊಸರು ಹರಿವೆಯೊಡೆದು ನಿಮ್ಮ । ಪೊಸ ಬೆಣ್ಣೆಯಾ ಮೆಲುವನೆಂತೋ । ಸೊಶಿಯಾಪೊಂದು ಕೂಡೆನ್ನ ಕೂಸಿಗೆ । ಪುಶಿಯಾ ವಾಕು ನುಸಿಸಿ ದೂರ ।। ೧ ।। ಮುದ್ದು ತಾರೋ ರಂಗ ಎನಲು । ಎದ್ದು ಚಪ್ಪಳಿಗಳಿಡುತ । ಬಿದ್ದು ಅಂಜೇಗಾಲ ಸಿಕ್ಕಿ । ಮುದ್ದು ನೀಡಾಲರಿಯಾನೆ ।। ಕದ್ದು ನಿಮ್ಮನೆ ಕೆನೆ ಪಾಲನು । ಗೆದ್ದು ನಿಮ್ಮಾ ಬಾಲರ ಬೆನ್ನಾ। ಗುದ್ದಿ ಓಡಿ ಬರುವನೆಂತೊ । ಬುದ್ಧಿ ಇಲ್ಲಾವೇನೇ ನಿಮಗೆ ।। ೨ ।। ಎತ್ತಿಕೊಂಡು ರಮ್ಮಿಸಿ ಬಾಯೊಳು । ತುತ್ತುನಿಡಲು ಉಣ್ಣಲರಿಯಾ । ಕತ್ತಲೆಯೊಳು ಹೆಂಗಳ ಪಿಡಿದು । ಚಿತ್ತ ಮೋಹಿಸ ಬಲ್ಲನೇ ।। ಹೆತ್ತ ಮಕ್ಕಳಿಲ್ಲವೇ ನಿಮಗೇ । ವ್ಯರ್ಥ ಜಾರಾನೆನ್ನುವಿರಮ್ಮಾ । ಕರ್ತ ಶ್ರೀ ಪ್ರಸನ್ವೆಂಕಟರಾಯಗೆ। ಭಕ್ತವತ್ಸಲ ತಾನಲ್ಲೆಂದೂ ।। ೩ ।।

೧೧೩

**ರಾಗ—ಹಿಂಡೋಲ** **ತಾಳ—ಬಿಲಂದಿ**

ಹೇಳೆ ಕಾಮಿನಿ ರಂಗಗೆ ಬುದ್ಧಿಯ । ಹೇಳೇ ಕಾಮಿನಿ ರಂಗಗೆ ।।ಪಲ್ಲ।। ಹೇಳಿದಂದದಿ ಕೇಳಿ ಕಾಲಿಗೆರುವಳ । ಮ್ಯಾಲೆ ಕೋಪಿಸಿಕೊಂಡು ಬಾಲೇರ ನೆರವಂಗೆ ।। ಅನು ಪಲ್ಲ ।। ತನ್ನ ಮೈಗಂಪು ಕಸ್ತೂರಿ ಗಂಧಧಿಕ ಕಂಡೆ ।

ತನ್ನಧರದ ರಸಾಮೃತಗಿಂತ ಸವಿದುಂಡೆ ॥ ತನ್ನ ದಂತದ ಘಾಯಕೆ ಅಂಜದೆ ಕರ । ಜಾನ್ನಟ್ಟಿಸಲು ಕುಚಕ್ಕೆ ಸುಂದರಿಯು । ರನ್ನು ಮೆಚ್ಚಿದ ದಾನಕ್ಕೆ ಇನಿಯೊಳಿರೆ । ಅನ್ಯಳ ಮೋಹಿಪಗೆ ಕಲಿಮಾನವಗೆ ॥ ೧ ॥ ಸ್ನೇಹ ನೋಟಕೆ ಮೆಚ್ಚಿ ಸುಖ ಭಾರ ತನಗಿತ್ತೆ । ಬಾ ಹೆಣ್ಣೆ ಎನಲು ಭಾಗ್ಯಾಂಬುಧಿಗೊಶವಾದೆ ॥ ತಾ ಹೊನ್ನಾಸೆಗೆ ಮಂಚಾದಿ, ಘಾಸಿಸಿದಾರೆ । ನೇಹ್ಯ ಬೆರದೆ ಕೆಲದಿ, ಕರಾಳ ಚೇಷ್ಟೆಗೆ । ನೇಹಾದಾರದಲೊಪ್ಪಿದೆ, ಎನ್ನನು ಬಿಟ್ಟು । ಬಾಹುಜೋರಿನ ಬುದ್ಧ ವಾಜಿಯೆಲ್ಲೇರ ॥ ೨ ॥ ಚಪಲತೆಯಲ್ಲಿ ಕಪಟ ವಿದ್ಯನಲಿ ಭೂಪ । ಕುಪಿತಾಶಾಯಿಲ್ಲ ಹೆಜ್ಜೆಹೆಜ್ಜೆಗೆ ಕಥಿಯಿಲ್ಲ ॥ ನೃಪ ಕೃಷ್ಣ ಸಲಹೆಂದಾರೆ, ಎನ್ನಿಂಡಾದ । ಅಪರಾಧ ಕ್ಷಮಿಸೆಂದಾರೆ, ಪ್ರಸನ್ವೆಂಕಟ । ಕೃಪಿ ಧರ್ಮಿಯೆಂದಾರೆ ಇದಕೆ ತಾ ॥ ವಿಪರೀತ ತಿಳುಹೆನಂತೆ । ಹಾಗಲ್ಲಂತೆ ॥ ೩ ॥

೧೧೪

## ಮುಮುಕ್ಷು ಭಾವದ ಪದಗಳು

**ರಾಗ—ಕಲ್ಯಾಣ** **ತಾಳ—ಝಂಪಾ**

ದೇವ ನೀ ಗತಿಯಯ್ಯ ಶ್ರೀ । ಮಾಧವ ನೀ ಗತಿಯಯ್ಯಾ ॥ ಪಲ್ಲ ॥ ಎಂಭತ್ತುನಾಲ್ಕು ಲಕ್ಷ ಯೋನಿ ತಿರುಗೀ । ಅಂಬರ ಪೈಶಾಚಿಯ ತೆರ ಮರುಗೀ ॥ ಅಂಬುಧಿಶಾಯಿ ನನ್ನೆಡೆಯರುಹಿಲ್ಲಾ । ಇಂಬುಗಾಣಿಸಿನ್ನಾದರೆ ಸಿರಿನಲ್ಲಾ ॥ ೧ ॥ ಏನು ಸುಕೃತದಿಂದ ಮಾನವನಾಗೀ । ನಾನಾ ವಿಷಯವುಂಡು ಅಂಧಕನಾಗೀ ॥ ಓನ ನರ್ಕಕೆ ಸಂಚಕಾರವ ಕೊಟ್ಟೆ । ಜ್ಞಾನ ವಿಹೀನ ನರಪಶುಗೇನು ಬಟ್ಟೆ ॥ ೨ ॥ ಬುದ್ಧಿ ಇಲ್ಲದವನಾದರೆ ತನ್ನವನ । ತಿದ್ದಬೇಕಲ್ಲದೆ ಬಿಡುವರೆ ಜಾಣ ॥ ಮದ್ದುಂಡಿಲಿಯ ಪರಿ ಬಳಲುವೆ ನನ್ನ । ಉದ್ಧರಿಸು ಪ್ರಸನ್ವೆಂಕಟ ರನ್ನಾ ॥ ೩ ॥

೧೧೫

**ರಾಗ—ವರಾಳಿ** **ತಾಳ—ಅಟಚೌತಾಳ**

ನೀಯೆನ್ನ ಸಲಹೋ ದಾತಾ । ಶ್ರೀನಾಥಾ ॥ ಪಲ್ಲ ॥ ಅಣುರೇಣು ತೃಣ ವ್ಯಾಪ್ತ ಅಕಳಂಕಾ ನಿರ್ಲಿಪ್ತ ॥ ವನರುಹಾಸನ ಪ್ರೀತ, ವೈಕುಂಠ

ಕರ್ತ ॥ ೧ ॥ ತಾಪಸಜನ ಪೂಜ್ಯ, ತರಣಿ ಕೋಟಿ ತೇಜ ॥ ಶ್ರೀಪರಮೋತ್ತಮ, ಸಕಲಂತರಾತ್ಮ ॥ ೨ ॥ ಬ್ರಹ್ಮಾಂಡ ಸಂರಕ್ಷಾ ಭಾಗವತರ ಪಕ್ಷಾ ॥ ಹಮ್ಮಿನ ಖಳರೊದ್ದ ಹರಿ ಅನಿರುದ್ಧ ॥ ೩ ॥ ಸ್ವರ್ಣಮುಖರೀ ತೀರ ಸನ್ನಿಧಿ ಮಂದಿರ । ಪೂರ್ಣ ಮಹಿಮಾ ವಟ ಪರ್ಣಾಶ್ರಯ ಕೃಷ್ಣಾ ॥ ೪ ॥ ಸ್ವಾಮಿಪುಷ್ಕರವಾಸ ಶುಭ ಮಂದಸ್ಮಿತಹಾಸ । ಪ್ರೇಮಾಬ್ಧಿ ಅಹರ್ನಿಶ ಪ್ರಸನ್ವೆಂಕಟೇಶ ॥ ೫ ॥

೧೧೬

**ರಾಗ—ಕಲ್ಯಾಣಿ** **ತಾಳ—ಆದಿ**

ಪಾಲಿಸೊ ಪಾಲನ ಶೀಲ ಶ್ರೀಲೋಲ । ಪಾಲಿಸೊ ಪಾಲನ ಶೀಲ ॥ ಪಲ್ಲ ॥ ಈಶ ಪರೇಶ ನಿ । ದೋಷ ಸ್ಮಿತಹಾಸ ನಿ । ರಾಶ್ರಘನಾಶ ಘ । ನಶಾಮ ನಾಶಾ । ಪಾಲಿಸೊ ॥ ೧ ॥ ಮಿತ್ರ ಜಿತ ಗಾತ್ರ । ಶತ ಪತ್ರಾಯತ ನೇತ್ರಾ । ಧರಿತ್ರಾ ಕಳತ್ರಾ ಶ್ರೀ । ಪೌತ್ರಿ ಪವಿತ್ರಾ ॥ ೨ ॥ ಕರುಣಾರಸ ಪೂರ್ಣಾ । ಸ್ವರ್ಣಗಿರಿ ಪೂರ್ಣಾ । ಅರುಣಾಬ್ಜ ಚರಣಾ । ಪ್ರಸನ್ವೆಂಕಟ ಭರಣಾ ॥ ೩ ॥

೧೧೭

**ರಾಗ—ತೆಲಗ ಕಾಂಬೋಧಿ** **ತಾಳ—ಆದಿ**

ಪಾಹಿ ಮಾಮ್ ಕೃಷ್ಣ ಪಾಹಿ ॥ ಅಹಿವರ ಸುಖಶಯನ ಸ್ವರೂಪ ಸುಖ ದೇಹಿ ॥ ಪಲ್ಲ ॥ ವಾರಿಚರ ಶೈಲಧರ । ಹತ್ತವತಾರೀ । ಶೌರಿ ವ್ರತ ನಾರಿ । ಜನತೋಷ ಉದಾರೀ ॥ ೧ ॥ ಮತ್ಸ್ಯ ಕಮಠ ವರಾಹ ಹೇಮಾಕ್ಷ ಮಥನ ವಟು । ಕುತ್ಸಿತ ನೃಪಘ್ನ ಯಜ್ಞರಕ್ಷ ಶ್ರೀರಾಮ ॥ ೨ ॥ ಗೋಪಾ ಪೀಯೂಷಾ ಭೂಪಾ ಗೋಪಾ ಯೋಗ । ರೂಪಹೃತ ಮ್ಲೇಂಛ ತಾಪಾ ಪ್ರಸನ್ವೆಂಕಟಾಧೀಪಾ ॥ ೩ ॥

೧೧೮

**ರಾಗ—ತೆಲಗಕಾಂಬೋಧಿ** **ತಾಳ—ಬಿಲಂದಿ**

ಒಲಿಯಯ್ಯಾ ರಂಗ । ಒಲಿಯಯ್ಯಾ ॥ ನೆಲೆಗಾಣದ ಭವಜಲದೊಳು ಮುಳುಗುವೆ ॥ ಪಲ್ಲ ॥ ಮಾಯದ ಕೈಯಲಿ ಮೇಲೆ ಮೇಲೆ ಸುತ್ತಿ ।

ಆಯಾಸಬಡುತಿದೆ ಪ್ರಾಣ ದಾತಾ ॥ ಬಾಯಿತ್ತಿ ಗೋವಿಂದ ಹರಿಯನ್ನ ಲೀಸದು । ಕಾಯೊ ದಯಾಳು ಕರಿವರದ ಕೃಷ್ಣಾ ॥ ೧ ॥ ಮನ ನೀರಾನೆಯ ಕಟ್ಟಿನೊಳಗೆ ಸಿಕ್ಕಿ । ಕ್ಷಣ ಕ್ಷಣ ದೈನ್ಯದಿ ಒರಲುತಿದೆ ॥ ತನತನಗೆಳಿದು ದಣಿಸುವ ಇಂದ್ರಿಯ ಜಂತು । ಮುನಿಸೇವ್ಯ ನಿನ್ನುಳಿಗಕ್ಕೆ ದೂರಾದೆ ಕೃಷ್ಣಾ ॥ ೨ ॥ ಬುದ್ಧಿ ತಪ್ಪಿದವಗೆ ಅಪದ್ಧ ನಡೆವವಗೆ । ಶುದ್ಧ ಕಾರಣ ದಿವ್ಯ ನಾಮುವಲ್ಲವೆ ॥ ಉದ್ಧರಿಸು ಬೇಗ ಪ್ರಸನ್ವೆಂಕಟ ಕೃಷ್ಣಾ । ತಿದ್ದಿಟ್ಟುಕೊಳ್ಳೊ ನಿನ್ನವಗೆ ನಿರ್ಣಯ ನೀನೇ ॥ ೩ ॥

೧೧೯

## ಶಾಂತಭಾವದ ಪದಗಳು

**ರಾಗ— ಯಮುನ** **ತಾಳ— ಅಟಚೌತಾಳ**

ಬಂದು ಚಿತ್ತ ಭವ ಭಯ ಮಂದಾರ । ಭಜ ಚಿತ್ತ ಭವ ಭಯ ದೂರಾ ॥ ಪಲ್ಲ ॥ ಹಾಟಕ ಗಿರಿತಟ ವಾಸ ಪರೇಶಂ । ಕೋಟಿ ನಿಷ್ಕಾಯಸ ಮಾನಸ ಕಾಯಾ ॥ ೧ ॥ ಸಜಲ ಜಲದ ನಿಭ ಶಾಮಲ ರಾಯಾ । ಪ್ರಜ ಜನ ಗೋಪ್ರತಿಪಾಲಾ ॥ ೨ ॥ ಮಾ ಪದ್ಮಭವ ಮುಖ್ಯ ಪುತ್ರ ಕಳತ್ರಂ । ಶ್ರೀ ಪ್ರಸನ್ವೆಂಕಟಪತೇಂದ್ರ ಪತ್ರಂ ॥ ೩ ॥

೧೨೦

**ರಾಗ— ಮಾರವಿ** **ತಾಳ— ಆದಿ**

ಸಲಹು ವೆಂಕಟರಮಣ ದಯಾಂಬುಧಿ । ಸಲಹು ವೆಂಕಟರಮಣ ॥ ಪಲ್ಲ ॥ ಮಸ್ತಕದೊಳೊಪ್ಪುವ ಮಾಣಿಕ ಮುಕುಟದ । ಕಸ್ತೂರಿ ನಾಮದ ಚಲುವಾ ॥ ವಿಸ್ತರ ಕದಪಿಲಿ ಹೊಳೆವ ಕುಂಡಲ ಪ್ರಾ । ಶಸ್ತ ವದನ ಜಗಜೀವಾ ॥ ೧ ॥ ಎಳೆನಗೆ ತಿಂಗಳ ಕಾಂತೆಲಿ ಹೃತ್ತಾಪ । ಕಳೆವ ಕರುಣಿ ಸಿರಿ ಕಾಂತಾ ॥ ಗಳದೊಳು ವನಮಾಲೆ ವೈಜಯಂತಿ ಪದಕಗ । ಳೊಲವಾ ಮಂಗಳ ಮೂರ್ತಿಮಂತ ॥ ೨ ॥ ಮುತ್ತಿನ ಸರ ಸರಪಳಿ ಭುಜ ಕೀರ್ತಿಯು । ಎತ್ತಿದ ಶಂಖಾರಿ ಪಾಣೀ ॥ ರತ್ನದ ಮೇಲೊಡ್ಯಾಣ ಕಂಕಣ ಮುದ್ರಿ । ವತ್ತೆ ಅಭಯುವರದನೇ ॥ ೩ ॥ ಉಟ್ಟು ಪೊಂದಟ್ಟಿ ಕಟಾರೆ ಕಟ್ಟಿರುವ । ದುಷ್ಟರ

ರಣಜಿತ ವೀರ || ಇಟ್ಟ ವಜ್ರದ ಕಾಲಿಂದಿಗೆ ಪಾವುಗೆ | ಮೆಟ್ಟಿದ ಸುರರ ಮಂದಾರ || ೪ || ಅಗರು ಚಂದನ ಕಪ್ಪೂರ ಕೇಶರ ಸುರ | ಭಿಗಳಿಗೆ ಅತಿ ಪ್ರಿಯ ಅಂಗ || ಮಘಮಘಿಸುವ ಮಲ್ಲಿಗೆ ಸಂಪಿಗೆಯ ಮಾ | ಲೆಗಳ ಪ್ರಸನ್ವೆಂಕಟ ರಂಗಾ || ೫ ||

೧೨೧

**ರಾಗ--ಸಾರಂಗ** **ತಾಳ—ಆದಿ**

ಸೀತಾಪತೆ ಸ್ವಾಮೀ ಸೀತಾಪತೆ | ವಾತಜನುತ ಭೂತ | ನಾಥ ಪತೇ ರಾಮಾ || ಪಲ್ಲ || ಗುಪ್ತಗಣ ತಾಳ ಸಪ್ತಘನ ಮೇಳ || ದೀಪ್ತ ಕಾಯ || ಕುಶಸುಪ್ತ ಜಯರಾಮ || ೧ || ತಾಟಕಾರಿ ರಘುರಾಟ್ ಶ್ರೀರಾಮ ಹರೀ || ಹಾಟಕಪುರಪ ನಿಶಾಟಹರಾ ರಾಮ || ೨ || ಭರ್ತಾ ನೇಮ ಪರಿ, ಪೂರ್ತ ನಮೋ ಹರಿ || ಕರ್ತ ಪ್ರಸನ್ವೆಂಕಟಾ ಆರ್ತಾಶ್ರಯಾ ರಾಮಾ || ೩ ||

೧೨೨

**ರಾಗ—ಪಾಡಿ** **ತಾಳ—ತ್ರಿವಿಡಿ**

ಶರಣು ಶರಣು ಹೇ, ಪರಮ ಪುರುಷ | ಶರಣು ಭಯಂಕರ ಖಂಡನ || ಶರಣು ಶಿರಿವಿಧಿ ಮರುತ ಪೂಜಿತ | ಶರಣು ವೆಂಕಟನಾಯಕ || ಪಲ್ಲ || ಭಾಸಿತ ತಟಿತ ಮಕರ ಕುಂಡಲ | ಭಾಸಕರ ಶಶಿಲೋಚನಾ | ಸಾಸಿರಾ ಶತ ವೇದ ವಂದಿತ | ವಾಸವಾರ್ಚಿತ ಪದಯುಗಾ || ದೇಶ ಕಾಲ ಸುವ್ಯಾಪ್ತಾ-ಜಾಂಡ, ವಿಶೇಷ ಸ್ಥಿತಿ ಲಯ ಶೀಲನೇ | ತೋಷ ಮಂದ ಸುಹಾಸ ವದನನೆ | ಶೇಷಗಿರಿವಾಸ ನಮೋ ಹರೆ || ೧ || ಶಂಖ ಚಕ್ರ ಗದೆ ಪದುಮ ವರ | ಕಂಕಣಾ ಕರರಾಜಿತ | ಕುಂಕುಮಾ ಮೃಗಮದ ತಿಲಕ ಘನಾ | ತಂಕ ಕುಂಭಿ ಮೃಗಾಧಿಪಾ || ಕಿಂಕರಾನತ ರಕ್ಷಕ ರಿಪು | ಶಂಖ ದೈತ್ಯ ವಿಶೀಕ್ಷಕ | ಪಂಕ-ಜಾನನ ಗರುಡ ವಾಹನ | ಅಂಕಿತಾಖಿಳ ಭೂಷಣಾ || ೨ || ಜನನ ಮೃತ್ಯು ವಿದೂರ ಅಚ್ಯುತ | ಮುನಿ ಮನಾಲಯ ಮಾಧವಾ | ಕನಕ ನೇತ್ರ ವಿದಾರಿ ಸ್ತೌತ್ಯ | ಘನ ವಿಮಲಗುಣ ಪೂರ್ಣನೆ || ದನುಜ ನಿಕರಾಟವಿ ದಾವಾನಳ |

ಸನಕಸನಂದನ ಸ್ತುತಿ ಪ್ರಿಯ । ಅನವರತ ವರಸ್ವಾಮಿ ಪುಷ್ಕರ । ಸನ್ನಿಧ ಪ್ರಸನ್ವೆಂಕಟೇಶಗೆ ॥ ೩ ॥

೧೨೩

## ದಾಸ್ಯಭಾವದ ಪದಗಳು

**ರಾಗ—ರೇಗುಪ್ತಿ** **ತಾಳ—ಆದಿ**

ಕೆಡಗುಡದಿರು ದೇಶಿಗ ನಾ, ರಂಗಾ॥ ಕೆಡಗುಡದಿರು ದೇಶಿಗ ನಾ ॥ಪಲ್ಲ॥ ನುಡಿನುಡಿದು ಮುಪ್ಪಾದೆ ಎನ್ನಯ । ನಡೆ ನೋಡಲು ಹುರುಳಿಲ್ಲಾ ॥ ಹುಡಿ ಹುಡಿಯ ದಿನ ವಿಷದ ಬಲಿಯಲಿ । ಅಡಿಗಡಿಗೆಡೆಗೊಡೆ ಪಾಪವು ರಂಗಾ ॥ ೧ ॥ ಜಪತಪ ವ್ರತಗಳ ನೇಮವನರಿಯೆ । ನಿಪುಣ ಪೂಜಾವಿಧಿ ಅರಿಯೆ ॥ ಅಪರಿ- ಮಿತಾ ಶುಭಕ್ರಿಯದೊಳು ಕಾಮನ । ಚಪಲತೆ ಭ್ರಮುಗೊಳಿಸುತಿದೆ ರಂಗಾ ॥ ೨ ॥ ಹಿಡಿ ಹಿಡಿ ಮುಣುಗುವೆ ಯಾರಿಲ್ಲವೊ ಪಾ । ಲ್ಗಡಲೊಡೆಯ ಭವಾಬ್ಧಿಯಲಿ ॥ ಚಡಪಡಿಸುವೆ ಮೂರುರಿಯಲಿ ಹರಿ ನಿ । ನ್ನಡಿಯಲಿಡು ಪ್ರಸನ್ವೆಂಕಟ ರಂಗಾ ॥ ೩ ॥

೧೨೪

**ರಾಗ— ತೆಲಗಕಾಂಬೋದಿ** **ತಾಳ— ಝಂಪಾ**

ನಿನ್ನರಮನೆಗಾಯ್ವ ಪಶುದೇಹಧಾರಿಯ । ಮಾಡು ಕಂಡ್ಯಾ ಕೃಷ್ಣಾ । ನಿನ್ನವನಲ್ಲದ ಮಾನವಜನುಮೆಂದೂ ಬ್ಯಾಡ ಕಂಡ್ಯಾ ॥ ಪಲ್ಲ ॥ ಅಚ್ಯುತ ಚಿತ್ ಸ್ವರೂಪೋಚ್ಚಾರಿಪ ಗಿಣಿ ಮಾಡು ಕಂಡ್ಯಾ ಕೃಷ್ಣಾ । ನಿಚ್ಚಾರಿ ನಿಶಾಚರ ಹರನೆಂಬ ಜಾಣ್ಣಕ್ಕೆ ಮಾಡು ಕಂಡ್ಯಾ ॥ ೧ ॥ ಅಹೋಮಾ ಉಮೇಶ ವಿಧಿಪನೆಂಬ ನವಿಲು ಮಾಡು ಕಂಡ್ಯಾ ಕೃಷ್ಣಾ ॥ ಕುಹಕ ಕುವ್ರತ ವೈರಿ ಅನರಿಗೆಂಬ ಪಿಕನ ಮಾಡು ಕಂಡ್ಯಾ ॥ ೨ ॥ ಹರಿಯುವಯುವಗಳೆಂಬ ಪುಷ್ಪದಿ ಚರಿಪಾಳಿಯ ಮಾಡು, ಕಂಡ್ಯಾ ಕೃಷ್ಣಾ ॥ ಪರಮ ಮುಕ್ತಾಹಾರದ ಪರಮಹಂಸನ ಮಾಡು ಕಂಡ್ಯಾ ॥ ೩ ॥ ಭುಲ್ಲಿಪ ವೈಕುಂಠಾ ಸಿರಿಯನಿಟ್ಟಿಪ ಹುಲ್ಲೆ ಮಾಡು ಕಂಡ್ಯಾ ಕೃಷ್ಣಾ ॥ ಎಲ್ಲ ಪ್ರಕಾರದ ಸಾರಿ ಕೂಗುವ ನರಿಯ

ಮಾಡು ಕಂಡ್ಯಾ ॥ ೪ ॥ ಸ್ವರೂಪ ಬಿಂಬವ ನೋಡಿ ನರ್ತಿಪ ಕುದುರೆಯ ಮಾಡು ಕಂಡ್ಯಾ ಕೃಷ್ಣಾ ॥ ವರ ಮುಕ್ತರರಮನೆ ಭಾರ ಹೊರುವ ಗೂಳಿ ಮಾಡು ಕಂಡ್ಯಾ ॥೫॥ ನಾವೀನ ಮುಕ್ತರಿಗೊದಗುವ ಬಾಗಿಲ ಕುನ್ನಿ ಮಾಡು ಕಂಡ್ಯಾ ಕೃಷ್ಣಾ ॥ ಗೋವಿಂದ ಗೋವಿಂದೆಂದು ಬೀದಿಲೊದರುವ ಕತ್ತೆ ಮಾಡು ಕಂಡ್ಯಾ ॥ ೬ ॥ ಹರಿ ನಿರ್ಮಾಲ್ಯ ಕಸ್ತೂರಿ ಕರ್ದಮದ ಪತ್ರಿ ಮಾಡು ಕಂಡ್ಯಾ ಕೃಷ್ಣಾ ॥ ಸರಗಾಮೃತ ತಟವಾಪಿಯ ಮೀನವ ಮಾಡು ಕಂಡ್ಯಾ ॥ ೭ ॥ ಬಾಡಿ ಕೆಡದ ಪುಷ್ಪಲತೆ ತರುಗುಲ್ಮವ ಮಾಡು ಕಂಡ್ಯಾ ಕೃಷ್ಣಾ ॥ ನೋಡಿ ಸ್ವಾನಂದದಿ ಜಿಗಿದಾಡುವ ಕಪಿಯ, ಮಾಡು ಕಂಡ್ಯಾ ॥ ೮ ॥ ನಾಕಕೈವರ ಸಂಗತಿ ಬಿಟ್ಟಗಲದಂತೆ, ಮಾಡು ಕಂಡ್ಯಾ ॥ ಆಕಾಂಕ್ಷವಿಲ್ಲದುಗ್ಘಡಿಪ ಭಟನನ್ನೇ ಮಾಡು ಕಂಡ್ಯಾ ॥ ೯ ॥ ಮಣಿಮಯ ಭಿತ್ತಿ ಸೋಪಾನ ವಿತಾನವ ಮಾಡು ಕಂಡ್ಯಾ ಕೃಷ್ಣಾ ॥ ತೃಣ ಮುಕ್ತಾದವರೊಳಗೊಂದಾರೆ ಜಾತಿಯ ಮಾಡು ಕಂಡ್ಯಾ ॥ ೧೦ ॥ ಜ್ಞಾನಾನಂದಗಳ ಯೋಗ್ಯತೆ ನೋಡಿ ಕೂಡುವಂತೆ ಮಾಡು ಕಂಡ್ಯಾ ನೀ ॥ ದಾನಕ್ಕೆ ಮೊಗದೋರಿ ಕೈವಲ್ಯಪುರಾಗಾರ ಮಾಡು ಕಂಡ್ಯಾ ॥ ೧೧ ॥ ಈ ಪರಿ ಬಿನ್ನಹವಾಲಿಸಿ ಭವದೂರ ಮಾಡು ಕಂಡ್ಯಾ ಕೃಷ್ಣ ॥ ಶ್ರೀ ಪ್ರಸನ್ವೆಂಕಟಪತಿ ಬಿಂಬಾತ್ಮಕ ಕೃಪೆ ಮಾಡು ಕಂಡ್ಯಾ ॥ ೧೨ ॥

೧೨೫

ರಾಗ— ಆನಂದಭೈರವಿ ತಾಳ — ಝಂಪೆ

ಮತ್ತವ ನಾನಲ್ಲೊ ಮುರಾರಿ ನಿನಗೆ ನಾ ॥ ಮತ್ತವನಲ್ಲೊ ಮುರಾರಿ ॥ ಪಲ್ಲ ॥ ನಿನ್ನ ಭೃತ್ಯರ ಭೃತ್ಯರ ಭೃತ್ಯರ ಭೃತ್ಯನಿಗೆತ್ತಣ । ಸ್ವಾತಂತ್ರ್ಯ ಸಲಹೆನ್ನ ಶೌರೀ ॥ ಅ. ಪಲ್ಲ ॥ ರಂಗ ನೀ ಕೊಳ್ಳದ ಬಂಗಾರ ತಳಿಗೂಟಾ ನುಂಗುವ ಮತ್ತವ ನಾನಲ್ಲಾ । ರಂಗ ನಿನ್ನನು ಮರದಂಗನಿಯರನು ಆಲಂಗಿಪ ನಾ ಮತ್ತವನಲ್ಲಾ । ರಂಗ ನಿನ್ನಂಘ್ರಿಯ ಡಿಂಗರರಂಘ್ರಿಗೆರಂಗದ ನಾ ಮತ್ತವನಲ್ಲಾ ॥ ರಂಗ ನಿನ್ನೆಂಜಲೆನ್ನಂಗೈಯೊಳುಂಡು ರಾ । ಜಂಗಳನುಡುಗುವ ಬಡವ ನಾನಲ್ಲದೆ ॥೧॥ ನಾಥಾನೆ ನಾನೆಂಬ ಮಾತು ಕಲಿತು ಖಿಳವ್ರಾತ ಸಂಗದಿ ಮತ್ತವನಲ್ಲಾ। ನಾಥಾ ನಿನ್ನನು ಮೀರಿದಾತನುಂಟೆಂದು ನಿರ್ಭೀತಿಲಿರುವ

ಮತ್ತವನಲ್ಲಾ || ನಾಥಾ ನಿನ್ನಯ ಸ್ತುತಿ ಖ್ಯಾತಿ ಪೊಗಳದನ್ಯಸ್ತೋತ್ರದಿ ನಾ ಮತ್ತವನಲ್ಲಾ || ನಾಥಾ ನಿನ್ನಡಿಯ ತೀರಥವೆ ಗತಿ ಯಮಯಾತನೆಗಂಜುವ ಬೆದರುಗುಳಿಯಲ್ಲದೆ || ೨ || ತಂದೆ ನೀ ಮಾರಿದರೊಂದೊಪ್ಪ ಕೊಂದರೊ-ಪ್ಪೆಂದಿಗೆ ನಾ ಮತ್ತವನಲ್ಲಾ | ತಂದೆ ನಿನ್ನಯ ಮನೆ ಹಿಂದಂಗಣದೊಳೊಯ್ದು ಬಂಧಿಸು ನಾ ಮತ್ತವನಲ್ಲಾ | ತಂದೆ ನಿನ್ನಾಯುಧ ಸಂದು ಸಂದಿಗೆ ಕಾಸಿ ಕಂದಿಸು ನಾ ಮತ್ತವನಲ್ಲಾ || ತಂದೆ ಪ್ರಸನ್ವೆಂಕಟೆಂದಿರೇಶಿನ್ನಾರ ಹೊಂದದ ಸೊಕ್ಕೊಂದೆ ಉಳ್ಳವನಲ್ಲದೆ || ೩ ||

೧೨೬

ರಾಗ—ದನ ಶ್ರೀ ತಾಳ—ಅಟ್ಟ

ಯಾತರ ಭಗ್ನತೆ ಯಾತರ ಭಕುತಿ ಶ್ರೀ | ನಾಥಾಂಘ್ರಿ ವಿಮುಖಾದ ಪಾತಕನಿಗಯ್ಯಾ || ಪಲ್ಲ || ಕಪಟನಾಟಕ ಸೂತ್ರಿ ಅನಂತ ಗುಣಿ ನಿತ್ಯ | ತೃಪಿತ ಮುಕುತ ನಿತ್ಯ ಸ್ವಾತಂತ್ರ್ಯಗೆ || ಉಪಾಧಿ ಸುಗುಣನೆಂದನಾದಿ ನಿರ್ಗುಣ ನೆಂದು | ಉಪಾಸನೆವಿಡಿದ ಸೋಹಂಭಾವದವಗೆ || ೧ || ಅಪುಶಾಯಿ ಅಗಣಿತ ಆನಂದ ಬ್ರಹ್ಮಾದಿ | ತಪಸಾರ ರಸದ ಪುರುಷೋತ್ತಮನಿಗೆ || ಉಪಚಾರಕ್ಷರಿ ಯೆಂದು ಹರಕರ್ಮರವಿ ಗಣಾ | ಧಿಪರೆ ಉತ್ತಮರೆಂಬ ಕಪಟ ಮಾನಿಸಗೆ || ೨ || ಪೂರ್ಣ ಪ್ರಜ್ಞರ ಮತದ ನವ ಮಹಾಭಕುತಿಗಳ | ನಿರ್ಣಯದಲಿ ತರತಮವಿಲ್ಲದೇ || ಅರ್ಣವ ಕಲಿಕೆಸನ್ನಾಕಾಶ ಚಲಿಸೇನು ? | ಪೂರ್ಣ ಪ್ರಸನ್ವೆಂಕಟೇಶನೊಪ್ಪಿರದೇ || ೩ ||

೧೨೭

ರಾಗ—ಘಂಟಾರವ ತಾಳ—ಅಟ

ವೆಂಕಟೇಶನ ಮಹಿಮೆಯಾ ಹೊಗಳುವಾ | ಕಿಂಕರಾ ಧನ್ಯನಯ್ಯಾ || ಪಲ್ಲ || ಇಳಿಯ ಭಕ್ತರ ನೋಡಿದ ವೈಕುಂಠದಿಂ | ದಿಳಿದು ಶ್ರೀ ಸಹಿತ ಬಂದು || ಸಲೆ ಸುವರ್ಣ ಮುಖರಿಯಾ, ತೀರದಿ | ಒಲಿದು ನಿಂತನು ತಿಮ್ಮಯ್ಯಾ || ೧ || ಭೂವರಾಹ ಸ್ವಾಮಿಯು ಸನ್ನಿಧಿಲಿ | ಶ್ರೀವತ್ಸಲಾಂಛ-ನೀಹ || ಶ್ರೀ ವಿಮಾನದ ಸಹಿತ, ದೇವಾದಿ | ದೇವ ತಾನಿಲ್ಲಿ ನಿಂತ || ೨ ||

ಸ್ವಾಮಿ ಪುಷ್ಕರಣಿಯೆಂಬ ತೀರ್ಥದ । ನಾಮದಾ ಮಹಿಮೇನೆಂಬೆ ॥ ಆ ಮಹಾ ದುಷ್ಕೃತವು, ಸ್ನಾನದ । ನೇಮದಲ್ಲೋಡುವವು ॥ ೩ ॥ ರಾಜಾಧಿರಾಜ ನಿತ್ಯ, ಉಪಚಾರ ॥ ಪೂಜೆ ಲೋಕಾರ್ಥ ಕೊಳುವ । ಮೂಜಗಕಾನಂದವ ವರ ಕರು । ಣಾಜಲಧಿ ನಿಂದು ಕೊಡುವಾ ॥ ೪ ॥ ನಿತ್ಯಾ ಸ್ವಾರಿ ಗೈದುವ, ಸುರ ಋಷಿ । ಮೊತ್ತದಿ ಚರಿಪ ದೇವ ॥ ಮತ್ತೆ ಲಕ್ಷ್ಮಿಕೂಡ ಮುನಿವ ದೊಂ । ದರ್ಥಿಯಲಿ ಬುಧರು ನೋಡ ॥ ೫ ॥ ನುಡಿವ ಸಾವಿರ ಘಂಟೆ ಉಬ್ಬುಬ್ಬಿ । ಹೊಡೆವ ಕೊಡೆ ಜಾಂಗಗುಟೆ ॥ ಬಡಿವಾ ಕರಡೆ ಭೇರಿಯು, ಮುಂದೆ ಉ । ಘ್ಘಡಿಪ ಸಾಮಗಾನವು ॥ ೬ ॥ ಚಿತ್ರಾವರ್ಣದ ಸೇವೆಗೆ ಸಾಲ್ಗಳು । ಸುತ್ತಲು ಕೈದೀವಿಗೆ ॥ ಉತ್ತಮ ವಾಹನವೇರಿ ವಿಶ್ವದಾ । ಕರ್ತಾ ಬಂದನು ಉದಾರಿ ॥ ೭ ॥ ಉದಯಾಸ್ತ ಮಾಲೆಸೇವೆ, ಪುಳಕಾಪು । ಮೊದಲಾದ ದಿವ್ಯ ಸೇವೆ ॥ ಒದಗಿದ ವಸನಂಗಳು, ನೈವೇದ್ಯ । ಮೃದು ಭಕ್ಷ ವರ ಪೊಂಗಲು ॥ ೮ ॥ ಅತಿರಸ ಮನೋಹರವು, ದಧ್ಯಾನ್ನ । ಅತಿ ರುಚಿ ಅನ್ನವಲವು ॥ ಕ್ಷಿತಿಯ ಮೇಲಿಹ ಭಕ್ತರು, ಶ್ರೀ ಲಕ್ಷ್ಮೀ । ಪತಿಗೆ ಅರ್ಪಿಸುತಲಿಹರು ॥ ೯ ॥ ಹೂವ್ವಿನಂಗಿಯನು ತೊಡುವ ಮೃಗಮದ । ಲಾವಣ್ಯ ತಿಲಕವಿಡುವ ॥ ಕಾವಾನಂತರ ತೇಜವ, ಗೆಲ್ಲುವ । ಸಾವಿರ ಹೆಸರ ದೇವ ॥ ೧೦ ॥ ತಪ್ಪದೆ ನುಡಿದಂದನು, ಮುಡಪಿನ । ಕಪ್ಪವೆಣಿಸಿಕೊಂಬನು ॥ ಛಪ್ಪನ್ನ ದೇಶಸ್ಥರು, ಬಂದು ಸ । ಮರ್ಪಣೆ ಮಾಡುವರು ॥ ೧೧ ॥ ಕೊಟ್ಟ ವಾಕ್ಯಕೆ ತಪ್ಪನು, ವರಾಭಯಾ । ವಿಟ್ಟು ಸಾಕುತಲಿಪ್ಪನು ॥ ಇಷ್ಟಾರ್ಥವಗೈವನು, ವಿಶ್ವದ । ಶಿಷ್ಟರೊಡೆಯ ತಿಮ್ಮನು ॥ ೧೨ ॥ ಕಿರೀಟ ಕುಂಡಲವಿಟ್ಟನು, ತಿಮ್ಮಯ್ಯಾ । ಕರುಣ ನೋಟದ ಚಲ್ವನು ॥ ಅರಿ ಶಂಖಾವನು ಧರಿಸಿದ । ಹಾರ ಕೇಯೂರ ಕೌಸ್ತುಭದೊಪ್ಪಿದ ॥ ೧೩ ॥ ತೋಳಬಂದಿಯು ಕಂಕಣ ಮುದ್ರಿಕೆ । ಕೀಲು ಕಡಗಾ ವಡ್ಯಾಣ ॥ ನೀಲ ಮಾಣಿಕ ಪಚ್ಚದ, ಮುತ್ತಿನ । ಮಾಲೆಗಳಿಂದೊಪ್ಪಿದ ॥ ೧೪ ॥ ಮಣಿಮಯದ ಕವಚ ತೊಟ್ಟು ಗಳದಲಿ, ಮಿನುಗುವಾಭರಣವಿಟ್ಟು ॥ ಕನಕ ಪೀತಾಂಬರುಟ್ಟು, ಕಟಿಯಲ್ಲಿ । ಅಣು ಘಂಟೆಗಳೆಸೆದವು ॥ ೧೫ ॥ ರನ್ನದಂದುಗೆನಿಟ್ಟಿಹ ಪಾದಕೆ । ಪೊನ್ನಾವುಗೆ ಮೆಟ್ಟಿಹ ॥ ಘನ್ನ ದೈತ್ಯರ ಸೋಲಿಪ, ಬಿರದಿನ । ಉನ್ನತ ತೊಡರಿನಪ್ಪಾ ॥ ೧೬ ॥ ದಿನಕೆ ಸಾವಿರ ಪವಾಡ ತೋರುವ । ಜನಕೆ ಪ್ರತ್ಯಕ್ಷ ನೋಡ ॥

ಘನಶಾಮ ತಿರುವೆಂಗಳ, ಮೂರ್ತಿಯ । ಮನದಣಿಯೆ ಹೊಗಳಿರೆಲ್ಲಾ ॥ ೧೭ ॥ ಭೂ ವೈಕುಂಠಾವಿದೆಂದು, ಸಾರಿದ । ಭಾವಿಕ ಭಕ್ತ ಬಂಧು ॥ ಶ್ರೀವಾಯು-ಜಾತ ವಂದ್ಯ ಶ್ರೀವಾಸ । ಗೋವಿಂದ ನಿತ್ಯಾನಂದ ॥ ೧೮ ॥ ಸೇವಕ ಜನರ ಪ್ರೀಯಾ ಅರುಣರಾ । ಜೀವಲೋಚನ ತಿಮ್ಮಯ್ಯಾ ॥ ದೇವ ಶಿಖಾಮಣಿಯು ಬ್ರಹ್ಮಾದಿ, ದೇವರಿಗೆ । ಕಾವ ಗತಿಯೀವ ದೊರೆಯು ॥ ೧೯ ॥ ಕಶ್ಚಿಜ್ಜೀವನು ಎನ್ನದೆ ನನ್ನನು । ನಿಶ್ಚಯದಲಿ ಹೊರುವನು ॥ ಆಶ್ಚರ್ಯಚರಿತ ನೋಡಿ, ನಿಜ ಶರಣ । ವತ್ಸಲನ ಬಲು ಕೊಂಡಾಡಿ ॥ ೨೦ ॥ ಆರಾಶ್ರಯವಿಲ್ಲೆನಗೆ, ದ್ರಾವಿಡ ವೀರನೇ ಗತಿಯು ಕೊನೆಗೆ ॥ ಭೂರಿ ಪ್ರಸನ್ವೆಂಕಟಪತಿ, ಪಾದಪದ್ಮ ಆರಾಧಿಸಿರಿ ದಿನಂಪ್ರತಿ ॥ ೨೧ ॥

— ಶ್ರೀಗುರು ಮಧ್ವೇಶಾರ್ಪಣಮಸ್ತು —

೧೨೮

**ರಾಗ—ಸಾವೇರಿ** **ತಾಳ—ಆದಿ**

ಸುರರಾಜ ಪೂಜಿತ ರಾಜ । ಪಂಕೇಜಸಖಶತಸುತೇಜ ॥ ಪಲ್ಲ ॥ ಶ್ರೀಸುತ ಶ್ರೀನಿಧೆ ದೀನ ದಯಾನಿಧೆ । ಜ್ಞಾನ ವಿಹೀನನ ನೀನೇ ಪೊರೆಯೋ ॥ ೧ ॥ ಜೀಮೂತ ಶಾಮಲ ರಾಮ ಶುಭಾಮಲ ॥ ನಾಮನೆ ಸಾಮಜ ಪೊರೆದನೆ ಸಲಹೋ ॥ ೨ ॥ ದೋಷ ವಿನಾಶ ಪರೇಶಾಮರೇಶನೆ ॥ ಶೇಷ ವರಾಸನ ಕೇಶವನೆ ನಮೋ ॥ ೩ ॥ ದೂಷಕ ಭೀಷಣ ವಾಸವ ಪೋಷಕ ॥ ತೋಷ ವಿಕಾಶ ವಿಹಾಸ ಜಯತೂ ॥ ೪ ॥ ಪಶುಪತಿ ವಿಷಹರ ಶಶಿ ನಿಭ ಬಂಧುರ ॥ ಪ್ರಸನ್ವೆಂಕಟೇಶ ಕರುಣಶರಧಿ ಸುಂದರ ॥ ೫ ॥

೧೨೯

**ರಾಗ—ಕಾಪಿ** **ತಾಳ—ತ್ರಿವಿಡಿ**

ಹೊಂದು ಹೊಂದು ಹರಿ ಪಾದವಾ ॥ ಪಲ್ಲ ॥ ಮಾತುಳನ ಚಂದನ । ಪ್ರೀತಿಲಿ ಕೊಟ್ಟು ಮನ ॥ ನೋತವಳ ತನು ಪು । ನೀತ ಮಾಡಿದನಂಘ್ರಿ ॥ ೧ ॥ ಅಜಮಿಳ ಸಹಜ ತ । ನುಜನ ಕರೆಯಲಾಗಿ ॥ ನಿಜ ಭಟ್ಟರಟ್ಟಿದ ।

ಸುಜನೇಶನಂಘ್ರಿಯು ॥ ೨ ॥ ಹೊಂದಿದವರವಗುಣವ । ನೊಂದೂ ನೋಡದೆ ಹೊರೆವ ॥ ತಂದೆ ಪ್ರಸನ್ವೆಂಕಟೇಂದ್ರನ ಅಂಘ್ರಿಯು ॥ ೩ ॥

೧೩೦

## ಸಖ್ಯಭಾವದ ಪದಗಳು

ರಾಗ—ದೇಸಾಕ್ಷಿ ತಾಳ—ಝಂಪಿ

ನೀ ನೋಡುವದು ಉಚಿತಲ್ಲೋ ಕೃಷ್ಣಯ್ಯಾ। ನಾನಾ ದುಃಖಗಳುಂಡು ದಣಿದೆ ನಮ್ಮಯ್ಯಾ ॥ ಪಲ್ಲ ॥ ಮಜ್ಜ ಮಾಂಸವು ರುಧಿರ ಮಲಮೂತ್ರ ಕುಂಡದಿ ಮಜ್ಜನವ ಮಾಡುತ ಬಸರೊಳಗೆ ॥ ಜರ್ಜರಿತನಾದೆ ನಾ ಲೆಖ್ಖವಿಲ್ಲದ ಜನುಮ । ದಬ್ಬವಾನೆಂದು ತೊಲಗಿಸುವಿಯೋ ರಂಗಾ ॥ ೧ ॥ ಎರವು ತಂದಿರುವ ಸಂಸಾರದ ಸುಖದೊಳು । ಉರಿ ಮೂರು ಬೆರತೆನ್ನ ದಹಿಸುತಿದೆ ॥ ತರಳ ಯವ್ವನ ಮುಪ್ಪಿಲ್ಯಾರೊಮ್ಮೆ ಚಿತ್ತಾವು । ಸ್ಥಿರವಾಗದಿನ್ನೇನು ಗತಿ ಚಿಂತಿಸಿದೆ ॥ ೨ ॥ ಯಮ ಬಂಟರುಪಟಳ ನಿನ್ನಾವರಾದರೆ । ಕ್ರಮವಾಚರಿಸರು ಕರುಣಾಂಬುಧಿಯೆ ॥ ರಮೆಯ ರಮಣ ಶ್ರೀಪ್ರಸನ್ನವೆಂಕಟ ಕೃಷ್ಣ । ನಮಿಪ ಭಕ್ತಿಬಂಧೋ ಶ್ರಮವಬಿಡಿಸದ್ದೀಗೆ ॥ ೩ ॥

೧೩೧

ರಾಗ—ತೆಲಗ ಕಾಂಜೋದಿ ತಾಳ—ಅಟ್ಟ

ನೀ ಸಾಕದಿದ್ದರೆ ಸಾಕುವರಾರೋ । ದಾಸಾಭಿಮಾನಿ ನೀನಲ್ಲದಿನ್ಯಾರೊ ಕೃಷ್ಣಾ ॥ ಪಲ್ಲ ॥ ನಿನ್ನವರನು ಬಾಧಿಸಬಂದ ಮೂರ್ಖರು । ಮೊನ್ನೆ ದುರ್ಭಾಗ್ಯರಾಗಿ ಹೋದರೂ ॥ ಕುನ್ನಿಕಚ್ಚಿದರಾನೆ ಅಳುಕುವದೇ ರಂಗಾ । ಎನ್ನ ನಂಬಿಗೆಯ ಮೂರುತಿ ಶ್ರೀನಿವಾಸ ॥ ೧ ॥ ಹಸಿದು ಮಳಲ ಮೆದ್ದವನಂತೆ ಕಂಗೆಟ್ಟು । ತೃಷೆಯಾಗಿ ಬಿಸಿಲ್ದೊರೆಗೋಡುವಂತೆ ॥ ವಿಷಮ ಮಾನಿಸರನ್ನು ಸರಿಸುವುದುಚಿತಲ್ಲಾ । ಬಿಸಜದೇವಿಯರಸೆ ಸುದಾಮನಘ ಭಂಗ ॥ ೨ ॥ ಬಂಟರ ಮಾತುಕೇಳದೆ ಭಾರತಾಳದೇ । ನುಂಟು ಕಾರ್ಯವು ನಿನಗೆಲೇದಯಾಳು ॥ ಕಂಟಕ ಜನಕುಪಕಾರಿ ದಿನೇಶಾ ವೈ । ಕುಂಠ ವಲ್ಲಭ ಪ್ರಸನ್ವೆಂಕಟ ಬಂಧು ॥ ೩ ॥

೧೩೨

ರಾಗ—ಬಹಿರಿ ತಾಳ—ತ್ರಿವಿಡಿ

ಭಂಡ ಮಾಡಿದರು ಬೆಣ್ಣೆಗಳ್ಳಾ ಈ । ಪುಂಡತನವು ನಿನಗೆ ಸಲ್ಲಾ, ಪರ ॥ ಹೆಂಡಿರೆಳೆಯಾದಿರೊ ಹೀಗೆಲ್ಲಾ, ಅತ್ತೆ । ಕಂಡರೆ ಕೊಲ್ವಳೊ ಗೋಪಿನಲ್ಲಾ ॥ ಪಲ್ಲ ॥ ನೀರೆಯರೊಳಾಟವು ತರವಲ್ಲಾ ನಗ । ಬಾರದು ಪರಾಂಗನೆಯರೊಳು ಚಲ್ವಾ ॥ ವಾರಿಜಾಕ್ಷೆಯರಪ್ಪಿ ಎತ್ತಿ ಸೊಲ್ಲ ಕೂಗ । ದಿರೋ ಬಾಗಿಲದಿಹ ಮಾವ ಹೊಲ್ಲಾ ॥೧॥ ಹೆಚ್ಚಿಫ್ಹೆಚ್ಚಿಫ್ಚುಚ್ಚುಮಾಡಿದೆಲ್ಲಾ ನಿನ್ನ। ಇಚ್ಛೆದೊಳು ಕರುಣಿಸಲಿಲ್ಲಾ ॥ ಸ್ವಚ್ಛ ರಾಜ್ಯದಿ ಜಾರವೃತ್ತಿಯಲ್ಲಾ । ನಮ್ಮಲಜ್ಜೆ । ಸ್ವೇಚ್ಛ ಸೂರಾಡಿದೆಂಜಿಕಿಲ್ಲಾ ॥ ೨ ॥ ಬುದ್ಧಿ ಸತ್ಯ ಮಾತು ಮಿಥ್ಯವೆಲ್ಲಾ ಪೂರ್ಣ। ಶುದ್ಧ ನಂಬಿದೆವೊ ಮಾತು ಸಲ್ಲ ಇನ್ನು । ಸದ್ದು ಮಾಡದೆ ಕೊಡುವೆವೆಲ್ಲ ನಮ್ಮ। ಮುದ್ದಿಸೋ ಪ್ರಸನ್ವೆಂಕಟನಲ್ಲಾ ॥ ೩ ॥

೧೩೩

ರಾಗ—ಬಹಿರಿ ತಾಳ—ಆದಿ

ಸಿಕ್ಕಿದೆ ಬಾರೆಲೆ ಹೇ ಕಳ್ಳಾ । ನಿನ್ನ ಚೊಕ್ಕ ಸಹಸಾ ಜರಿವಳಲ್ಲಾ । ಭಕ್ಕುತೀಲಿ ಕಟ್ಟುವೆ ಈರಡಿಯಾ । ನಡೆ ಅಕ್ಕ ಗೋಪೆಮ್ಮನಿದ್ದಡಿಯಾ ॥ ಪಲ್ಲ ॥ ಮುನ್ನಿನಪರಾಧಗಳ ತಾಳ್ದೆ, ನಾ । ನಿನ್ನ ಧಿಟ್ಟತನದ ಭಯದೆ । ಚಿನ್ನನೆನಬಹು ದೇನೋ ನಿನಗೆ ಬಹು । ಬಣ್ಣಿಸಿ ಕೈ ಹಾಕಿದೆ ಮೊಲಿಗೆ ॥ ಉನ್ನತ ಗೋಡೆಗೆ ನಿಚ್ಚಣ್ಣಿಕೆ ಇಕ್ಕಿರದೆ । ಘನ್ನಪಾಲು ಮೊಸರು ಗೋಪರೊಡನೆ ಸವಿದೆ । ಉನ್ನತ ಮಹಿಮೆಯೆತ್ತ ಘನ್ನ ಜಾರತನವೆತ್ತ । ಬೆನ್ನ ಬಡಯುತ ನಗೆ ಬಿಡದಿಹ ಕಳ್ಳಾ ॥ ೧ ॥ ಸರಿ ಮಧ್ಯದಬಲೆಯರೆಳೆದೆ, ಪಂಚ । ಶರನ ಶರಕೆ ತೆಗಳಿದೆ । ಹರವಿನಷ್ಟಾದರೆನಗಿದೆ ಈಗ । ಕರೆದರೆ ಬರದಲೆ ಜಿಗಿದೆ ॥ ಚೋರತನವ್ಯಾಕೆ ಗಂ । ಭೀರತನವ್ಯಾಕೆ ಪರಿ । ಪರಿ ಹಲವಂಗವ್ಯಾಕೆ । ವರ ಮಾತುಗಳ್ಯಾಕೆ । ಶಿರಿಕಾಂತನಾದುದೆತ್ತ । ದುರುಳತನಗಳೆತ್ತ । ಕ್ರೂರ ಮುಖದಂಜಿಸಲು ಬಿರಿದು ಪೋಯಿತಲಾ ॥ ೨ ॥ ತೊಂಡ ಮಕ್ಕಳ ಬಲವಾ ನೋಡ್ದೆ ಬಲು । ಪುಂಡನಂತೆ ಕದನವನಾಡಿದೆ । ಭಂಡತನದಲೊಬ್ಬನ ಬಡಿದೆ ದೊಡ್ಡ । ಗಂಡಿಸಿನಂದದಿ

ಮೇಲೋಡಿದೆ ‖ ಗಂಡಸುಳ್ಳ ಬಾಲೆಯರ ಸದನಕೆ ಗಮಿಸಿ ಪ್ರ । ಚಂಡತನದಿ ಮಿಂಡ ವೆಣ್ಣಗಳ ಪಿಡಿದೇ । ಥಂಡ ಥಂಡದೊಳು ಮುದ್ದು ಕೊಡಲಿಸದಿರರು ಬೊ । ಮ್ಮಾಂಡಪತಿಯಾದರಿದು ಸಲುವದೆ ಕಳ್ಳಾ ‖ ೩ ‖ ಉತ್ತುಮಾ ಮರನೆರಳಾ ನೋಡಿದೆ। ಮರ ಹತ್ತುತಲೆ ಶಾಲೆಯು ಕೊಂಡೋಡಿದೆ। ಸುತ್ತಲಿಹ ಗೋಪೇರ ಬೇಡಿದ್ದೆ । ಅವರೆತ್ತಿ ಕೊಡದಿರೆ ಹಗೆವಿಡಿದೆ ‖ ಮತ್ತು ಮಾವಾನೊತ್ತಿ ಒಲಿದು ಮುತ್ಯಾನ ಕೈವಿಡಿದೆ । ಕತ್ತಲೆ ಹಕ್ಕಿಯ ಮಾಡಿ ದಿತಿಜರನರದೆ । ಎತ್ತಣ ವೈಕುಂಠ ನಿನಗೆತ್ತಣಾನಂತಾಸನವೋ । ಭಕ್ತರಾ ಕಾಯ್ದೆ ಆವ ಪಟ್ಟ-ಲಿಹೆ ಕಳ್ಳಾ ‖ ೪ ‖ ಪೊಂದುಡುಗೆಯೊಡನೆ ನಡುವಿರಳೆ ಬರೆ । ಕುಂದದೆ ವ್ರತಗೆಟ್ಟಳೆನುತಲೆ । ಛಂದವೇನೋ ನಿನಗೀವಾಜೆರಲೆ ಗೋ । ವಿಂದೆರಡು ಕೈ ಕಟ್ಟಿ ತರಲೆ ‖ ಒಂದೊಂದುಸುರಿಲೆ ನಿನ್ನಾನಗುಣ ಮಾಣಿಕದ ಖಣಿ । ಅಂಥರಿ-ಗರಿವುದೇ ಪ್ರಸನ್ವೆಂಕಟೇಶ । ಮಂದರಾಘಾರಂಧ್ರಾವಳಿ ಪೊಂದಿಸಿ ನೋಡ ಲಾಗದು । ಇಂದಿರರಸನೇ ದಾಸವೃಂದವನು ಪೊರೆಯ್ಯೆ ‖ ೫ ‖

೧೩೪

## ವಾತ್ಸಲ್ಯಭಾವದ ಪದಗಳು

ರಾಗ—ರೇಗುಪ್ತಿ ತಾಳ—ಆದಿ

ಅಮ್ಮ ಕೇಳೆ ಯಶೋದಮ್ಮಾ ಗೋಪಿಯರೆನ್ನ ‖ ಸುಮ್ಮನೇ ದೂರು-ತಿದ್ದಾರೆ ಬುದ್ಧಿ ಹೇಳೆ ಇವರಿಗೆ ‖ ಪಲ್ಲ ‖ ನಾನೊಲ್ಲೆನೆಂದರೂ ಗೋಪಮ್ಮಾ-ವರೆತ್ತಿಕೊಂಬರು । ಆನಿಯಾಡಬಾರೊ ರಂಗಯೆಂದೆನ್ನನೋಯಿದು ‖ ನಾನಾಗಿ ಗೋರಸವನ್ನು ಕೊಟ್ಟರುಣ್ಣದೆ ಚೆಲ್ಲುವೆ । ನೀನಣ್ಣನ ಕರೆದು ಕೇಳೆ ಗೋವಳೇರ ಠಕ್ಕ ಡೌಲು ‖ ೧ ‖ ಸಾಸಿರನ ಬಿಸಿಲಿಲಿ ಬೆಣ್ಣೆ ಕೂಸುಗಳು ಮೆಲ್ಲೋದುಂಟೆ । ಹೇಸಿಕೆ ಬರುತಿದೆ ಆವರ ಮೊಸರ ಕಡುವುದು ‖ ಮೊಸಲಾ ಮುರಿದಾರೆ ಆವರು ಚಟ್ಟಿಗೆ ಕೊರಳಿಗೆ ಕಟ್ಟೆ । ಹಾಸ್ಯದೊಳು ಮಾತನಾಡಿ ಮೋಸ ಮಾಡುತಿಹ-ರಮ್ಮಾ ‖ ೨ ‖ ತಮ್ಮ ಮಕ್ಕಳುಪಟಳ ನನ್ನಮ್ಯಾಲಿಕ್ಕುತಿಹರು । ತಮ್ಮ ನಲ್ಲರಾ ಕಾಟವು ನನ್ನದೆಂಬರು ‖ ನಿಮ್ಮ ಮಕ್ಕಳ ಗುಣವ ನೀ ಬಲ್ಲೆ ನಂದನ ರಾಣಿ । ಗುಮ್ಮನಂಜೀಕೀಗೆ ಮನೆಯೊಳಿಹೆ ಪ್ರಸನ್ವೆಂಕಟ ‖ ೩ ‖

೧೩೫

ರಾಗ—ದೇಸಾಕ್ಷಿ ತಾಳ—ಆದಿ

ಅಮ್ಮಾ ಬಾರೊ ರಂ | ಗಮ್ಮಾ ಬಾರೊ, ಪುಟ್ಟ || ತಮ್ಮ ಬಾರೊ, ಮುದ್ದಿ | ನುಮ್ಮ ತಾರೋ || ಪಲ್ಲ || ಅಯ್ಯಾ ಬಾರೊ ಅಜ | ನಯ್ಯಾ ಬಾರೋ, ಚಿನು || ಮಯ್ಯಾ ಬಾರೋ ಬೆಣ್ಣೆ | ಗಯ್ಯಾ ಬಾರೋ || ೧ || ಕಂದ ಬಾರೋ ಪೂರ್ಣ | ನಂದ ಬಾರೋ, ಸುರ || ವಂದ್ಯಾ ಬಾರೋ ಬಾಲ್ಮು | ಕುಂದಾ ಬಾರೋ || ೨ || ಅಣ್ಣಾ ಬಾರೋ ತಾವರೆ | ಗಣ್ಣಾ ಬಾರೋ ಎನ್ನ || ಚಿನ್ನಾ ಬಾರೋ ಶಿಶು | ರಂನ ಬಾರೋ || ೩ || ನಲಿದು ಬಾರೋ ಕರುಣಾ | ಜಲಧಿ ಬಾರೋ ಆಡಿ || ಬಳದೆ ಬಾರೋ ಕರೆದ | ರೊಲಿದು ಬಾರೋ || ೪ || ಶ್ರೀಶಾ ಬಾರೋ ಹಸು | ಗೂಸೆ ಬಾರೋ ಪರಿ || ತೋಷಾ ಬಾರೋ ಪ್ರಸನ್ವೆಂಕ | ಟೇಶ ಬಾರೋ || ೫ ||

೧೩೬

ರಾಗ—ಕಾಫಿ ತಾಳ—ಝಂಪೆ

ಅಳದಿರೊ ಸುಮ್ಮನಿರಮ್ಮಾ ನೀ | ಅಳದಿರೊ ಬವ್ವ ಬಂದಾವವಮ್ಮಾ ಕೃಷ್ಣಮ್ಮಾ || ಪಲ್ಲ || ನಾಲಕು ಮೊಗವುಳ್ಳ ಬವ್ವ ಹದಿ | ನಾಲ್ಕು ಮೊಗವ ಜೋಳಿಯಲಿಟ್ವಾ ಬವ್ವ || ಘೋಳಿಟ್ಟಿಸುತ್ತಿದೆ ಬವ್ವ ನಿನ್ನ | ಕಾಲು ಕಂಡರೆ ಕಚ್ಚಿಕೊಂಡೊಯ್ವಾ ಬವ್ವ || ೧ || ಗಗನ ತುಂಬ್ಯಾಡುವ ಬವ್ವ ಪ್ರಾ | ಣಿಗಳ ದೇಹವ ಪೊಕ್ಕು ಚೇಷ್ಟಿಪಾ ಬವ್ವ|| ಜಗವನಲ್ಲಾಡಿಪ ಬವ್ವ ನಿನ್ನ| ಮೊಗವರಿತು ದೂರಿಲಿ ನಿಂತಿಪ್ಪ ಬವ್ವ || ೨ || ಮೊಗವೈದು ಪಣೆಗಣ್ಣ ಬವ್ವ, ಪುಲಿ | ದೊಗಲು ಕೆಂಜೆಡೆ ರುಂಡಮಾಲಿಯ ಬವ್ವ || ಬಗೆಯಿಂದಾ ಪೆಣ್ಣೆತ್ತಿ ಬವ್ವ ತಾ | ಸೊಗಸೀಲೆ ರಾಮ ರಾಮೆನುತಿದೆ ಬವ್ವ || ೩ || ಮೈಯ್ಯಲ್ಲಾ ಕಣ್ಣೀನ ಬವ್ವ | ತನ್ನ ಕೈಯಲ್ಲಿ ವಜ್ರವ ಬೀಸುವ ಬವ್ವ || ಉಯ್ಯಾಲಾಡುತಲಿದೆ ಬವ್ವ, ನಿನ್ನ | ಒಯ್ವೆನೆನುತ ಬಂತು ಹಲಕಾಲ ಬವ್ವ || ೪ || ಒಂದಲ್ಲ ನೂರಲ್ಲ ಬವ್ವ ನಿನ್ನ| ಮಂದಿರಾ ಸುತ್ತುತಾವಾನಂತ ಬವ್ವ || ಪೊಂದೊಟ್ಟಿಲೊಳು ನಿದ್ರೆಗಯ್ಯೆ, ಎನ್ನ| ತಂದೆ ಪ್ರಸನ್ವೆಂಕಟ ಸಿರಿಧೊರೆಯೇ || ೫ ||

೧೩೭

**ರಾಗ—ಕಾಫಿ** **ತಾಳ—ತ್ರಿಪುಟ**

ಆರ ಬಾಲಕನೆ? ಜಾರನಿವ । ನಾರ ಬಾಲಕನೇ ॥ ಪಲ್ಲ ॥ ಗುಂಡಿಗೆ ಬೆಣ್ಣೆ ಕದ್ದುಂಡು ಸ್ತ್ರೀಯರ ಕುಚ । ಪುಂಡರೀಕವಿಡಿದು ಭಂಡು ಮಾಡುತ-ಲಿಹನೇ ॥ ೧ ॥ ನಿದ್ದಿಯ ಕಾಲಕೆ ಸದ್ದಿಲ್ಲದೆ ಬಂದು ॥ ಗದ್ದಮುದ್ದಡಪಿ ಮುದ್ದು ನೀಡುವನಿವನೆ ॥ ೨ ॥ ಅರ್ಥಿಲಿ ಬಾಲನೆಂದೆತ್ತಿಕೊಂಡರೇನಮ್ಮಾ ॥ ಅತ್ತೆ ಮಾವನ ಮುಂದೆ, ಬತ್ತಲೆ ಮಾಡ್ವನಿವ ॥ ೩ ॥ ಬಲು ಮೋಹ ಬರು-ತಿದೆ ಎಳೆಯನ ಕಾಣುತ ॥ ಅಳುಕಾದೆ ಮುಡಿಯೇರಿ ಕಳೆವ ಕಂಚುಕನಿವ ॥ ೪ ॥ ಪುಸಿಯೇ ಆಳಲು ಅವಚಿದ ರಂಬಿಸಿ ವ್ಯಾಲೆ । ಪ್ರಸನ್ವೆಂಕಟ ಕೃಷ್ಣ ನಸುನಗುತಾನೆನಿವ ॥ ೫ ॥

೧೩೮

**ರಾಗ—ಪೂರ್ಯಾ** **ತಾಳ—ಆದಿ**

ಆವ ಪುಣ್ಯವೋ, ಗೋಪಿಗಾವ ಭಾಗ್ಯವೋ ॥ ಪಲ್ಲ ॥ ಆವ ಪರ ಬೊಮ್ಮಗ ತನ್ನ । ಕುವರನೆಂದು ಕರೆದು ಕೈಯ ॥ ಮಾರು ಬೀಸಿ ಬಿಗಿದಪ್ಪಿ । ಮೋರೆ ನೋಡಿ ಮೊಲೆಯ ಕೊಡುವಾ ॥ ೧ ॥ ಸಪ್ತಸಪ್ತ ಭುವನ ಜನಕ । ಸುಪ್ತಿಯಿಲ್ಲದೆ ಚರಿಸುವನಿಗೆ ॥ ಸುಪ್ತಿಕಾಲವೆಂದು ತಾನು । ಗುಪ್ತದಿಂದ ಸ್ತನವಕೊಡುವ ॥ ೨ ॥ ಆನೆಗೊಲಿದು ಎಂಟು ದಿಕ್ಕು । ಆನೆಯಾಳ್ದ ಅಪ್ರತಿಮ ದ । ಯಾಸಿಧಿಯ ಕುಳ್ಳಿರಿಸಿ । ಆನೆ ಬಂತೆಂದಾಡಿಸುವ ॥ ೩ ॥ ಅನ್ನಮಯನು ಬೊಮ್ಮಾದ್ಯರಿಗೆ । ಅನ್ನ ಕಲ್ಪಕಂಗೆ ಪರ ॥ ಮಾನ್ನ ಬೆಣ್ಣೆ ಪಾಲ್ಸುಡಿಸಿ । ಅನ್ನಪ್ರಾಶನೇ ಮಾಡಿಸುವಾ ॥ ೪ ॥ ಚಿನ್ಮಯಾ ಮುಕ್ತಾ-ಮುಕ್ತ । ಚಿನ್ನರನಾಡಿಸುವನಿಗೆ ॥ ಚಿನ್ನತಾ ಹೊನ್ನಗುಬ್ಬಿ । ಚಿನ್ನಗೊಂಬೆಂದಾ-ಡಿಸುವ ॥ ೫ ॥ ತಾರಕಾ ಉಪದೇಶಕರಿಗೆ । ತಾರಕನಾಗಿರುವ ಕೃಷ್ಣಗೆ ॥ ತಾರಕ್ಕ ಬಿಂದಿಗಿ ಎಂದು । ತಾರಕಾರಿ ಅಜ್ಜನಾಡಿಸುವ ॥ ೬ ॥ ದಟ್ಟವಾದ ಜೀವಜಲದ । ದಟ್ಟುಳೀಯ ಕರಣಂಗೆ । ದಟ್ಟೆದಟ್ಟೆ ರಂಗೈಯೆಂದು । ದಟ್ಟ ಸಾಲನಿಕ್ಕಿಸುವ ॥ ೭ ॥ ಆಲದೆಲೆಯ ಆಲಯಂಗೆ । ಆಲದೆಲೆಯ ತೊಟ್ಟಿಲು

ಉ । ಯ್ಯಾಲೆ ನಿಟ್ಟು ಮುದ್ದುಮಾತು । ಲಾಲಿಸಿ ಜೋಗುಳ ಪಾಡುವಾ ||೮|| ತನ್ನ ಮಗನ ನಡೆಯ ನುಡಿಯ । ತನ್ನ ಪತಿಗೆ ಹೇಳಿ ಹಿಗ್ಗಿ || ತನ್ನ ಭಾಗ್ಯ ಲಕ್ಷ್ಮೀಶ । ಪ್ರಸನ್ನವೆಂಕಟನಾಡಿಸುವ || ೯ ||

೧೩೯

**ರಾಗ— ಶ್ರೀ** **ತಾಳ— ತ್ರಿಪುಟ**

ಆವಳಂಜಿಸಿದಳವಳು ಪೇಳು ರಂಗಮ್ಮಾ ನಾ । ನವಳ ಗಾರುಮಾಡುವೆ ನಡೆ ಕೃಷ್ಣಮ್ಮಾ || ಪಲ್ಲ || ದೂರುವಿರ್‍ಯಾದರೆ ಮಗನ ಹಾದಿಗೆ ಹೋಗದಿರಿ ಎಂದು । ಸಾರಿಕೈಯ್ಯ ಕಡ್ಡಿಕೊಟ್ಟೆ ಜಾರೆಯರಿಗೆ || ಸಾರಿಸಾರಿಗೆನ್ನ ಮನ ರಟ್ಟು ಮಾಡುವ ಮಾತೇನು । ಆರಿಗೆ ಮಕ್ಕಳಿಲ್ಲೇ ನಾನೇ ಹಡದವಳೇನೋ || ೧ || ಇದ್ದರಿರಲೀ ಕೂಸಿನ ಆಡುವಾಟಕೊಪ್ಪೀದರೆ । ಎದ್ದು ಹೋಗೆಂದರೆ ಹೋಗಲಿಲ್ಲ ಪಳ್ಳಿಂದಾ || ಕದ್ದು ತಿಂದನೆಂಬ ಸುಳ್ಳು ಸುದ್ದಿಗೆ ಕಾರಣವೇನೊ । ಮುದ್ದೆಬೆಣ್ಣೆ ಕೈಯಲಿತ್ತಾರೊಲ್ಲದೆ ಚಲ್ಲುವ ಕಂದಗ || ೨ || ಏನು ಪುಣ್ಯರಾಶಿ ಕೂಡಿತೆಂದು ನಿನ್ನಾಟವ ನೋಡಿ । ಬೀಸಿ ಬೀಗಿದಪ್ಪುವಂಥ ಭಾಗ್ಯವನುಂಡೆ || ಕೂಸೆ ನಿನ್ನ ಕಂಡಸೂಯಾ ಬಡುವಾರು ಅಳಿಯಾಲಮ್ಮಾ । ದಾಸರಿಂಗೆ ಲೇಸಾಗಲಿ ಪ್ರಸನ್ನವೆಂಕಟ ಕೃಷ್ಣಾ || ೩ ||

೧೪೦

**ರಾಗ—ಕಾಂಭೋದಿ** **ತಾಳ—ಝಂಪಾ**

ಇದೆಕೋ ದಧಿ ಮಥಿಸೆ । ಹೊಸ ಬೆಣ್ಣೆ ಕೊಡವೇನೊ || ಪದುಮನಾಭ ಗೊಲ್ಲಗೋರಸಕೆ ಗೋಳಿಡಬ್ಯಾಡೊ || ಪಲ್ಲ || ಮಲತಹಾಲು ಹುಳಿಮಸರು ತಂಗಳಬೆಣ್ಣೆ । ನಳಿನಾಕ್ಷ ನಿನಗೇನು ರುಚಿಯೋ ಕಂದಾ || ಕಳವೀನ ಮಾತ್ಯಾಕೆ ಹಸುಳೆ ಗೋವಳೆಯೇರ । ಗೆಳೆತನವ್ಯಾತಕೊ ನಿನಗೆ ರಂಗಮ್ಮಾ || ೧ || ಮನೆಮನೆ ತಿರುಗಾಡಲು ಬಡವರ ಮಗನೇನೋ । ನಿನಗೇನು ಕೊರತೆನ್ನಾ ಮನೆಯೊಳಗೆ || ಅನುದಿನಾ ವಿಗಡೇರು ದೂರುತಲೈದಾರೆ । ದಣಿದೆನಾರೋಪಣಿಯಾ ಕೇಳಿ ಕೃಷ್ಣಯ್ಯಾ || ೨ || ಎನ್ನ ಮುದ್ದಿನ ಅಮೃತ, ಎನ್ನ ಭಾಗ್ಯದ ನಿಧಿಯೆ । ಎನ್ನ ಚಿಂತನೆಯ ಚಿಂತಾಮಣಿಯೇ ||

ಚಿನ್ನಾರರಸನಾದ ಪ್ರಸನ್ವೆಂಕಟ ಕೃಷ್ಣಾ। ನಸ್ನಾಣೆ ಕಣ್ಣು ಮುಂದಿಗು ನವ್ಮವ್ಮಾ ॥ ೩ ॥

೧೪೧

**ರಾಗ—ಕಾಪಿ** **ತಾಳ—ಏಕ್ಕ**

ಎತೋದೆಯವ್ಮಾ। ನಂಗನ್ನೆತ್ತಿಕೋ ಅವ್ಮಾ, ಬಾಲು। ವತ್ತು ಅತ್ತು ಬಂದೀನೆ। ಇತ್ತೆ ಅವ್ಮಿ ತಿಂಡೇನೆ ॥ ಪಲ್ಲ ॥ ತುತಿಬಾಯಿ ವಂಗ್ಯಾವೆ। ಬಿತಿ ಆವು ವಾತತ್ತಿ ಬತ್ತಾವೆ ॥ ಅತಿ ಆವು ಉಪ್ಪುಕಾಯಿ ಆವ್ಮ ಮವ್ಮೊಲ್ಲೆ। ಉತ್ತತ್ತಿ ಬೆನ್ನಿ ತಿಂದೇನೆ ॥೧॥ ಕಲ್ಲ ಕಿತ್ನ ಎಂತಾಡೇ। ಬಂಗಾಡ ಬುಲ್ಲಿ ಬೆಲ್ಲ ತಿಂತಾಡೇ ॥ ಗಲ್ಲ ಕತ್ತಿಕತ್ತಿ ಉವ್ಮು ಹಲ್ಲ ನತ್ತುತಾಡೆ। ಕೊಲ್ಲಬಾಲದೆ ದೂತ್ತ ಗೊಲ್ಲತೆಲನಾ ॥ ೨ ॥ ಯಕ್ಕೋಬಾ ಯಂಬ್ಯಾರೆ। ಬಿತಿನೀಲು ಬುಕ್ಕಚ್ಚಿ ವ್ಮಾಬ್ಯಾಲೆ ॥ ತಕ್ಕುಲಿ ತಿನ್ನಿಪಾಲು, ಬತ್ತಲು ತುಂಬಿಕೋಲು। ಬಕ್ಕು ಮಲಿಗಳ ಕೂಡುಂಡೇನೆ ॥ ೩ ॥ ಲಾಲೀ ಮಗಚು ಬಾಲೆ। ಕಿತ್ತನ ವ್ಯಾಲೆ ದೋಗಲ ಪಾಲೇ॥ ಬಾಲ ಬವು ಕಂದು ಅನಗಂತೀಕಿ ಬತ್ತದ ದೂಲ ಎನ್ನ ಬಿತ್ತು ನೀ ವೋಗಬ್ಯಾಲೆ ॥೪॥ ನಚ್ಚತ್ಲ ತಂದು ತೋಲೆ। ಚಂದವಾಮ ನಿತ್ತತ್ತ ಕಲೆತಾಲೆ ॥ ಪುತ್ತಮಿಲ್ಲಿ ತುಂಬ ವಲ್ಲೆ ಮುತ್ತು ಕೊತ್ತಾಲೆ ತನ್ನ ಬುತ್ತಿ ತುಂಬ ಹನ್ನುಕೊಂಡು ತಿಂದೇನೆ ॥ ೫ ॥ ಉಗ್ಗು ಕುವ್ವ ಬಾಯಂಗೆ। ಚಪ್ಪುಸ್ಸಿ ಮಗ್ಗಮ್ಮಿ ಕೂಯಂಗೆ ॥ ಉಗ್ಗಮೀತಿ ದೋಗಿಗೆ ಕೋಬ್ಯಾದೆ। ಬಾಗಿಲ್ಲ ಹೊಗ್ಗ ಎಲ್ಲ ದತ್ತಿಂಗದಾನೆ ॥ ೬ ॥ ಕೂಚಿಗವ್ಮಿ ಕೂಬ್ಯಾಲೇ, ನಂಗಂಗಚ್ಚ ತಾನೆ ಆವನಾಲೇ ॥ ಪಾಚನ್ನ ವೆಂಕತಕಿತ್ತಪ್ಪ ಕನ್ನದೀಲಿ ನಚುನಗಿ ನಗುತಾನೆ ಕಲತಾಲೆ ॥ ೭ ॥

೧೪೨

**ರಾಗ—ಪಹಾಡಿ** **ತಾಳ—ಅಟ**

ನಡೆಯೋ ನಿವ್ಮವ್ಮಾನೆಡೆಗೆ ಹೋಗುವ ನಿನ್ನ। ತುಡುಗ ಬುದ್ಧಿಯ-ನೆಲ್ಲಾ। ಬಿಡಿಸುವೆ ಕಳ್ಳಾ ॥ ಪಲ್ಲ ॥ ಏನೆಲೆ ಠಕ್ಕಾ ನಯನವೆ ಇಕ್ಕೆ। ನಿನ ವೈ ಹುದುಗಿಸಿದೆ। ಬಾಯಿ ಜೊಲ್ಲುಸುರಿಸಿದೆ ॥ ೧ ॥ ಕಂಬಾಶ್ರಯಿಸಿದೆ ನಂಬೆ

ವಂಚಿಸಿದೆ । ದಂಭಪರಳದೆ ಕುಂಭಿಣಿಜಾಳ ಕೊಡ್ದೆ ॥ ೨ ॥ ಕೆನೆವುಸರು ಕದ್ದೆ ವಿನೀತೇರೊಂಚಿಸಿದೆ । ಕೊನೆಗೋಡಿಹೋಗ್ವೆ । ಪ್ರಸನ್ನ ವೆಂಕಟ ಕೃಷ್ಣ ॥ ೩ ॥

೧೪೩

ರಾಗ—ದೇಶಿ ತಾಳ—ಅಟ

ನಿನ್ನ ಮಗನ ಮುದ್ದು ನೀನೇ ಲಾಲಿಸವ್ಮಾ । ಚಿನ್ನಾನೆಂದಾಡಿಸವ್ಮಾ । ಬಣ್ಣದ ಬಾಲೇರಾ ಭೋಗಿಪ ಚದುರತೆ । ಸಣ್ಣವರ ಸರಸೇನವ್ಮಾ ॥ ಪಲ್ಲ ॥ ತಾಳಬೇಕೆಷ್ಟೆಂದು ಗಾಡಿಕಾರನ ಮಾತು । ಹೇಳಲಂಜುವೆವವ್ಮಾ, ನ ॥ ವ್ಮಾಳುವ ಪತಿಗಳ ವಂಚಿಸಿ ನ । ವ್ಮ ಲಜ್ಜೆ ಹಾಳು ಮಾಡಿ ಪೋದಾನೆ ॥೧॥ ಕೃಷ್ಣ ಸಿಕ್ಕಿದನೆಂದು ನಮ್ಮ ಮಕ್ಕಳ ನಾವೇ । ಅಟ್ಟಿಸಿಕೊಳುವೆವವ್ಮಾ ॥ ದೃಷ್ಟಿ ಮರೆಯು ಜಾಲ ನೋಡೆ ನಂದನ ರಾಣಿ । ಸೃಷ್ಟಿಶಾರಿಗೆ ತೀರದೂ ॥ ೨ ॥ ಕನ್ನೆಯರೊಡಗೂಡಿ ಕಳ್ಳನಾ ಕೈಕಟ್ಟಿ । ನಿನ್ನೆಡೆಗೆ ತರುತಿದ್ದೇವೆ ॥ ಕಣ್ಣೀಯ ಕೊರಳೀನ ಕರುವೆಂದು ಜನವಾಡೆ । ಖಿನ್ನರಾಗಿ ಹೋದೆವೇ ॥ ೩ ॥ ಆವಾವ ಕೇರಿಲಿ ಜಾರ ಚೋರನ ಮಾತು । ಆವಾವ ಮನೆಗಳಲ್ಲೀ ॥ ಭಾವೆಯರಿಳೆ ವೊಲೆ ಮೂಗು ಚಿವಟಿ ಜಾವ । ಜಾವಕಂಜಿಸಿಕೊಂಬನೇ ॥ ೪ ॥ ನಾವು ಮಾಡಿದ ಸುಕೃತವೆಂತೋ ಗೋಪಾಲ । ಭಾವಕೆ ಮೆಚ್ಚಿದನೇ ॥ ದೇವರ ದೇವ ಪ್ರಸನ್ವೆಂಕಟೇಶಾ ತಾ । ಜೀವಕೆ ಹೊಣೆಯಾದನೇ ॥ ೫ ॥

೧೪೪

ರಾಗ—ತೆಲಗ ಕಾಂಬೋದಿ ತಾಳ—ಆದಿ

ನಿರುತ ನಿನ್ನ ಲೀಲೆಯನೆ ಹಾರೈಸುವೆ । ಮುದ್ದು ತಾರೋ ಕಂದ ಮುದ್ದು ತಾರೋ ॥ ಕಿರಿಗುರುಳಿನ ಚಲ್ವ ಬಾಲಕ ರನ್ನನೇ ಮುದ್ದು ತಾರೋ ಕಂದ ಮುದ್ದು ತಾರೋ ॥ ಪಲ್ಲ ॥ ನಿದ್ರೆ ಪೂರಿತವಿಲ್ಲದೇ ನಡೆವುತ ಬಂದೆ । ಮುದ್ದು ತಾರೋ ಕಂದಾ ಮುದ್ದು ತಾರೋ ॥ ಮೆದ್ದು ಕಾಯೆ ಕಳಿಲೆ ಕಿರಿನಗಿ ಜೊಲ್ಬಾಯಾ । ಮುದ್ದು ತಾರೋ ರಂಗ ಮುದ್ದು ತಾರೋ ॥ ೧ ॥ ಧುಡು ಮೆಂದು ಕಡೆವ ದನಿಗೆ ಧುಡು ಧುಡು ಬಂದೂ । ಮುದ್ದು ತಾರೋ ॥ ಉಡಿಗೆ ಜಗ್ಗುತ ತೊದಲ್ನುಡಿದು ಮೊಗವ ನೋಡಿ । ಮುದ್ದು ತಾರೋ ॥ ೨ ॥

ನವನೀತ ನೀಡಾಲು ಆಯೆಂಬ ಪುಟ್ಟಾ ಬಾಯಾ । ಮುದ್ದು ತಾರೋ ಕಂದ ಮುದ್ದು ತಾರೋ ॥ ಹವಣಾ ಸಣ್ಣಲ್ಲು ಎಳೆದುಟಿ ಸೋಂಪಿನಾ । ಮುದ್ದು ತಾರೋ ಕಂದ ಮುದ್ದು ತಾರೋ ॥ ೩ ॥ ಅಂಬೆಗಾಲಿಕ್ಕುತೆ ನನ್ನನು ಕಂಡು ಕರವೆತ್ತಿ । ಮುದ್ದು ತಾರೋ ॥ ಕಂಬುಕಂಧರ ನಿನ್ನ ಮನದಣಿಯಪ್ಪುವೆ । ಮುದ್ದು ತಾರೋ ॥೪॥ ಬೆನ್ನನಾ ಬಡಿದು ನಾನಲ್ಲೆಂದು ಬಾಯಾರ್ವಾ । ಮುದ್ದು ತಾರೋ ॥ ಪ್ರಸನ್ವೆಂಕಟಚಲ ವಾಸಾ ವಿಲಾಸನೆ । ಮುದ್ದು ತಾರೋ ॥ ೫ ॥

೧೪೫

ರಾಗ— ಕನ್ನಡ ಕಾಂಬೋದಿ      ತಾಳ— ಆದಿ

ನೋಡೆ ಅಮ್ಮಾ ಯಶೋದೆಮ್ಮಾ । ನಿನ್ನ ಮಗನ್ನ ॥ ಆಡಬಾರದಾಟವಾಡುವನಮ್ಮಾ । ಹಾಡುವ ನಗುತ ನಿಂತು ನಮ್ಮ ॥ ಪಲ್ಲ ॥ ಬುದ್ಧಿ ಹೇಳಿ ತಿದ್ದಬಾರದೇನಮ್ಮಾ ॥ ಮುದ್ದು ಮಕ್ಕಳನೆಲ್ಲಾ ಗುದ್ದಿ ಅಂಜಿಸಿ ಕಾಲಿ । ಲೊದ್ದೋಡಿಸಿ ಬರತಾನೆ ಕೇಳಮ್ಮ ॥ ೧ ॥ ಕ್ಷೀರ ಕೊಡವ । ಸುರವಿ ಬಿಡುವ ॥ ಸಾರಿ ಸಾರಿಗೆ ಬೆಣ್ಣೆ ಪಸುಳೆಗೆ ಕೊಡುವಾ ಮಂ । ಡಿರದೊಳಗೆ ತಾ ಕುಣಿದಾಡುವಾ ॥ ೨ ॥ ಹರಿದು ಬರುವಾ । ಚಾರುವರಿವಾ ॥ ಕರುವ ನೋಡುವೆನೆಂದು ಬಾಯಿಲುಸರೂವಾ । ಹಣಿವಿ ಮೊಸರು ಕೆನೆಪಾಲು ಸುರಿವಾ ॥ ೩ ॥ ಲೀಲೆ ನೋಡಲು ಅರಿಗಳವಲ್ಲಾ ॥ ಬಾಲಕನ ಕೌತುಕವೆಲ್ಲ ನಮ್ಮೆಲ್ಲರಾ । ಆಲಯದಿ ನಿಲ್ಲಗೊಡ ಸಿರಿನಲ್ಲಾ ॥ ೪ ॥ ಗುಣ ಹೇಳಲೊಂದಲ್ಲ ಎಣಿಕಿಲ್ಲಾ ॥ ಚಿನುಮಯ ಪ್ರಸನ್ವೆಂಕಟೇಶ ನಂಬದಿರ್ಗಿಲ್ಲಾ । ಬಿನಗು ಮಾತಿಗೆ ಸಿಗನಲ್ಲಾ ॥ ೫ ॥

೧೪೬

ರಾಗ—ಶ್ರೀ      ತಾಳ—ತ್ರಿವಿಡಿ

ಬಂದೆಯಾ ಬಾರೋ ಗೋಪಾಲ ಕೃಷ್ಣಾ । ಬಂದೆಯಾ ಬಾರೋ ॥ಪಲ್ಲ॥ ಇಲ್ಲಿಯ ಗೊಲ್ಲತೆರೆಲ್ಲರೂ । ಬಲ್ಲಿದ ಕಾಮುಕ ನಲ್ಲೇರು ॥ ಫುಲ್ಲಲೋಚನಾ ನಿನ್ನ ಮುದ್ದಿನ ಮೊಗವಾ । ಮೆಲ್ಲನೆ ಚುಂಬಿಸಿ ಬಿಡರೊ ಮಗುವೆ ॥ ೧ ॥ ಚಿಕ್ಕವನೆಂದಾಡಿಸಿ ನಿನ್ನಾ । ಚಿಕ್ಕಂದಿಲಿ ಬಡಿಸಿ ಚಿನ್ನಾ ॥ ಸಕ್ಕರೆ ಮಾತಿಲಿ

ಬಿಗಿದಪ್ಪುವರೋ| ರ(ಕ)ಕ್ಕಸ ಕುಚದಾಂಗನೆ ಗೋಪಿಯರೊ ||೨|| ಇರುಳ್ಹಗಲೆನ್ನಾ ಕಂದನ್ನಾ | ಮರಳಿಕ್ಕುವರೆಂದಂಜುವೆ ನಾ || ತರಳೆ ನಿನ್ನ ಕಾಲಿಗೆರಗುವೆ ನೋಡೊ | ತರಳೆರೊಡಗೂಡಾಡಿಸಲಿ ಬ್ಯಾಡೊ || ೩ || ನಿಲ್ಲದೆ ನಿನ್ನ ಬರಿ ಮಾಡುವರೊ | ಚೆಲ್ವಾ ಹಣ್ಣುಗಳ ನೀಡುವರೋ || ಎಳೀ ನಾರೇರನುದಿನ ನಿನ್ನಾ | ಬುಲ್ಲಿ ಬೆಲ್ಲಕೆ ಮನಸೋಲ್ವರಣ್ಣಾ || ೪ || ಹಗಲೆಲ್ಲ ಮನೆ ಮನೆ ತಿರುಗದಿರು | ಮುಗುಳನಗೆಯವರ ನೋಡದಿರು || ಅಗಲದಿರೆನ್ನಾ ಪ್ರಸನ್ವೆಂಕಟಾ | ನಗಪತಿ ಬಡವರ ಧನವೆ ಕೃಷ್ಣ || ೫ ||

೧೪೭

**ರಾಗ—ತೆಲಗ ಕಾಂಬೋಧಿ** **ತಾಳ—ಆದಿ**

ಬಾರೋ ಮಗನೆ ಬಳಲಿದೆ ಆಡಿ || ಕೇರಿಯೊಳಗೆ ನಲಿದಾಡಿ || ಪಲ್ಲ || ಎಲ್ಲಿಗೆ ಹೋಗಿದ್ದ್ಯೊ ಎನ್ನದೆ | ಝುಲ್ಲು ಎನುತಾಲಿದೆ || ಮೆಲ್ಲಿದೆಗಾರ್ತಿ ಗೊಲ್ಲತೇರು ನಿನ್ನಾ | ಗಲ್ಲ ಕಚ್ಚಿಹರಲ್ಲೊ ಹಸುಳೆ || ೧ || ಬಾಡಿದೆ ನಿನ್ನ ವದನಾ ಊರೊಳು | ಮಾಡಿದೇಕೋ ಕದನಾ || ಕಾಡುವ ಪ್ರೌಢಿಯರಾ ತೋರಿಸು | ನಾಡ ಬಿಟ್ಟವರನೋಡಿಸುವೆ ನಡೆ || ೨ || ಕೂಸಿನಾಟವಲ್ಲೊ ಜೆಟ್ಟಿಗನ | ಮೀಸಲಂಜಿಕಿಲ್ಲೊ || ಹೇಸದೇ ಬೆಣ್ಣೆಯಾ ಸವಿದು ನಿರ್ದೋಷ | ಘಾಸಿಯಾಗದೆ ನೀ ಕೃಷ್ಣ || ೩ || ಕೋಮಲಾಂಗವಿದು ಕಲ್ಲೆದೆ | ಕಾಮಿನಿಯರೊಯ್ದು || ಕಾಮುಕಿಯರು ರತಿ ಪ್ರೇಮದಲಪ್ಪಿಪ್ಪಿ || ದಾಮ ಸಿಡಿಲ್ಯಾದೆ ಶ್ರೀ ಮುರಾರಿ || ೪ || ಮುದ್ದಿನಾಮೃತ ಕಂದಾ | ಪೊಂದೊಟ್ಟಿಲೋಳ್ | ನಿದ್ರೆಗೈಯ್ಯಲಿಲ್ಲಾ || ಇದ್ದಗಲದೆ ನೀ ನಲಿದಾಡೊ, ಪೂರ್ಣ | ಶುದ್ಧ ಪ್ರಸನ್ವೆಂಕಟ ಕೃಷ್ಣ || ೫ ||

೧೪೮

**ರಾಗ—ತೋಡಿ** **ತಾಳ—ಆದಿ**

ಬಾಲನ ಮ್ಯಾಲೆ ನಿನ್ನ ಮೋಹವಮ್ಮಾ | ನಾವು ಹೇಳಿದ ಮಾತು ನೀ ಕೇಳೆಯಮ್ಮಾ || ಪಲ್ಲ || ಬೆಣ್ಣೆಗಿಣ್ಣೆಂಬುವನಲ್ಲ ಎನ್ನಬ್ಯಾಡೆ, ನಮ್ಮ | ಬೆಣ್ಣೆ ಕದ್ದು ಮೆದ್ದ ಕಟವಾಯಿನೋಡೆ || ಸಣ್ಣಗಿಣ್ಣವ ನೀವನಾದರೆ ಪರರ, ಚಲವ |

ಹೆಣ್ಣಿನೊಳಗಾಡುವನೆ ನಿನ್ನ ಕುವರ ॥ ೧ ॥ ಪುಟ್ಟಕಿಟ್ಟನೆಂಬುವ ಮಾತಾಡ ಬ್ಯಾಡೆ, ನಮ್ಮ । ರಟ್ಟು ಮಾಡುವ ಜನರೊಳು ನೋಡೆ ॥ ಸಿಟ್ಟಿಗಿಟ್ಟಿಗೆ ಕೃಷ್ಣ ನಳಕನಮ್ಮಾ । ಬಹು ಗಟ್ಟಿಗ ಬಾಲಕನಿತಿಥಿಟ್ಟನಮ್ಮಾ ॥ ೨ ॥ ಚಿಕ್ಕಗಿಕ್ಕವ ನೆಂಬುದು ರೂಢಿ ಕಾಣೆ । ನಮ್ಮ ಪಕ್ಕವ ಬಿಡನು ಬಾಲಕಾರ್ಯ ಘನನೆ ॥ ಅಕ್ಕೊಇಕ್ಕೊನೆಂಬುವನಕ್ಕಾ ಕಳ್ಳ, ನಮ್ಮ । ಠಕ್ಕಿಸಿದ್ದೋಡುವ ಸಿಕ್ಕುವನಲ್ಲಾ ॥ ೩ ॥ ಕಕ್ಕುಲಾತಿ ತೋರೆ ನಮ್ಮ ಮನೆಗಳ ಪೊಕ್ಕು, ಸಂಣ । ಮಕ್ಕಳಾಟ-ವಾಡದೆಮ್ಮ ನೋಡಿ ನಕ್ಕ ॥ ತಕ್ಕೈಸಿ ಓಡುವ ಮಹಾಮಾಯಗಾರನಮ್ಮ । ದಕ್ಕಲೀಸ ಪತಿಪ್ರತಧರ್ಮ ಜಾರ, ಕೃಷ್ಣ ॥ ೪ ॥ ಕೂಸುಗೀಸು ಇನ್ನೆನನ್ನ ಬಾರದವಗೆ, ಭವ । ಘಾಸೆಯ ತಪ್ಪಿಸುವ । ಎಂದಿಗೆ ನಮಗೆ ॥ ಬ್ಯಾಸರ ಗೀಸರದೆ ನೆನೆವರ ಒಡಿಯಾ, ಲಕು । ಮೀಶ ಪ್ರಸನ್ವೆಂಕಟ ರಂಗಯ್ಯಾ ॥ ೫ ॥

೧೪೯

ರಾಗ--ಬಿಹಾರ ತಾಳ—ಝಂಪಿ

ಹಿಡಿರೆಮ್ಮಾ ಮುದ್ದು ಮೋಹನನಾ, ಇವ । ಹಿಡಿಯದಿದ್ದರೆ ಸಿಕ್ಕಾ । ತುಡುಗಾ ರಂಗಯ್ಯಾನಾ ॥ ಪಲ್ಲ ॥ ನವದಧಿಕ್ಷೀರಾ, ನವನೀತ ಚೋರಾ ॥ ಇವನ ಬಾಲಲೀಲೆ ನವನವ ಒಲ್ಲೆ ॥ ೧ ॥ ಹಲವು ದಿನಗಳಿಂದ, ಹಲಬೀಪ ನಮ್ಮಾ ॥ ಹೊಲಬಿ ಸಿಗ ಯಾರಿಂದೆ । ಹೊಳೆವನು ಮುಂದೆ ॥೨॥ ಕೆಣಕಿದರೆ ಕೋಲನ್ನಿಡಿವ । ಕುಣಿದಾಡುವ । ಸನಕಾದ್ಯರರಸ ಪ್ರಸನ್ವೆಂಕಟೇಶಾ ॥ ೩ ॥

೧೫೦

ರಾಗ--ಪೂರ್ವಿ ತಾಳ—ಅಟ್ಟ

ಅಂಜಿಕ್ಯಾಕೆನಗಂಜಿಕಿ । ಕಂಜನಾಭ ಶ್ರೀನಿವಾಸನ ದಯೆವಿರಲು ॥ಪಲ್ಲ॥ ಆಶನವಸನವನ್ನು ಕುಳಿತಲ್ಲೆ ನಡಿಸುವ । ನಿಶಿದಿನ ನೀಚರಾಧೀನ ಮಾಡದೆ ॥ ಹಸನಾಗಿ ತನ್ನಂಘ್ರಿ ನೆಳಲೊಳು ಬಚ್ಚಿಟ್ಟು । ಕುಶಲದಿ ಸಾಕುವ ಧೊರೆಯು ನಂಬಿದ ಬಳಿಕ ॥ ೧ ॥ ಹುಲ್ಲುಕಚ್ಚಿ ಕಲ್ಲುಹೊತ್ತು ಧನವನುಳ್ಳ । ಕ್ಷುಲ್ಲಕ ಚಿತ್ತವ ಕಾಯುವಾಸಕ್ತಿ॥ ಎಲ್ಲ ವ್ಯವಹಾರವ ಮಾಡುವ ಬಲ ನನ । ಗಿಲ್ಲೆಂದು ಆಯಾಸಬಡಲೀಸದವನಿರೆ ॥ ೨ ॥ ಆವ ದೇಶದಲಿರೆ, ಆವ ಕಾಲದಲಿರೆ ।

ಸೇವೆಗೆ ನಾತಪ್ಪೆ ಕೃಪೆ ತಪ್ಪಿಸಾ || ಭಾವಿಕರೊಡೆಯಾ ಶ್ರೀಪ್ರಸನ್ವೆಂಕಟಾ-ದ್ರೀಶಾ | ಸಾವು ಕಳೆದು ಜೀವಕಾಶ್ರಯನಾಗಿರೆ || ೩ ||

೧೫೧

ರಾಗ—ದುರ್ಗಾ ತಾಳ—ಝಂಪಾ

ಅನಿಮಿತ್ತಾ ಬಂಧೂ, ಅತಿದಯಾ ಸಿಂಧೂ || ಅನತ ನಾನೆಂದು ಅಭಯಾ ನೀಡೆಂದು || ಪಲ್ಲ || ಮಧುಕೈಟಭಾರಿ | ಮುರಾಂತಕೋದಾರಿ|| ಮದನೋದ್ಭವಕಾರಿ ಮನ್ನಿಸೆನ್ನನುದಾರಿ || ೧ || ವೈಕುಂಠಸದನಾ ವಜ್ರಾಭಾರದನಾ || ಶ್ರೀಕರ ವದನಾ ಸಲಹೆನ್ನಾನುದಿನಾ || ೨ || ಬಿಸಜಾಜಾನಯ್ಯಾಂಬರು ಹಸುಪೈಯ್ಯಾ || ಪ್ರಸನ್ವೆಂಕಟಯ್ಯಾ ಪಾಪಾ ವಾರಿ ಸಯ್ಯಾ || ೩ ||

೧೫೨

ರಾಗ—ಧನಶ್ರೀ ತಾಳ—ಝಂಪಾ

ಎನ್ನ ತಂದೆ ಎನ್ನ ತಾಯಿ ಎನ್ನ ಬಂಧುವೇ ನೀ | ಇನ್ನಾರೊಡೆಯರಿಲ್ಲಾ ಕಾಯೋ ಲಕ್ಷ್ಮೀ ನಲ್ಲ || ಪಲ್ಲ || ಕರುಣ ನೋಟದಿ ನೋಡಿ ಹೊರಡಿಸಿದ ತಂದೆ ಮಂ | ದರಧರನೆ ಬಸುರೊಳಿಟ್ಟ ತಾಯಿ ನೀನು || ಧರೆಗೆ ಪರಗತಿಗೆ ನೆಲೆಗೊಡುವ ಬಾಂಧವ ನೀನು | ದುರಿತ ಕರಿಗಣಕೆ ಸಿಂಹಾಸ ನೀನು || ೧ || ಷಟ್ಕರ್ಮ ಸಂಗ್ರಹವ ಮಾಡಿಸುವ ತಂದೆ ನೀ | ದುಷ್ಕರ್ಮ ಖಂಡಿಸುವ ತಾಯಿ ನೀನೂ || ಷಟ್ಕೋಣ ಬಲದಿರುವ ತ್ರಿಕುಟಾದ್ರಿವಾಸ ವ | ಷಟ್ಕಾರಗೈದೆ ಕೌರವ ಕುಲಾರಿಯು ನೀನು || ೨ || ಶ್ರುತಿ ವಿರೋಧಿಗಳ ಮೋಹಿಪ ಸುರರ ತಂದೆ ನೀ | ಅತುಳ ಧರ್ಮಾತ್ಮಕರ ತಾಯಿ ನೀನೂ || ಕ್ಷಿತಿಗೆ ವೈಕುಂಠವೆನಿಪ ಪ್ರಸನ್ವೆಂಕಟಬಂಧು | ಗತಿಗೆ ಗತಿಯಾದಾದಿ ಪುರುಷ ನೀನೂ || ೩ ||

೧೫೩

ರಾಗ—ಬಹಿರಿ ತಾಳ—ಝಂಪಾ

ಕರುಣಾಂಬುಧಿ ಪಾಲಿಸೋ | ಶರಣಾಗತರರಸ ಮುರಾರಿ || ಪಲ್ಲ || ಹಿಂದೆ ಕ್ಲೇಶವನ್ನನುಂಡು ಬಳಲಿ ನಾ ನೊಂದೆ || ಮುಂದೆ ಕತ್ತಲೆ ಕವಿದಿದೆಲೊ

ತಂದೆ || ೧ || ಒಡೆಯಾ ನಿದ್ದೊಡಲಿನ ಚಿಂತೆ ಎನಗ್ಯಾಕೆ || ಪಡಿಯಾಸಿಲಿನ್ನೊಬ್ಬರೊಲಿಸಲ್ಯಾಕೆ || ೨ || ಜನಕಾ ಜನನೀ ಆಪ್ತ ಧನ ಧಾನ್ಯ ನೀನೇ || ಅನುಮಾನ ಬಿಡಿಸುವ ಅನುಕೂಲದವನೆ || ೩ || ಪೋಕರ ಮುಂದೆಡಹಿದ ರಾರ ಕುಂದು || ಜೋಕೆ ಬರಿದು ದಾತಾ ಅನತಾ ಬಂಧು || ೪ || ನಾಭಿ ಸುರಭಿ ಕಾಣದರಸುವ ಮೃಗದಂಥ | ಈ ಭ್ರಾಂತೆ ಕಳಿಯೊ ಪ್ರಸನ್ವೆಂಕಟೇಶಾ || ೫ ||

೧೫೪

**ರಾಗ—ಕಲ್ಯಾಣಿ** **ತಾಳ—ಆದಿ**

ಕರುಣಿಯೆಂಬೆ, ಕರುಣಾಬ್ಧಿಯೆಂಬೆ | ಶರಣು ಶರಣೆಂಬೆ || ಪರಮ ಭಾಗವತರ | ಅರಿಗಳ ತರಿದು ನೀ ನರಕ ತಪ್ಪಿಸಿ ನಿಜ | ಪುರಕೊಯ್ಯುವೆಯೆಂದು || ಪಲ್ಲ || ತಾಯಿಯೆಂಬೆ ತವರೂರೆಂಬೆ | ತ್ರಾಹಿ ತ್ರಾಹಿ ಎಂಬೆ || ಬಾಯೆಂಬೆ ಮಾನವರ | ಘಾಯಗಾಣಿಸುತಿರೆ | ನೀ ಯಾಜವಿ೯ಗಾಶ್ರಯನಿತ್ತೆಯೆಂದು || ೧ || ತಾತನೆಂಬೆ ಆದ್ಯಾಪ್ತನೆಂಬೆ | ನಾಥಾ ನಾಥೆಂಬೆ || ಪಾತಕ ಕೌರವರಾತಂಕ ಬಿಡಿಸಿ ಸಂ | ಪ್ರೀತಿಲಿ ಪಾಂಡವರ ಕಾಯುವೆಯೆಂದು || ೨ || ಏಕಾನೆಂಬೆ ಅನೇಕಾನೆಂಬೆ | ಸಾಕು ಸಾಕು ಎಂಬೆ || ಶ್ರೀಕಾಂತ ಪ್ರಸನ್ವೆಂಕ | ಟೇಕಾಂತ ದಾಸರ | ಬೇಕಾಗಿ ದಡಾ ನೂಕುವೆಯೆಂದೂ || ೩ ||

೧೫೫

**ರಾಗ—ಘಂಟಾರವ** **ತಾಳ—ಆದಿ**

ಕರ್ತಾ ಕೃಷ್ಣಯ್ಯಾ ನೀ ಬಾರಯ್ಯಾ, ಎ | ಸ್ವಾರ್ತ ಧ್ವನಿಗೊಲಿದು ಬಾರಯ್ಯಾ || ಪಲ್ಲ || ಸುಗುಣದ ಖಣಿಯೆ ನೀ ಬಾರಯ್ಯಾ ನ | ಮ್ಮಘವ ನೋಡಿಸಲು ಬಾರೈಯ್ಯಾ || ಘಗೆಯೇರಿತು ತಾಪಾ ಬಾರಯ್ಯಾ, ಸುಧಾ | ಮುಗುಳ್ನಗೆ ಮಳೆಗರಿಯೆ ಬಾರಯ್ಯ || ೧ || ವೈರವರ್ಗದಿ ನೊಂದೆ ಬಾರಯ್ಯಾ ಮ | ತ್ತಾರು ಗೆಣೆಯರಿಲ್ಲಾ ಬಾರಯ್ಯಾ || ಸೇರಿದೆ ನಿನ್ನ ಕರುಣೆ ಬಾರೈಯ್ಯಾ ಒಳ್ಳೆ | ದಾರಿಯ ತೋರಲು ಬಾರೈಯ್ಯ || ೨ || ವೈರಾಗ್ಯ ಭಾಗ್ಯ ಕೊಡೆ

ಬಾರಯ್ಯಾ ಜ್ಞಾ | ನಾರೋಗ್ಯದ ಭೇಷಜಾ ಬಾರಯ್ಯಾ | ಜಾರುತದಾಯು ಬೇಗ ಬಾರಯ್ಯಾ ಉ | ದಾರಿ ಪ್ರಸನ್ವೆಂಕಟ ಬಾರೈಯ್ಯಾ || ೩ ||

೧೫೬

ರಾಗ--ಶಂಕರಾಭರಣ ತಾಳ--ಆದಿ

ಕೋಲು ಕಾಮನ ಗೆದ್ದ | ಕೋಲು ಪೂಯ್ಸ್ಗಳನೊದ್ದ | ಕೋಲು ಆನಂದ ಮುನಿ ಪಿಡಿದೀಹ ಕೋಲೆ || ಪಲ್ಲ || ತಮನೆಂಬವನ ಕೊಂದು, ಕಮಲಜನಿಗೆ ವೇದ | ಕ್ರಮದಿ ಕೊಟ್ಟು ಜಗವ ರಕ್ಷಿಸಿ || ಕ್ರಮದಿಂದ ಕೊಟ್ಟು ಜಗವ ಸಂರಕ್ಷಿಸಿದ | ವಿಮಲಾ ಶ್ರೀಮತ್ಸ್ಯಮನೆದೈವೆ ಕೋಲೆ || ೧ || ಸುರಪಾನ ವಿಭವೆಲ್ಲಾ ಶರಧೀಲೆ ಮುಳುಗೀರೆ | ಗಿರಿಗಹಿಸುತ್ತಿ ಕಡಿಯಾಲು ಕೋಲೆ || ಗಿರಿಗಹಿಯೆನು ಸುತ್ತಿ ಕಡಿಯೆ ನಗ ಜಾರೆ | ಧರಿಸೀದ ಶ್ರೀಕೂರ್ಮ ಮನದೈವ ಕೋಲೆ || ೨ || ಹೊಂಗಣ್ಣಿನವನು ಭೂ, ವೆಂಗಳ ನೆಳೆದೊಯ್ಧೆ | ಮಂಗಳಮಹಿಮ ದಯದಿಂದ ಕೋಲೆ || ಮಂಗಳಮಹಿಮ ದಯದಿಂದ ನೆಗಹಿದೆ | ಗಂಗಾ ಜನಕ ನಮ್ಮ ( ಮನೆ ) ಮನದೈವ ಕೋಲೆ || ೩ || ಮುಂದೆ ಮನದೊಳಂದು ಕಂದ ನೆನಿಯಲಾಗ| ಬಂದಾವನಯ್ಯಾನ ಕೊಂದಾನು ಕೋಲೆ || ಬಂದಾವನಯ್ಯನ ಕೊಂದಾನು ಅನಿಮಿತ್ತ| ಬಂಧೂ ನರಹರಿ ನಮ್ಮ ಮನದೈವ ಕೋಲೆ || ೪ || ಎದುರಿಲ್ಲಾದವನೆಂದು ಮದವೇರಿದವನ ತ್ರಿ | ಪದ ಭೂಮಿ ಬೇಡಿ ಗೆಲಿದಾನು ಕೋಲೆ || ಪದಭೂಮಿ ಬೇಡಿ ಗೆಲಿದಾ ತ್ರಿವಿಕ್ರಮ | ಮುದವಾಮನಾ ನಮ್ಮ ಮನದೈವ ಕೋಲೆ || ೫ || ಕುಜನಾರಳಿದು ಭಾಗ್ಯ, ದ್ವಿಜರೀಗೊಲಿದಿತ್ತು | ನಿಜ ತಾತನಾಜ್ಞಾ ಸಲಹೀದ ಕೋಲೆ || ನಿಜ ತಾತ-ನಾಜ್ಞಾ ಸಲಹೀದ ಶುಭಗುಣ | ಅಜರಾಮ ನಮ್ಮಾ ಮನದೈವ ಕೋಲೆ || ೬ || ಕೌಸಲ್ಯಾ ಗರ್ಭದಲ್ಲಿ ಜನಸಿದ ಕೃಪೆಯಲ್ಲಿ | ಕೌಶಿಕ ಕ್ರತುವಾ ಕಾಯ್ದಾನು ಕೋಲೆ || ಕೌಶಿಕ ಕ್ರತುವಾ ಕಾಯ್ದು ರಾವಣಾಂತಕ | ಶ್ರೀಸೀತಾಪತಿ ನಮ್ಮ ಮನದೈವ ಕೋಲೆ || ೭ || ಗೋಕುಲದಲಿ ಬೆಳೆದು ಪೋಕರು ದನುಜರ | ನೇಕಾ ಬಗೆಯಲ್ಲಿ ಸದದಾನು ಕೋಲೆ || ನೇಕಾ ಬಗೆಯಲ್ಲಿ ಸದದ ಪಾಂಡವಾ ಪಾಲ | ಶ್ರೀಕೃಷ್ಣನಮ್ಮಾ ಮನದೈವ ಕೋಲೆ || ೮ || ಮಿಥ್ಯಾವಾದಿಗಳಿಗೆ ಮಿಥ್ಯಾವನೆ

ಕಲಿಸಿ। ಸತ್ಯಾವಾದಿಗಳನು ಪೊರೆದಾನು ಕೋಲೆ ॥ ಸತ್ಯಾವಾದಿಗಳಾ ಪೊರೆದಾನು ಅಜವಂದ್ಯ। ಕರ್ತಾ ಬೌದ್ಧಾ ನಮ್ಮ ಮನೆದೈವ ಕೋಲೆ ॥ ೯ ॥ ಸಹಸ್ರದಾಕಾರವು ಮಹಿಯೊಳಲ್ಲದಾಗೆ। ಸುಹಯವೇರಿ ಕಲ್ಕಿಯಾದನು ಕೋಲೆ ॥ ಸುಹಯವೇರಿ ಕಲಿಯಾನೆಳದು ಕೊಂದ। ಮಹಂತ ಕಲ್ಕಿ ಮನೆದೈವ ಕೋಲೆ ॥ ೧೦ ॥ ಹತ್ತವತಾರದಿ ಭಕ್ತಜನರ ಪೊರೆವ। ಮತ್ತಾವ ಕಾಲದಿ ರಕ್ಷಿಪ ಕೋಲೆ ॥ ಮತ್ತಾವ ಕಾಲದಿ ರಕ್ಷಿಸ ಪ್ರಸನ್ವೆಂಕಟ। ಕರ್ತನ ನಂಬಿ ಸುಖಿಯಾದೆ ಕೋಲೆ ॥ ೧೧ ॥

೧೫೭

ರಾಗ- ಕಾಂಬೋದಿ ತಾಳ—ಝಂಪೆ

ಪ್ರಲ್ಹಾದ ವರದ ಭಯ ಗಜಕೆ ಸಿಂಹ, ಪರಮ। ಆಲ್ಹಾದ ಪದವಿತ್ತು ಪೊರಿಯೋ ನರಸಿಂಹಾ ॥ ಪಲ್ಲ ॥ ಹಿಂದೆ ಹಿರಣ್ಯಕನಲ್ಲಿ ಜನಸಿದ ಪ್ರಲ್ಹಾದ। ನೊಂದವನ ಬಾಧೆಯಲಿ ಮರುಗಿ ಸೊರಗಿ ॥ ಇಂದಿರೇಶ ಸಲಹೆನಲು ಗಾಢ ಸ್ಥಂಬದಲೊದಗಿ। ಒಂಪವನುದರ ಬಗಿದೆ ರುಧಿರವನು ಸವಿದೇ ॥ ೧ ॥ ಅಸುರ ಕೆಡಲದ ಕಂಡು ಅತಿ ಹರುಷದಿಂದ ತ್ರಿ। ದಶರಂಬರದಿ ಪೂಮಳೆಗರೆಯಲು ॥ ಶಿಶುವೇಕ ಮಾನಸದಿ ಮೊರೆಹೊಕ್ಕು ಪೊಗಳುತಿರೆ। ಬಿಸಜಾಕ್ಷವನ ಕರುಣದಿಂದ ಸಲುಹಿದೆಯಾಗಿ ॥ ೨ ॥ ಹಲವು ಯೋನಿಗಳಲ್ಲಿ ತಿರುಗಿ ಬಳಲಿಜೆನಯ್ಯಾ। ನಳಿನಾಕ್ಷ ನಿಮ್ಮ ಗುರುತವ ಕಾಣದೆ ॥ ಇಳಿಯಲ್ಲಿ ದ್ವಿಜನಾಗಿ ಪುಟ್ಟಿ ತವ ಪದವಿಡಿದೆ। ಗೆಲಿಸು ಭವದುರಿತವ ಪ್ರಸನ್ವೆಂಕಟ ನೃಸಿಂಹಾ ॥ ೩ ॥

೧೫೮

ರಾಗ— ದೇಶಾಕ್ಷಿ ತಾಳ— ಅಟ

ರಂಗ ನೀಯೆನ್ನೊಡೆಯನಾಗೆ। ಮಂಗಳಾತ್ಮಕ ಮನೆಗೆ ಹೋಗೆ। ನ್ನಿಂಗಿತವ ನೀನುಸುರದಿರೆ, ಕುಂದಿನ್ನಾ। ರಿಗೆಲೆ ತಂದೆ ॥ ಪಲ್ಲ ॥ ಹಂಚಿನೆದುರಲಿ ಹಲ್ಲು ತೆರೆದರೆ। ಮಿಂಚು ಕನ್ನಡಿಯಾಗಬಲ್ಲುದೆ। ವಂಚಕರ ಅನುಸರಿಸಿ ಒಡಲಾಸೆಯಲಿ ಬಳಲಿಪರೆ ॥ ಕಿಂಚಿದಭಿಮಾನಿಲ್ಲೆ ನಿನಗೆ ಪ್ರಾ। ಪಂಚ ಸೂತ್ರ ಮುರಾರಿ ಎನ್ನಯ। ಸಂಚಿತಾರಬ್ಧಾಗಮವ ನೂಕುವರು ದಾರುಂಟೈ ॥ ೧ ॥

ಅರಸು ಮುಟ್ಟಿದ ನಾರಿ ಮಾನ್ಯಳು । ಪರಸು ಹೊಂದಿದ ಲೋಹ ಚಿನ್ನವು । ಪುರುಷ ನಿನ್ನವನೆನಿಸಿ ಕ್ಷುದ್ರರ ವಶವ ಮಾಡುವರೇ ॥ ಅರಿದುದಾವದು ಘಟಕಾಘಟಕನೆ । ಸಿರಿ ವಿರಿಂಚಿ ಶಿವೇಂದ್ರರೊಡೆಯನೆ । ಪರಮ ಪಾತಕಿ-ಯೆಂದರೇನ್ಮುದ್ರಾಂಕಿತನು ಕಾಣೈ ॥ ೨ ॥ ಮಧ್ವರ ಗಣನೆ ನಿನ್ನ ಶರಣರು । ಒದ್ದು ಭವಸಾಗರವ ದಾಟಿದ । ರುದ್ಧಟರು ನಾ ಕೇಳಿ ಕಕುಲತೆಯಿಂದ ಮನೆ ಹುಗುವೆ ॥ ಎದ್ದು ವಿಷಯದೊಳಗೆ ಸುಧೆಯೊಳು । ಎದ್ದು ನಿನ್ನ ಸಂಬಿದವನು ನಾ । ಶುದ್ಧ ಭಟಜನ ಪಾಲ ಪ್ರಸನ್ವೆಂಕಟಾದ್ರೀಶಾ ॥ ೩ ॥

೧೫೯

**ರಾಗ—ವರಾಳಿ** **ತಾಳ—ತ್ರಿವಿಡಿ**

ರಾಮನೆನ್ನಿ ರಾಮವೆನ್ನಿ ವ್ಯೋಮಕೇಶಗೆ ದಿವ್ಯ । ನಾಮಾವೃತವಿತ್ತ ರಾಮನೆನ್ನಿ ರಾಮನೆನ್ನಿ ॥ ಪಲ್ಲ ॥ ಪಾತಕವನು ಮಾಡಿ ಪಾತಕರೊಡನಾಡಿ । ಸೂತಕಾಗಿ ವಿಪ್ರಘಾತಕಾಗಿ ॥ ಜಾತಿ ಬಾಹಿರನಾಗಿ ಧಾತುಗೆಟ್ಟವಗೆ ಶ್ರೀ । ಸೀತಾಕಾಂತನ ನಾಮ ಪೂತಗೈದಕಾರಣ ॥ ೧ ॥ ಕದ್ದು ಬಂಗಾರ ಮೆದ್ದು ಅಭಕ್ಷಣ । ಬದ್ಧ ದುರ್ಬಲರ ಸೊಕ್ಕಿದ್ದು ನಿತ್ಯಾ ॥ ಶುದ್ಧಾವಿಹೀನನಾದ ಮಗ್ಯ-ಪ್ರಾಶನಿಯಾದಾ । ಶುದ್ಧಾತ್ಮಕನಿಗೆ ಶುದ್ಧಕರನು ಮೂಲ ॥ ೨ ॥ ಪರಪತ್ನಿ ಗಮಿಸಿ ಭೂಸುರ ವೃತ್ತಿ ಭೇದಿಸಿ । ಪರಿತಾಪಿಸೀಸದೆ ಪಾಮರನಾಗಿಹ ॥ ನರಗೆ ಪಶ್ಚಾತ್ತಾಪ ಬರಿಸುವಾ ಪ್ರಸನ್ವೆಂಕ । ಟರಸನೆ ತುದಿಯಲಿ ಹೊರೆವ ಬಿಡದಲಿ ರಘು ॥ ೩ ॥

೧೬೦

**ರಾಗ—ಮಾರವಿ** **ತಾಳ—ಆದಿ**

ವಾರಿಜಾ ರಮಣಾ ನಮ್ಮ ಸಾಕೋ ॥ ಪಲ್ಲ ॥ ಉಬ್ಬಸ ಕೇಳುವ-ರೊಬ್ಬರ ಕಾಣೆನು ॥ ಗರ್ಭವಾಸದ ಬಲೇ । ನಿಬ್ಬರ ಕಾಣೋ ॥ ೧ ॥ ಕಳೆವರು ಪ್ರೀಯರ ಕಳಸೀ ಉಳಿವರೂ ॥ ಬಳಲುವಾಗ ಮನದಿ ಸುಳಿಯರಾರೂ ॥ ೨ ॥ ಉಮ್ಮಯಾ ತೀವಿದಾ ನಿಮ್ಮಾ ನಾಗರದಿ । ಒಮ್ಮ್ಯಾದರೂ ಇಡು ಧರ್ಮ ದಯಾಬಾಧಿ ॥ ೩ ॥ ಕಂಗಳಲ್ಲವು ಸೂಜ್ಞ ಕಂಗಳು ಕೊಡು ನೀ । ಪಂಗು

ಗುಲ್ಪಾಸ ಪಾದಂಗಳ ಕೊಡು ನೀ ॥ ೪ ॥ ಕಡೆಯಾ ಮಾತಿಗೆ ಕೈಯ್ಯಾವಿಡಿ ಯನ್ನ ತಂದೆ । ದೃಢ ಪ್ರಸನ್ವೆಂಕಟ ಒಡೆಯಾ ಪೊರೆಯೆಂದೆ ॥ ೫ ॥

೧೬೧

ರಾಗ--ದೇಶಿ ತಾಳ--ಅಟ್ಟ

ಶರಣು ಹರಿ ಆನತ ಜನಾಶ್ರಯ । ದುರಿತ ಕರಿ ಕಂಠೀರವಾ । ಶರಣು ಶ್ರೀ ಭೂವರಹ ದೇವನೇ । ಶರಣು ವರಯಜ್ಞಾತ್ಮಕಾ ॥ ಪಲ್ಲ ॥ ಅನಿಮಿಷರು ಸನಕಾದಿ ಮುನಿಗಳು ಅನುದಿನದಿ ಸ್ತುತಿಗೈಯ್ಯಲೂ । ದನುಜ ಹೇಮಾಂಬಕನ ಕೃತ್ಯಕವನಿ ಬಳಲಿ ಮೊರೆಯಿಡುತಿರೆ ॥ ಘನ ಕೃಪಾಂಬುಧಿ ಕ್ಷೀರವಾರಿಧಿ । ಮನೆಯಲರಿದತಿ ವೇಗದಿ । ವನಜ ಭವನಾ ನಾಸಾಪುಟದಿ ನೀ । ಜನಿಸಿದಗಣಿತ ಮಹಿಮನೆ ॥ ೧ ॥ ಲೀಲೆಯಿಂದಣುವಾಗಿ ಅಮರರ । ಜಾಲಕಚ್ಚರಿಯಾಗಲೂ । ವ್ಯಾಲೆ ಗಿರಿಯಂತಾದೆ ಹರಿಯೆ ತ । ಮಾಲವರ್ಣಾಂಕಿತಮುಖಾ ॥ ಭಾಲ-ಚಂದ್ರ ಸಮಾನವಾದ ವಿ । ಶಾಲ ವಿಮಲ ಚರಿತ್ರನೆ । ಬಾಲ ಸುಬ್ರಹ್ಮಣ್ಯ ದ್ವಿಜ ವರ । ಶೀಲ ಪಾಲಿತ ಚರಣನೇ ॥ ೨ ॥ ವ್ಯಗ್ರ ಪ್ರಳಯಾಂಬುಕ್ಕಿಳಿದು ಘನ । ಘರ್ಘರ ಧ್ವನಿಗಳಿಂ । ಶೀಘ್ರ ವೈರಿಯ ಸದೆದು ವರ ಕೋ್ರ । ಧಾಗ್ರದಲಿ ಮಹಿ ನೆಗಹಿದೆ ॥ ಸರ್ಗ ಜನರಿಂದಮಿತ ಸ್ತುತಿಯನ । ವಗ್ರಹಿಸಿ ವರಕರುಣದಿ । ಉಗ್ರತೇಜ ಪ್ರಸನ್ವೆಂಕಟಗೆ । ಅಗ್ರನಿಲಯ ನಮೋ ಹರೇ ॥ ೩ ॥

೧೬೨

ರಾಗ--ಕನಕ ಕಾಂಬೋದಿ ತಾಳ--ತ್ರಿವಿಡಿ

ಸಲಹು ಸಲಹು ಅಯ್ಯನೇ । ಸಲಹು ಸಲಹು ॥ ಪಲ್ಲ ॥ ಶ್ರೀಗಿರಿ ವಾಸಾ । ನಾಗ ವಿಭೂಷಾ । ಯೋಗಿ ಜನೇಶಾ, ಘಾಘ ವಿನಾಶಾ ॥ ೧ ॥ ಗಜದ ಸುಚ್ಛೈಲಿ ಅಜನ ಕಪಾಲಿ । ದ್ವಿಜಮೌಳಿ ಅಂಗಜಹರ ಶೂಲಿ ॥ ೨ ॥ ಸ್ಫಟಿಕ ಸುಗಾತ್ರಾ ಪಟುಜಲನೇತ್ರಾ । ಕುಟಿಲ ಪ್ರಸನ್ವೆಂ, ಕಟ ಪತಿ ಮಿತ್ರಾ ॥ ೩ ॥

೧೬೩

ರಾಗ—ಮುಖಾರಿ ತಾಳ—ಝಂಪೆ

ಹರಿಯೆ ಎನಗಾರು ಗತಿಯೋ। ನೀನಲ್ಲದೆ ॥ಪಲ್ಲ॥ ಹಿಂದಿನಾಪತ್ತು। ಮರೆತೆ। ಇಂದು ಮಾಯದಿ ಬೆರತೆ ॥ ಒಂದು ಗೂಡಿದವು ಆಗಾ। ಮುಂದಿನರುಹೀಲ್ಲಾ ॥ ೧ ॥ ಹಗಲಶನದ ಕೃತ್ಯ। ಇರುಳು ನಿದ್ರೆಯ ಮಬ್ಬು ॥ ವಿಗಡ ಕಾಮನ ತಡೆ। ತಗಲು ಬಿತ್ತೋ ರಂಗಾ ॥ ೨ ॥ ಅತ್ತಿತ್ತೆ ಸುತ್ತುವನಕ। ಹೊತ್ತು ಹೋಯಿತು ಯವನ ॥ ಮುತ್ತಿಗೆ ಬಿದ್ದಾಗೆ। ಮತ್ತಾರಿಲ್ಲೊ ಸ್ವಾಮಿ ॥ ೩ ॥ ಅಜ್ಞಾನೆಂಬಾಹೀ ಕಚ್ಚಿ। ಯಜ್ಞೇಶಾ ನಿನ್ನಂಘ್ರಿ ॥ ಸಂಜ್ಞಾವಿಲ್ಲದೆ ದುಃಖ। ಮಗ್ನನಾದೆನಲ್ಲೋ ॥ ೪ ॥ ಶ್ರೀಪ್ರಸನ್ವೆಂಕಟೇಶಾ। ತಾಪತ್ರಯ ವಿನಾಶಾ ॥ ನೀ ಪಾಲಿಸಯ್ಯ ವಿಶ್ವ। ವ್ಯಾಪಕ ಸ್ವಾಮಿ ॥ ೫ ॥

೧೬೪

## ಸಾಮಾಜಿಕ ಪದಗಳು

ರಾಗ— ದೇಶಾಕ್ಷಿ ತಾಳ— ಝಂಪೆ

ಅವನೆ ಜೀವಾಂಕಿತ ಪ್ರೇತ ನೋಡಿ ॥ ಭುವಿಗೆ ಭಾರವನು ಹರಿಗೆ ಹಗೆಯವನು ॥ ಪಲ್ಲ ॥ ಹರಿಕಥೆಗೆ ಜೇಸತ್ತು ಹರಟೆಯನು ಕೇಳುವವ। ಹರಿಯ ಗುಣ ಹೊಗಳದೊಣ ಪಂಟು ಬಡಿವವ ॥ ಹರಿ ಮರದು ಮಲಭಾಂಡವನು ತುಂಬಿಕೊಳ್ಳುವವ। ಹರಿಭಟರ ನಡೆನುಡಿಗೆ ಸೈರಿಸದವಾ ॥ ೧ ॥ ಹರಿ ಪ್ರೀಯೆನಾಗದೆ ಅತತ್ತ ಜಾರುವವ। ಹರಿಯುವರಿಗುಣಿಸದೇ ಧನ ಕಳೆವವಾ ॥ ಹರಿಯೊತ್ರಿಗಂಜಿ ಬಲವೆಲ್ಲ ಕಳಕೊಳ್ಳುವವಾ। ಹರಿವ್ರತವ ಬಿಟ್ಟಿತರ ವ್ರತ ಕೊಳುವವಾ ॥ ೨ ॥ ಹರಿಪದಾಂಬುವ ಜರಿದು ಹಲವು ನೀರ್ಕುಡಿಯುವಾ। ಹರಿಯಲಾಂಛನವಿಲ್ಲದ ಚಲುವಿಕೆಯುವ ॥ ಹರಿ ಪ್ರಸನ್ವೆಂಕಟೇಶನ ಪಾದಾಬ್ಜವ ಬಿಟ್ಟು। ಹರಿ ಪರದೈವೆನದೆ ತಮುಸೇರುವ ॥ ೩ ॥

*

೧೬೫

ರಾಗ— ಸಾರಂಗ ತಾಳ— ಆದಿ

ಎಷ್ಟು ಸುಖಿಗಳೊ ಗೋವು ಗೊಲ್ಲತೆ ಗೋಪರು । ಶ್ರೀ ಕೃಷ್ಣನೊಡನೆ ಹಗಲಿರುಳು ಕ್ರೀಡೆಯುಲಿ ಕಾಲ ಕಳೆವರು ‖ ಪಲ್ಲ ‖ ಕೇಹೋ ಕೇಹೋ ತೃಪ್ತೆ ತೃಪ್ತೆ ಅಂಬಾ ಅಂಬಾ ಬಾರೆಯೆಂದು । ಮೋಹದಿಂದ ಕರೆಸಿಕೊಂಡು ಓಡಿ ಓಡಿ ಬಂದು ‖ ಶ್ರೀಹರಿಯ ಹೆಗಲವ್ಯಾಲೆ ಗಳಗಳಿಟ್ಟು ಕದಪು ಕಂಠ । ಲೇಹಿಸಿ ಮೊಗದಿರುವಿ ಶಿರಿ ನಖದಿಂ ತುರಿಸಿಕೊಂಬರು ‖ ೧ ‖ ತುಡುಗನೆಂದು ತುಡುವಿಡಿದು ಅಡಿಗಡಿಗೆ ಅಪ್ಪಿ ಚುಂಬಿಸಿ । ಪಡಿಪದಿದು ಗೋಪಿಯರಿಗೆ ಒಪ್ಪಿಸಿ ಒಪ್ಪಿಸಿ । ಮಡದೆರೆಲ್ಲಾ ಮಧುವೈರಿಯ ಸಂಗ ಸೊಬಗಿಲೋಲ್ಯಾಡುತಲಿ । ಒಡನೆ ಗೋಪಾಲ ಮೂರುತಿಯ ಕಣ್ಣು ಮನದಲಿಟ್ಟು ಸುಖಿಪಾರು ‖ ೨ ‖ ಸಣ್ಣವರಾಡೊಲೊಲ್ಲೆನಲು ಗದ್ದವಿಡಿದು ಮುದ್ದಿಸಿ ನ । ಮ್ಮಣ್ಣ ತಮ್ಮಗಳಿರ್ಯಾಗೆಳೆಯರಿರಾ ಬಾಯೆಂದು ‖ ಆಣೆಕಲ್ಲೊಡ್ಡಿ ಗಜಗನಾಡಿ ಸೋಲಿಸಿಕೊಂಡಳುವ । ಚಿನ್ನರಾಮ ಪ್ರಸನ್ವೆಂಕಟೇಶನ ಉಣ್ಣುವೆಂಜಲ ಸೆಳೆದುಂಬುವರು ‖ ೩ ‖

೧೬೬

ರಾಗ—ವರಾಳಿ ತಾಳ— ಝಂಪೆ

ಏನು ಗತಿಯೊ ರಂಗಾ ನಿನ್ನವ ನಾನಾಗಿ । ಜ್ಞಾನದಂತಿರಲಿಲ್ಲವೋ ‖ ಪಲ್ಲ । ಉಂಡುಂಡು ತುಡುಗ ಕೋಣನ ಪರಿ ಸೊಕ್ಕಿದೆ । ಕಂಡಲಿ ಕುಳಿತೆ ನೊಣನ ತೆರದಿ ‖ ಭಂಡ ಭೂತದ ಮಾತನಾಡಿ ಭಂಡನಾದೆ । ಪುಂಡರೀಕಾಕ್ಷ ನನ್ನಂಥಾ ಪಾತಕಿಗೆ ‖ ೧ ‖ ಬಲು ಶಾಸ್ತ್ರಶ್ರವಣೆಂಬುವ ಮಳೆಗರದೇನು । ಕಲುಗುಂಡಿನಂತೆ ಕೆಟ್ಟಿದೆ ತೊಯ್ಯದೂ ‖ ಹಲವು ಆಧ್ಯಾತ್ಮವನು ಉಸುರೇನು ಚಿತ್ತದ । ಕಳವಳಿಕೆ ನಿಲಿಸಲಾರದ ಪಾಮರನಿಗೆ ‖ ೨ ‖ ಭವದುಃಖನುಂಬಾಗ ನೋವು ಬೇವಿನ ಹಾಗ । ತವಕದಿ ನುಡಿವಾಗ ಕನಸಿನಾಗ ‖ ಅವಿರಳಾ ಅಚ್ಯುತಾ ನಿನ್ನಂಘ್ರಿ ನೆನೆ ಈಶಾ । ಅವಸರಕೊದಗೆಂದೆ ಪ್ರಸನ್ವೆಂಕಟೇಶಾ ‖ ೩ ‖

೧೬೭

ರಾಗ—ಪೂರ್ವಿ ತಾಳ—ಅಟ್ಟ

ಬಣ್ಣಿಸಾಲೆವ್ಮಾ ನಾನೂ ॥ ಪಲ್ಲ ॥ ಬಣ್ಣಿಸಾಲವ್ಮೆ ನಾ ಬಹಳ ಮಹಿಮನ್ನ । ಚಿನ್ಮಯ ನಗಾಧಿಪ ಚಲ್ವ ತಿಮ್ಮಪ್ಪನ ॥ ಅ. ಪಲ್ಲ ॥ ಇಳಿಯಾ ಮಾನಸರೊಳು ಈಕ್ಷಿಸಿ ಕೃಪಾಳು । ಬಲಿದು ಕರುಣದಿಂದ ವೈಕುಂಠ ಪುರದಿಂದ । ಇಳಿದು ಮಂಗಳದೇವಿಯನು ಕೂಡಿಕೊಂಡು ವಿ- । ಮಲ ಸ್ವಾಮಿ ಪುಷ್ಕರ ಮಹೀತೀರ್ಥದ ತೀರಾ । ದಲಿ ಬೇಕಾದ ಧನ ಧಾನ್ಯಾ ಸಂಪದಾ । ಹಲವು ಕಾಮ್ಯವನೀವ ಹೊಗಳಿದರನು ಕಾವಾ । ಸುಲಭರೊಡೆಯನ ಕಂಡೂ ಹಸಿದ ಕಂಗಳ ಹಬ್ಬ ದಣಿಯಾಲುಂಡೂ ॥ ಬಹು ತೋಷಾ । ತುಳುಕುವಾ ಸುಜನವಿಂಡು ಪಾರಂವಾರಾ ॥ ೧ ॥ ಪೇಳಲೇನಯ್ಯಾ ನಾ ಪರಶೀಯ ಸೊಬಗು ನಾ । ಆಲಯದಿಂ ಗಡಾ ಜನಿಜನ ಸಂಗಡಾ । ಟೋಳ ಛಪ್ಪರವೊತ್ತಾ ಛತ್ರಚಾಮರ ಹೊತ್ತಾ । ಕಾಳಿ ಶೀಗುರಿ ಶಕ್ಕೆ ಕಂಬುಕಾಗಳಲಾಕೆ । ಮೇಳೈಸಿ ಮಹಿಮರು ಮಹದಾನಂದದವರು । ಘೋಳಿಡುವರು ಹರಿ ಗೋವಿಂದ ನೆನವರು ॥ ಕಾಲಾಟಾದಲ್ಯವರೂ । ಕೀರ್ತಿಪ ಗೀತ ತಾಳ ದಂಡಿಗೆಯವರೂ ॥ ಬೆಳಗೂವಂಥ ॥ ಸಾಲ ಪಂಜೀನವರೂ ವಾರಂವಾರ ॥ ೨ ॥ ವಾಂಛಿತ ಫಲಗಳು ಒದಗಲು ಹರಿಯೊಳು । ವಂಚನೆ ಇಲ್ಲದೆ ಒಂದೊಂದು ಬಗೆಯಾದೆ । ಕಾಂಚನಾ ಮುಡುಪಿಲಿ ಕಡು ಬದ್ಧಾಂಜಲಿಯಲಿ । ಮಿಂಚುವ ಭಕ್ತಿಲಿ ಮಧುಕರವೃತ್ತಿಲಿ । ಪಂಚಾಬ್ದಾದ್ಯಸುಳರು ಪ್ರಾಯದ ಅಬಲೇರು । ಹಿಂಚಾದಾ ವಯಸಾದಾ ಹಿರಿಯರು ಹರುಷದಿ । ಸಂಚಿತ ಹರಿಕೆಯವರೂ ॥ ತೊಟ್ಟಿಲು ಮನೆ । ಮಂಚವ ಹೊತ್ತವರೂ । ದೇಶಗಳಿಂದಾ ॥ ಕಾಂಕ್ಷೆವಿಡಿದು ಬಂದಾರೂ ವಾರಂವಾರ ॥ ೩ ॥ ಸ್ವಾಮಿ ವರಹಪಾದಾ, ಸರಸಿಜಾಂಬು ಸ್ವಾದಾ । ಶಾಮಹಾತ್ಮ್ಯೆಂಕದಾಶಾತ ಕುಂಭಾಶದಾ । ವೈಮನ ವಾಸನಾ ವಿದಿ ಭವೇಂದ್ರಾಸನಾ । ಕಾಮನ ಪಿತನ್ನಾ ಕಲಿ ಭಯಭೀತನ್ನಾ । ಸೋಮ ಸೂರ್ಯಾಕ್ಷನ್ನಾ ಸಾಮಜ ಪಕ್ಷನ್ನಾ । ಜೀಮೂತಗಾತ್ರನ್ನಾ ಜಿತಶತ್ರುಸೂತ್ರನ್ನಾ । ನೇಮದಿ ಕಂಡೆರಗೀ ॥ ಸ್ವಮಯ್ಯೊಳು । ರೋಮಪುಳಕಿತಾಗೀ । ಸದ್‌ಭಕ್ತರ ॥ ಸ್ತೋಮವು ಮುಕ್ತರಾಗಿ ವಾರಂವಾರ ॥ ೪ ॥ ಗಿರಿಯೊಳ-

ಗಮುಲಂತರ್ಗಂಗೆ । ಪಾಪಾಂತೆ । ವರ ಪಾಂಡು ತೀರ್ಥ ಬಿಲ್ವಾಂಬು ಕಚ್ಛಪ ತೀರ್ಥ । ಶಿರಿ ವರಹ ಮಚ್ಛ ಸಲಿಲ ಪಾವನಲಕ್ಷ್ಮಿ । ಸರ ನಾರದೀಯ ಸರಸ್ವತೀಯ ತೋಯ । ಮೆರೆವ ತುಂಬುರ ಜಲ ಮೊದಲಾದ ಸ್ಥಳಗಳ । ಸರವ ಸಾನಿಧ್ಯದ ಸ್ವಾಮಿ ಪುಷ್ಕರಣಿಯಾ ನೆರೆಕೊಂಡು ಪೂತಂಗರೂ ॥ ಸಿರಿ ಹರಿಪಾದ ಸರಸೀಜರತ ಭೃಂಗರೂ, ಜ್ಞಾನೋನ್ಮತ್ತ ॥ ಭರಿತಾಂಗ ಮತ್ತಾಂ-ಗರೂ ವಾರಂವಾರ ॥ ೫ ॥ ನಳಿನಾಕ್ಷ ಪದವಾರಿ ನಿತ್ಯ ಸೇವಿಸರಿ । ತುಳಸಿ ತುದಿಯಾ ಪೊನ್ನಾ ತಳಗೀಯುದ ಧಾನ್ಯ । ಬಲು ರುಚಿ ಅಪ್ಪಾಲು ಬಕುಳಾನ್ನ ಪೊಂಗಾಲು । ಸಲೆ ಮೃದು ಘಾರಿಗೆ ಶಿಖೆನುಂಡೆಂಣೂರಿಗೆ । ಪುಳಿತಿಕ್ತ ಮಧು ಮಿಶ್ರ ಪುಲಸು ಪಾಲಿನ ದೋಸೆ । ಪಲವು ಪರಿಯ ಘೃತ ಪಕ್ವಪಂಚಾಮೃತ । ಪಾಲತೈಂತೊಳೆ ಮನೋಹರಾ ॥ ಪ್ರಸಾದುಂಡು । ಕಳಿವೇರುವರು ಮನೋ-ಹರಾ, ಅಲ್ಲಿಗಲ್ಲಿ । ನಲಿವ ದಾಸರ ಮೋಹರ ವಾರಂವಾರಾ ॥ ೬ ॥ ಪೂವಿ-ನಂಗಿಯ ಚನ್ನ ಪುಳಿಕಾಪು ಮಜ್ಜನ । ನವ್ಯೋತ್ಸಹದಲ್ಲಿಯ ನರ ಮುನಿ ಸುರ ಸಹ । ಸೇವ್ಯಾನಂದನಿಲಯ ಸಾಮಗಾಯನ ಪ್ರೀಯ । ದಿವ್ಯ ರತ್ನಾಭರಣ ಧೀಧಿತ ಸಂಕೀರ್ಣ । ಹವ್ಯಾಸದನುದಿನ ಹನುಮ ಗರುಡ ಯಾನಾ । ಸವ್ಯಾಪ ಸವ್ಯ ಭವ್ಯಭೂಷಿತ ಸ್ಥಿತ । ಸುವ್ಯಾರೂಢನ ಮೂರ್ತಿಯಾ ॥ ಭೂವೈಕುಂಠ । ಸುವ್ಯಕ್ತವಹ ವಾರ್ತಿಯಾ ಪ್ರಸನ್ವೆಂಕಟ ॥ ಅವ್ಯಾಕೃತನ ಕೀರ್ತಿಯಾ ವಾರಂವಾರ ॥ ೭ ॥

೧೬೬

ರಾಗ—ಆನಂದಭೈರವಿ ತಾಳ—ಝಂಪೆ

ಹುಡಿಯಾ ಹೊರಳೇನು ಬಡಕೊಂಡರೇನು । ಕಡಲಶಯನನೊಳು ಧೃಡ ಭಕ್ತಿ ಇರದೆ ॥ ಪಲ್ಲ ॥ ಐದು ಪಾವಕನೊಳು ಮೈದಡಹಿದರೇನು । ವೈದು ಶ್ವಾಸ ನೆತ್ತಿಲಿಟ್ಟರೇನು ॥ ಬೈದು ಅಡಿವಿಲಿ ತುದಿಕಾಲ್ಮೇಲೆ ನಿಂತರೇನು । ವೈದುನರ್ಜನ ಸಖನ ಪಾದ ಪೂಜಿಸದನಕಾ ॥ ೧ ॥ ತೊಪ್ಪಲ ಮೆದ್ದಘ ತಪ್ಪಾಲಗಿಸರೇನು । ಉಪ್ಪವಾಸದಿ ಅನಿಲ ನುಂಗಾಲೇನು ॥ ತಪ್ಪದೆ ಇಳಿಯ ಸುತ್ತಾಡಿ ದಣಿದರೇನು, ಕಂ । ದರ್ಪನಯ್ಯನ ಬಲವಿಲ್ಲದನಕಾ ॥ ೨ ॥ ಮಧ್ವ ಸರೋವರದಿ ಮೀಯದ ಜನುಮೇನು । ಮುದ್ದು ಕೃಷ್ಣನ್ನ ನೋಡದ

ಅಕ್ಷಿಯೇನು || ಮಧ್ವೇಶ ಪ್ರಸನ್ವೆಂಕಟೇಶನೊಪ್ಪಿರದವನು | ಇದ್ದೇನು ಇಲ್ಲ-ದೇನೀ ಧರಿಗೆ || ೩ ||

೧೬೯

**ರಾಗ—ಸಾರಂಗ** **ತಾಳ—ಆದಿ**

ಹೇಳಿದ ಯಮಧರ್ಮ ತನ್ನಾಳಿಗೆ || ಪಲ್ಲ || ಹೇಳಿದ ಯಮ ತನ್ನಾ-ಳಿಗದವರಿಗೆ || ಖೂಳ ದುರಾತ್ಮರಾಗಿ | ಬಾಳುವರನು ತರ || ೧ || ಹರಿ ಸಂಕೀರ್ತನೆಯ | ನರನಾರಿಯರು ಆ || ದರದಲಿ ಮಾಡಿದ | ವರ ನಿಂದಿಪರ ತರ || ೨ || ಹರಿದಾಸರಿಗುಣ | ಕರಿಯದೆ ಜನ್ಮಾಂತ || ಒರಟು ಮಾತಿನ ಲುಬ್ಧ | ನರನಲ್ಲದೇ ತರ || ೩ || ಹರಿಕಥಾಮೃತ ಉಪ | ಚರಕಾಗಿ ಕೇಳುವಾ|| ಪರನಾರೇರಾಳುವ | ದುರುಳನ ಕಟ್ಟಿ ತರ || ೪ || ಗುರುಹಿರಿಯರೊಳು ಪ್ರತ್ಯು | ತ್ತರ ಕೊಡುವರ || ಮರುಳಾಗಿ ಮಮತೆಯಾ | ಸತಿ ವಶದನ ತರ || ೫ || ಅಂಬುಜಾಕ್ಷನ ಪೂಜೆ | ಜಂಭದಿ ಮಾಡುವ || ರಂಭೆರೊಡನಾಟದ | ಡಂಭನ ಹಿಡಿತರ || ೬ || ಒಳ್ಳೇದು ಹಳಿದು ತಾ ಬಲ್ಲವನೆನುವನ || ಚಲ್ವಾ ಪ್ರಸನ್ವೆಂಕಟಾ | ವಲ್ಲಭಗರಿ ತರ || ೭ ||

೧೮೦

**ರಾಗ—ಬಹಿರಿ** **ತಾಳ—ಝಂಪೆ**

ಕಡೆಗಾಣೆನ್ನೆ ಜನುಮವಾ, ಭವ || ಕಡಲ ಸೇರಿಸು ಗಡನೆ ಮಾಧವಾ || ಪಲ್ಲ || ವಿಷಯಾಷೆ ಥೆರೆಗಳಲ್ಲಿ, ಗೃಹವೇ ಗ್ರಹ | ವಿಷಯ ಸತಿಸುತ ಗುಲ್ಮವೊ || ಹಸಿವು ವಡವಾಗ್ನಿ ದಹಿಸಿತೆನ್ನುದರದಾ | ಲಸಿಕೆ ಸುಳಿ ಭ್ರಮಣ ಘನ್ನಾ || ೧ || ದುಷ್ಟ ಚೌರ್‍ಯ ಹಡಗದವರೂ ಬಿಡದೆ ಬೆನ್ನ | ಟ್ಟಿ ಬಂದಂಜಿ-ಸುವರೂ, ಮನವಾಯು | ನಟ್ಟುಳಿಗೆ ನಿಲವಿಲ್ಲವೊ, ಇಂದ್ರಿಯ ಜಂತು | ಕಟ್ಟಿಲ್ಲದೆಳದೊಯ್ವವೊ || ೨ || ಸಂಸಾರ ಸಾರ ಫೆನಾ, ಭುಂಜಿಸಲು | ಸಂಶಯದ ರೋಗ ನವಿನಾ, ದುರಿತಾಂಬು || ಹಿಂಸೆ ಮಾಡದೆ ಏಳಹಿತೊ ಅಗ್ನಿವ್ಯಾಳ | ದಂಶ ಕ್ಷಣಲವ ಕಾಯಿತೋ || ೩ || ಸುಖವೆ ಬೊಬ್ಬುಳಿ ರಾಶಿಯಾ, ಬಂಧಗಳು | ಸುಖ ಸ್ನೇಹ ಪಾಶಲತೆಯೂ ಅಹಿತಾಗಮದ |

ಕಠೋರ ದುಶ್ಯಬ್ದಕೇ । ಸ್ಮೃತಿ ಹೋಗಿ । ಚಕಿತನಾದೆ ದೀನಬಂಧೂ ॥ ೪ ॥ ಇಂತು ಬಳಲುವದು ನೋಡಿ, ಸಿರಿಲಕುಮಿ । ಕಾಂತ ನಿರ್ದಯನಾದೇ ನೀ, ಪ್ರಸನ್ವೇಂಕಟ ॥ ಕಾಂತ ಸಂತರ ಕೂಡಿಸೋ, ಶ್ರೀ ಮಾರುತಿ । ಅಂತ್ಯ ಯಾತ್ರೆಗೆ ಉದಯಿಸೋ ॥ ೫ ॥

೧೮೧

ರಾಗ—ಶಂಕರಾಭರಣ ತಾಳ—ಝಂಪಾ

ತಲ್ಲಿಕಾರರು ನಿನ್ನ ಬಂಟರು, ರಂಗಾ ॥ ನಿಲ್ಲಲೀಸರು ಸಂಸಾರಿಗಳನು ಕೃಷ್ಣಾ ॥ ಪಲ್ಲ ॥ ಮಳ್ಳಿದರಾಗಿ ಮಾತಾಡಿ ಬಲುಂಡುಟ್ಟು । ಇಲ್ಲದ ತಪ್ಪ- ನೆಣಿಸಿ ಹೊರಿಸಿ ॥ ಸುಳ್ಳು ಕಳವು ಹಾದರದ ಪಾಪ ಭವ । ಬಳ್ಳಿಯ ಹರಿದು । ಮೊಳೆಯ ನೊತ್ತಾಗುಡರು ॥ ೧ ॥ ಕಾಂಚನವಿಡಿದು ಕಕ್ಕಸಬಟ್ಟು ಪೂರ್ವದ । ಸಂಚಿತದಿ ನರಪಶು ಗ್ರಾಸದಾ ॥ ಮುಂಚುವಾ ಬಣವೀಗೆ ಕಿಚ್ಚಿಕ್ಕಿ ಹುಡಿ- ದೂರಿ । ಪಂಚಾನನಂತೆ ಖೋ ಇಟ್ಟು ಕೂಗುವರು ॥ ೨ ॥ ಇದರೆದ್ದು ಕರೆದು ಮನ್ನಿಸಿ ಪೂಜಿಸಿ । ಪಾದುದಕ ಪ್ರೋಕ್ಷಿಸಿಕೊಂಡು ಮರೆಹೊಕ್ಕಾರೆ ॥ ಬದಿಯಾ ಸಂಪದ ಬಂದು ಕಬ್ಬು ಬಾಳೆ ನೆಲ್ಲು । ಗದಿಯ ಸಂಹರಿಸುವರುಪ- ಕಾರಿಗಳೂ ॥ ೩ ॥ ಛಲವಿ ಮಂದಿರ ಹೊಕ್ಕು ಹರಿಸೇವೆ ಗೊಂದಣ । ಗಳಲಿ ಬೇಡಿ ಚಾಮುಂಡೆರೋಡಿಸಿ ॥ ಹೊಲ ಮನೆ ಮಧ್ಯದಾ ಪಾಮರರ ಹಿಡಿ- ತಂದು । ಬಲು ಕಾಸಿಸಿ ಮುದ್ರೆಯೊತ್ತದೆ ಬಿಡರು ॥ ೪ ॥ ಈ ಪರಿ ಭವಸುಖ ಸೂರ್‍ಯಾಡಿ ಎಳದೊಯಿದು । ಶ್ರೀಪದ ಪುರದಿ ಶೆರೆನಿಕ್ಕುವರು ॥ ಶ್ರೀ ಪ್ರಸ- ನ್ವೆಂಕಟಪತಿ ಮುಖ್ಯ ಪ್ರಾಣೇಶಾ । ಈ ಪುಂಡರಿಗೆ ಹೇಳೋ ಇವರ ಸಾಕೆಂದು ॥ ೫ ॥

೧೮೨

## ವ್ಯಕ್ತಿತ್ವದ ಪದಗಳು

ರಾಗ—ಸಾರಂಗ ತಾಳ—ಏಕ

ಏನು ಕಾರಣ ಬಿಧಿ ರಂಗಾ । ನನ್ನ ನ್ಯೂನತೆ ನೋಡುವರೆ ರಂಗಾ ॥ ನಾನೇನು ಅರಿಯೇನೋ ರಂಗಾ । ನೀ ದಾನಿ ನೀನೆ ಗತಿ ರಂಗಾ ॥ ಪಲ್ಲ ॥

ಭಕ್ತಿಯುಂಟೆಂಬೆಯೇ ರಂಗಾ, ಮಿಶ್ರ । ಭಕ್ತಿಯೆ ತುಂಬಿದೆ ರಂಗಾ ॥ ಶಕ್ತಿಯಾ ನೋಡುವೆ ರಂಗಾ, ವಿಷಯಾ । ಸಕ್ತಿಯೆ ಶಕ್ತಿಯು ರಂಗಾ ॥ ೧ ॥ ಜ್ಞಾನ ಪಂಕ್ತಿಪೆ ರಂಗಾ, ಆ । ಜ್ಞಾನದ ಖಣಿ ಕಾಣೊ ರಂಗಾ ॥ ಏನಾರು ವಿರತುಂಟೆ ರಂಗಾ । ಜಠರಾನು ಕೂಲವಿರತೆ ರಂಗಾ ॥ ೨ ॥ ಪೂಜಿಸು ಇನ್ನೆಂಬ್ಯಾ ರಂಗಾ ಹೊಲೆ । ಭಾಜನವುಯವಾಯಿತು ರಂಗಾ ॥ ನಾ ಜಪವರಿಯೇನೋ ರಂಗಾ ಕಲ್ಪಾ । ಭೋಜ ಪ್ರಸನ್ವೆಂಕಟ ರಂಗಾ ॥ ೩ ॥

೧೮೩

**ರಾಗ—ಯಮುನ** **ತಾಳ—ಝಂಪೆ**

ದಯಮಾಡು ದಯಮಾಡು । ಶ್ರೀನಿವಾಸಾ, ಭವ । ಭಯ ನಿವಾರಣ ಭಜಕ ಭಕ್ತರಘನಾಶ ॥ ಪಲ್ಲ ॥ ನೇಮವೆನ್ನಲಿಲ್ಲ ನಾಮದರಿಕೆಯಿಲ್ಲ । ನಾ ಮಹಾಪಾಪಿಯು । ಸ್ವಾಮಿ ನೀನೊಲಿದು ಗಡ ॥೧॥ ಸದ್ಧರ್ಮ ಸರಕಿಲ್ಲಾ । ಶುದ್ಧ ಬುದ್ಧಿಯಿಲ್ಲಾ ॥ ಉದ್ಧರಿಸಿನ್ನನಿ । ರುದ್ಧ ಹರಿ ಕರುಣೀ ॥ ೨ ॥ ಸತ್ಕುಲ ಹೊಂದೇನು । ಸತ್ಕರ್ಮ ಮಾರ್ಗಿಲ್ಲಾ ॥ ಭಕ್ತರಕ್ಷಕ ಪಾಪ । ಮುಕ್ತ ದೇವರದೇವ ॥ ೩ ॥ ಅವಗುಣದ ಎಣಿಕೆಯಾ । ವಿವರ ನೋಡದೆ ಅಯ್ಯ ॥ ಜವನ ಬಲೆಯನು ತಪ್ಪಿ । ಸುವ ಸರೀಸೃಪಶಯ್ಯಾ ॥ ೪ ॥ ಅಜಮಿಳ ವ್ಯಾಧ ಆ । ಗಜ ಅಹಲ್ಯೋದ್ಧರ ॥ ನಿಜ ಪ್ರಸನ್ವೆಂಕಟೇಶ । ಸುಜನ ಪರಿಪೋಷ ॥ ೫ ॥

೧೮೪

**ರಾಗ—ವಸಂತ** **ತಾಳ—ಆದಿ**

ಧಡೆ ಸೇರಿಸು ಭವದಾ ಕಡಲಿನ । ಧಡೆ ಸೇರಿಸು ಹರಿಯೇ । ಕಡೆ ಮೊದಲಿಲ್ಲದ ಕ್ಲೇಸದ ವಾರಿಯ ॥ ಪಲ್ಲ ॥ ಸಾಧು ಸಮಾಗಮ ಸಚ್ಛಾಸ್ತ್ರದ ಶ್ರವ । ಣಾದಿಗಳಿಲ್ಲದೆ ಕೆಡುವೆ ॥ ಮೇದಿನಿಯೊಳು ಮೂಢಾತ್ಮನು ನಾ ಶ್ರೀ । ಪಾದವ ಹೊಂದದೆ ಮಡಿವೆ ॥ ೧ ॥ ಸಾಸಿರ ನಾಮದಿ ತುಲಸೀ ಕುಸುಮವ । ಶ್ರೀಶನಿಗರ್ಪಿಸಲಿಲ್ಲಾ ॥ ಹೇಸದೆ ಬಾರದದನ್ನೆ ಜಯಸುತ । ವಾಸುದೇವ ಕೆಟ್ಟೆನೆಲ್ಲಾ ॥ ೨ ॥ ಮನ ವಶವಾಗದು ತನು ಮಡಿಯಾಗದು । ಕನಸೀಲಿ

ಧರ್ಮವ ನರಿಯೇ || ಒಣ ಮಾತಿಲಿ ದಿನ ಹೋದವು ಪರಗತಿ | ಗನಕೂಲಲ್ಲದು ದೊರೆಯೆ || ೩ || ದುರ್ವ್ಯಸನಕೆ ಮನ ಬೇಸರದೆ ಘನ | ಗರ್ವಿಲಿ ವರ್ತಿಪೆ ನಲ್ಲಾ || ಪರ್ವತ ನೆಗಹುವ ನುಡಿಯನ್ನಾಡುವೆ | ನಿರ್ವಹ ಕಡ್ಡಿಯೊಳಿಲ್ಲಾ || ೪ || ನಿನ್ನ ಗುಣದ ಸಂಬುಗೆ ನನಗಿಲ್ಲಾ | ನಿನ್ನಯ ನಾಮವೇ ಗತಿಯು || ಇನ್ನಾದರೂ ಕಡೆಗಣ್ಣಿಲಿ ನೋಡದೆ ಪ್ರ | ಸನ್ನವೆಂಕಟ ಸಿರಿ ಪತಿಯೆ || ೫ ||

೧೮೫

**ರಾಗ—ವರಾಳಿ** **ತಾಳ—ಝಂಪಾ**

ಒಂದೆರಡೇ ನಾ ಹೇಳಲು || ಎಂದಿಗೂ ತೀರವು ಅಪರಾಧ ಸಿರಿ ಕೃಷ್ಣ || ಪಲ್ಲ || ಪಾಪವಾ ಫಳಿಸೀದಾರೇನುಂಡಾದುಬಲ್ಲೆ | ಆ ಪುಣ್ಯವಂತರಾ ಕೀರ್ತಿಬಲ್ಲೆ || ಈ ಪರಿ ತಿಳಿದೂ ಕೆಟ್ಟ ವೃತ್ತಿ ಬಿಡದಿರೆ | ಆ ಪದ್ಬಂಧು ಇದೇನೊ ಮಾಯವೊ ಸ್ವಾಮಿ || ೧ || ತಾಪತ್ರಯಗಳನುಭವಿಸುವಾಗ ಪಶ್ಚಾ | ತ್ತಾಪವಲ್ಲದೆ ಮಾತೊಮ್ಮೆಗಿಲ್ಲಾ || ಶ್ರೀಪತಿ ನೋಡು ಚಿತ್ತದ ಕಪಟ ವಿಷ | ಯಾಪಾವೆ ವಿಡಿದೀದೆ ಹಿತಹೊಂದದಯ್ಯಾ || ೨ || ಹಣ್ಣು ಹಂಚಿದ ತೆರ ಹೊತ್ತು ಹೋಯಿತು ಕಿಂಚಿತ್ | ಪುಣ್ಯ ಮಾಡಿಹೆನೆಂಬಾ ನಂಬಿಗಲ್ಲಾ || ಚಿನ್ಮಯ ಮೂರುತಿ ಪ್ರಸನ್ವೆಂಕಟೇಶಾ | ನಿನ್ನವನೆಂಬ ಹೆಮ್ಮೆಲಿ ಮಾಡ್ದ ತಪ್ಪು || ೩ ||

೧೮೬

**ರಾಗ—ತೆಲಗ ಕಾಂಬೋದಿ** **ತಾಳ—ಅಟ**

ಬಲ್ಲವರು ಮೊರೆ ಹೊಗ್ವರೆ ನೀನಾವ | ಬಲ್ಲಿದನೆಂದೆನ್ನನುಪೇಕ್ಷಿಪೆ ರಂಗಾ || ಪಲ್ಲ || ಸಲ್ಲದವನು ಸಾಲಗೂಳಿ ನಾನು ಯೆಂದು | ಕ್ಷುಲ್ಲನ ಮಾಡಿ ಓಕರಿಸದಿರೋ || ಒಳ್ಳೆ ಸತ್ಯವ್ರತ ಶರಣನ ಸೆರೆಸಿಕ್ಕಿ | ಕಲ್ಪೊತ್ತು ಪುಲ್ಗಚ್ಚಿ ಹಲ್ಸೇರಿದೆ ನೀನು || ೧ || ಬೇಡಿ ತಿಂದುಂಬ ಬಡವ ಛೀ | ಸಾಕೆಂದೀ ಡಾಡುವದುಚಿತೆ ನೀ ನೃಪರೊಂಚಿಸಿ || ಜೇಡಿ ಮನೆಯ ಕೊಂಡೆ ನೀರಿನ- ರಸನಲ್ಲಿ | ರೂಢಿಯಗೂಡಿ ಬಟ್ಟೊಡಿದೆ ತುಡಗ || ೨ || ನಾ ದೋಷ ಪೂರ್ಣ ನೆನುತ ಮನಬಲ್ಲದು | ನೀ ನಿರ್ದೋಷ ದೂರನು ಶ್ರುತಿ ಪೇಳ್ವದು- || ಭೂ

ದೋಷಾಹರ ಪ್ರಸನ್ವೆಂಕಟ ತಿಳಿಯದೆ। ನಾ ದಾಸನಾದೆ ನಾಮಸ್ವಾದ ಕ್ಷುಚ್ಛಾದೆ ॥ ೩ ॥

೧೮೭

**ರಾಗ— ಶಂಕರಾಭರಣ** **ತಾಳ— ಝಂಪಾ**

ಬಿಡಲಾರೆ ಬಿಡಲಾರೆ ನಿನ್ನಾ ಅಡಿದಾವರೆಯಾ ॥ ಕೊಡು ಕಂಡ್ಯಾ ಅಭಯ ವಿಡಿದೆಮ್ಮಯ ತಂದೆ ॥ ಪಲ್ಲ ॥ ಕೂಗುವೆ ಮನದಣಿಯೆ ಕೃಪಾ-ಸಾಗರನೆಂದ್ವೇಳಿ ॥ ಕೂಗಿದರೊದಗಿ ಕಾಯಿದ ನಾಗನ್ನ ಕೇಳಿ ತಂದೆ ॥ ೧ ॥ ಬಡವ ನಾ ಬಲ್ಲಿದ ನೀ ಕಾಣೊ ಬಾಡದೊನ ಮಾಲಿ॥ ಕಡು ದರಿದ್ರ ಸುದಾಮನ ಕೈಯ್ಯಾ ವಿಡಿದೆಂದು ಕೇಳಿ ತಂದೆ ॥ ೨ ॥ ಡೊಂಕು ನಡೆಗೆ ಕೊಂಕುದೇಹ ಶಂಕಿಲ್ಲದೆಲೆ ಮೂ। ಡೊಂಕಿ ತಿದ್ದಿದಾ ಬಿರಿದಂಕವಾ ಕೇಳಿ ತಂದೆ ॥ ೩ ॥ ಬಲ್ಲೆನೊ ಸೊಲ್ಲನು ನೀನಿದ್ದಲ್ಲೆವ್ರಜದಲ್ಲಿ ॥ ಗೊಲ್ಲರ ಪಲ್ಲಿಗೆ ಕೈವಲ್ಯಾವಾಗೆವು ಕೇಳಿ ತಂದೆ ॥ ೪ ॥ ಅವರು ನಿನ್ನವರು ನಾನವರಾ ಶಿಶುವಲ್ಲೆ ತನ್ನ ॥ ವರ ಹೊರೆವಾ ಪ್ರಸನ್ನೆವೆಂಕಟ ತವರೂರ ಕೇಳಿ ತಂದೆ ॥ ೫ ॥

೧೮೮

**ರಾಗ – ಶಂಕರಾಭರಣ** **ತಾಳ— ಝಂಪಾ**

ಸ್ವಾಮಿ ಸತ್ಯಾಧಿರಾಜ ಮುನಿಗೆಣೆ ಗಾಣೆ ನಾ। ಭೂಮಿಯಾ ಮೇಲೆ ಚತುರ ನಾ ॥ ಸಾಮರ್ಥ್ಯ ನೋಡಿರಿ ಭಕುತಿಯಾ ನರಿಯದ ಪಾಮರರನು ಬಾಗಿಸುವನ ॥ ಪಲ್ಲ ॥ ಗುರು ಸತ್ಯಭಿನವರಾಯನ ಪಟ್ಟದಾನಿಯು। ಧರಿಯ ಮೇಲೋಡುವಂತೆ ॥ ಚರಿಸುತಾ ಖಳರನಂಜಿಸಿ ಕಪ್ಪ ಕೈಕೊಂಡು ಗುರುಪಾದಕೊಪ್ಪಿಸಿ ನಿಂತ ॥೧॥ ಕಲ್ಲು ಕರಗುವುದು ಕೆಚ್ಚು ಮಣಿಯುವದೀ। ದೆಲ್ಲಿಯ ಗಾಡೆಯೆಂದೆನಲು ॥ ಕಲ್ಲೆದೆ ಮಾನಿಸರ ದ್ರವಿಸುವ ಕೆಚ್ಚೆದೆ। ಕ್ಷುಲ್ಲರ ಮಣಿಸುವಾ ಕೇಳಿ ॥ ೨ ॥ ಆಲಸ್ಯವೇ ಮೋಕ್ಷಾಪಾಯವಿದೆಂದು। ಕಾಲನು ಕಳೆಯನು ವ್ಯರ್ಥಾ ॥ ಮೂಲ ರಘುಪತಿ ಪಾದಾರವಿಂದದ। ಮೇಲೆ ಮೇಲರ್ಚಿಪ ಸಮರ್ಥ ॥ ೩ ॥ ಜ್ಞಾನ ಬಕುತಿ ವೈರಾಗ್ಯ ಪುಣ್ಯಾದಿ ಜಪಾ। ಧ್ಯಾನದಿಂದ ಪರಿಪೂರ್ಣ ॥ ಆನಂದ ತೀರ್ಥ ಶಾಸ್ತ್ರಾಂಬೋಧಿ ತಿಮಿಂಗಳ।

ದೀನರ ಸುರತರು ಜಾಣ ‖ ೪ ‖ ತಂದೆ ಸತ್ಯಾಭಿನವತೀರ್ಥರ ಕರಜಾತ। ಎಂದೆಂದು ಸುಜನರ ಪ್ರೀಯಾ ‖ ಇಂದಿರೆ ರಮಣ ಪ್ರಸನ್ವೆಂಕಟೇಶನ। ಹೊಂದಿದಾ ಸದ್ಗುಣಾಶ್ರಯನ ‖ ೫ ‖

೧೮೯

# ವಿಶೇಷ ಕೃತಿಗಳು

## ನಾರದರು ಕೊರವಂಜಿ ವೇಷತಾಳ್ದ ಚರಿತ್ರೆ

**೧ ರಾಗ—ನಾಟ** **ತಾಳ—ಝಂಪೆ**

ಜಯ ಜಯ। ಜಯ ಜಯ। ಜಯ ಜಯ ‖ ಪಲ್ಲ ‖ ಶ್ರೀರಮಾ ರಮಣ ಜಯ ಶ್ರೀಕರ ಗುಣಾಬ್ಧಿ ಜಯ। ಶ್ರೀರುಗ್ಮಿಣೀಶ ಜಯ ಶ್ರೀ ಶ್ರೀನಿ-ವಾಸ ಜಯ ‖ ನೀರಚರ ಕಮಠ ಕಿಟಿ ನೃಹರಿ ವಟು ಭೃಗುಜ ರಘು। ವೀರ ಯದುಪತಿ ಬುದ್ಧ ಕಲ್ಕಿ ಸ್ವರೂಪ ಜಯಜಯ ‖ ೧ ‖ ಶ್ರೀಮತ್ಕಪಿಲ ಋಷಭ ಯಜ್ಞದತ್ತ ಶತ್ರುಘ್ನ। ಕೌಮಾರ ವ್ಯಾಸ ಹಯಗ್ರೀವ ಶ್ರೀಮದಜಿತ ಜಯ ‖ ಸ್ವಾಮಿ ಮಹಿದಾಸ ತಾಪಸ ಉರುಕ್ರಮ ಶೌರಿ। ಶ್ರೀಮೋಹ ಧನ್ವಂತ್ರಿ ಹಂಸ ಶುಕ್ಲಾ ಜಯ ಜಯ ‖ ೨ ‖ ಆನಂದ ಜ್ಞಾನ ಬಲಮಯ ಚಿತ್‌ಸ್ವರೂಪ ಜಯ। ಅನಂತ ಮಹಿಮ ವೈರಾಜ ಪುರುಷೋತ್ತ್ರಮ ಜಯ ‖ ಅನಂತ ಗರುಡ ರುದ್ರೇಂದ್ರಾದಿ ವಂದ್ಯ ಜಯ। ಅನಂತ ಜೀವಗ ಪ್ರಸನ್ವೆಂಕಟ ಕೃಷ್ಣಾ ಜಯ ‖ ೩ ‖

**೨ ರಾಗ—ಸೌರಾಷ್ಟ್ರ** **ತಾಳ—ಬಿಲಂದಿ**

ಶರಣು ಮಂಗಳ ದೇವತಿ ವರ। ಶರಣು ಚಿದ್ಗುಣ ಸಾಗರ। ಶರಣು ಅಗಣಿತಜೀವ ಸುಖಾಕರ। ಶರಣು ವೆಂಕಟಮಂದಿರ ‖ ೧ ‖ ದುರುಳ ದೈತ್ಯರು ಸೊಕ್ಕಿ ವರದಲಿ। ಧರೆಗೆ ಕಂಬನಿ ತರಿಸಲೂ। ತ್ವರದಿ ಸುರರಿಗೆ ಮೊರೆಯನಿಟ್ಟಳು। ಧರಿಸಲಾರೆನು ಎನುತಲಿ ‖ ೨ ‖ ಸರಸಿಜೋದ್ಭವ ಪುರಹೂತಮುಖ। ರರಿದು ಚಿಂತಿಸಿ ಮನದಲಿ ‖ ವರ ಪಯೋಸಿಧಿಗೈದಿ ಸ್ತುತಿಸಲು। ಕರುಣದಲಿ ಅವತರಿಸಿದೆ ‖ ೩ ‖ ಬಂದು ಧರ್ಮದ ವೃಂದ

ರಕ್ಷಿಪೆನೆಂದು । ದೀಕ್ಷೆಯ ಪಿಡಿದು ನೀ ॥ ಅಂದಗೆಡಿಸುತ ದನುಜನಿಕರವ । ಹೊಂದಿ ದ್ವಾರಕಿ ನಗರವಾ ॥ ೪ ॥ ಇಂದಿರೆಯು ನಿನ್ನಿಚ್ಛೆಯನುಸರ । ದಿಂದ ಕ್ರೀಡಿಪಳನುದಿನ ॥ ಮಂದಜನರಿಗೆ ಮೋಹಿಸುತ ನರ । ರಂದದಲಿ ತೋರಿದೆ ಘನ ॥ ೫ ॥ ದೇವ ಋಷಿ ನಾರದರು ಶ್ರೀಪದ । ಸೇವೆಗೋಸುಗ ಕೊರವಿಯು ॥ ಭಾವದಲಿ ಜಗದಂಬೆ ರುಗ್ಮಿಣಿ । ದೇವಿಯಳ ಬಳಿಗೈದಿ ತಾ ॥೬॥ ದೇವ ನಿನ್ನಯು ಬರವ ಬೆಸಸಿದ । ಕೋವಿದತೆಯನು ಪೇಳುವೆ ॥ ಶ್ರೀವರ ಪ್ರಸನ್ವೇಂಕಟ ಕೃಷ್ಣ । ಪಾವನಾ ಮತಿಯ ಕರುಣಿಸೊ ॥ ೭ ॥

**೩ ರಾಗ— ಶ್ರೀ ತಾಳ— ಝಂಪೆ**

ಶ್ರೀರಂಭೆ ಭೀಷ್ಮಕನ ಭೂರಿ ಪುಣ್ಯದ ಗರ್ಭ । ವಾರಿಧಿಯಲ್ಲಿ ಜನಿಸೀ । ನಾರಿ ರುಗ್ಮಿಣಿಯೆಂಬಾ ಚಾರುನಾಮದ ಕಳೆ । ಯೇರಿ ಬೆಳವಳು ಮೋದದಿ ॥ ೧ ॥ ಜನನೀ ಜನಕರೆಲ್ಲ, ತನುಜೇಯ ಹರಿಯಂಘ್ರಿ। ವನಜಕೆ ಕೊಡ ಬೇಕೆನ್ನೆ । ನೆನೆದು ತಾನೊಂದು ರುಗ್ಮನು ದಮಘೋಷ । ತನುಜಾಗೆ ತಂಗಿಯನ್ನು ॥ ೨ ॥ ಕೈಗೂಡಿಸುವೆನೆಂಬಾ ವೈಭವದಲ್ಲಿರೆ । ವೈಮನದೊಳು ಕನ್ಯಳು ॥ ಸುರ್ಯ್‌ಗರಿವುತಾ ಮುರವೈರಿ ಪ್ರಸನ್ವೇಂಕಟ ಕೃ । ಷ್ಣಯ್ಯನೊಳ್ ಮನವಿಟ್ಟಿರೆ ॥ ೩ ॥

**೪ ರಾಗ—ಮಧ್ಯಮಾವತಿ ತಾಳ – ಆದಿ**

ದನುಜಾ ಮಥನ ಹರಿಸೇವೆ ಇದೆಂದು । ಅನಿಮಿಷ ಮುನಿ ಧರಿಗಿಳಿದು ತಾ ಬಂದೂ ॥ ವನಿತೆ ಕೊರವಂಜಿ ವೇಷವ ಧರಿಸಿ । ಜನಪ ಭೀಷ್ಮಕನೋಪ ವನದಲಿ ನಿಲಿಸಿ ॥ ಪಲ್ಲ ॥ ಹಲವು ಕೊರವಿಯರ ಕೂಡಿ ಶೃಂಗರದಿ । ಬೆಲೆಯಿಲ್ಲದುಡಿಗೆ ತೊಡಿಗೆ ಇಟ್ಟು ಮುದದಿ ॥ ಇಳಿಯ ಜನರು ಮೋಹಿಸುವ ಪರಿ ಇಹಳು । ಕೆಳದೇರ ಗಡಣಾದಿ ಚಲುವೆ ಒಪ್ಪಿದಳು ॥ ೧ ॥ ಮಂಜು ಗಾವಿಯ ಸೀರಿ ನಿರಿತೆಗೆದುಟ್ಟು । ಕೆಂಜಾಡೆ ಬಿಟ್ಟೋರೆ ದುರುಬೀನ ಕಟ್ಟು ॥ ಪಂಜಿನೋಲೆಯ ಮೂಗುತಿ ಬಾಲೆ ಇಟ್ಟು ಗುಲ । ಗಂಜಿ ಹೊಂದಾಳೆ ಸರಗಳ ಆಳವಟ್ಟೊ ॥ ೨ ॥ ಚಂಚಲ ನೇತ್ರ ಕಂಜನ ಬಾವುಲಿಟ್ಟೊ । ಮಿಂಚುವ

ಆಭರಣಗಳನು ತೊಟ್ಟು ॥ ಪಂಚಶರ ಪಿತ ಪ್ರಸನ್ವೇಂಕಟ ಕೃಷ್ಣನ್ನ। ಚಿಂತೀಸಿ ಜಯ ಜಯವೆಂದಳು ಕೊರವಿ ॥ ೩ ॥ ಅಂತೂ ॥ ೧೬ ॥

೫ ರಾಗ—ಶಂಕರಾಭರಣ ತಾಳ—ಅಟ್ಟ

ಅಡಿಗಡಿಗೆ ಝಣಝಣರೆಂದು । ನಡೆತಂದು ನಡೆತಂದೂ । ನಡೆತಂದು । ಮುದದಿ ರಾಜಬೀದಿಲಿ ನಿಂದು ॥ ಪಲ್ಲ ॥ ಮೃಡಗಾಹಿತನ ಪಟ್ಟದಾನೆ । ಮಂದಗಮನೆ ಮಂದಗಮನೆ । ಮಂದಗಾಮಿನೆ ಕಡು ಮಾನಿ ಜನರ ಮೋಹಿನೆ ॥ ೧ ॥ ಚಪಲಾ ನೋಟಕೆ ನಾಗರಿಕರು । ನೋಟಕಾರು ನೋಟಕಾರು । ಪಾಠಾಕರು ಲಿಪಿಯ ಚಿತ್ರದೋಲು ನಿಂತರೂ ॥ ೨ ॥ ನಿಪುಣೆ ಕೊರವಿ ಶ್ರೀ ಪ್ರಸನ್ನ ವೆಂಕಟನ । ವೇಂಕಟನ। ಶ್ರೀ ಕೃಷ್ಣನ್ನ ಶ್ರೀಪಾದ ಬೇಡತಿದ್ದಳಣ್ಣಾ ॥ ೩ ॥ ಅಂತೂ ॥ ೧೯ ॥

೬ ರಾಗ—ಮಧುಮಾಧವಿ ತಾಳ—ಏಕ

ಬೆಡಗಿನ ಗಮನದಿ ಎಡಬಲ ಕೋಲಿದೂ । ಕಡಗ ಶಂಖದ ಬಳೆ ನುಡಿ ಸುತಾ ನುಡಿದೂ ॥ ಅಡಿಗೊಮ್ಮೆ ತಿರುಮಲ ಒಡೆಯನ ನೆನದೂ ತ । ಕ್ಕಢ ಧಿಗಿಧಿಮಿಕೆಂದು । ಜಡಿದು ತಾಳ್ವಿಡೀದೂ ಬೀದಿಲಿ ॥ ೧ ॥ ತಿಗುರಿನ ಗಂಧ ಚೆಲ್ವುಗರಿನ ನಾಮಾ । ಮೃಗಮದದ ಬಟ್ಟು ನಗೆಮೊಗದ ಪ್ರೇಮಾ । ಮಗುವನುಡಿಯಲೆತ್ತಿ ಜಗಚಾರಿಯುಮ್ಮಾ। ಹೆಗಲ ರನ್ನದಬುಟ್ಟಿ ಮುಳ್ಳಿವಿಡಿದಮ್ಮಾ ಬಂದಾಳು ॥ ೨ ॥ ನಗರ ಜನರ ಕಣ್ಣಿಗೆ ಕೌತೂಕವೆನಿಸೀ । ಬಗೆ ಬಗೆ ಒಗಟು ಮಾತುಗಳನುಚ್ಚರಿಸಿ ॥ ನಗರಾಧಿಪತಿಯು ಮನೆಯ ಕೇಳಿ ನಡೆದೂ। ಮಿಗೆ ಪ್ರಸನ್ವೆಂಕಟ ಕೃಷ್ಣಗ ಕೈಮುಗಿದು ನಿಂದಳು ॥ ೩ ॥ ಅಂತೂ ॥ ೨೨ ॥

೭ ರಾಗ—ರೇಗುಪ್ತಿ ತಾಳ— ಝಂಪೆ

ಬ್ರಾಹ್ಮಣರಾ ಕೇರಿಗೆ ಬಂದಳಾ ಕೊರವಿ, ಪರ । ಬ್ರಹ್ಮನ ಗುರುತ ಕೇಳುತ್ತ ॥ ನಮ್ಮಮ್ಮ ನಮ್ಮಜ್ಜಿ ನಮ್ಮವ್ವೆ ನೀಡೆಂದು । ಸನ್ಮಾನದಾಲಯವ

ಪೊಗುತಾ ॥ ೧ ॥ ಇಂತಿಪ್ಪ ಸೊಬಗುಳ್ಳ ಕೊರವೆಯನು ಕಂಡ ನೃಪ । ನಂತಃಪುರದ ಸತಿಯರ್ಕೈದೀ ॥ ಕಂತುವಿನ ಜನನಿಗೆ ಕರವೆರಡು ಮುಗಿದು ಏ । ಕಾಂತ ಪೇಳಿದರು ಚನ್ನಾಗಿ ॥ ೨ ॥ ಓರ್ವ ಕಾಲಜ್ಞಾನ ಪೇಳ್ವ ಕೊರಚ್ಯಮ್ಮ ನ । ಮ್ಮೂರ್ರೊಳಗೆ ತಿರುಗುತಿಹಳಮ್ಮಾ ॥ ಸರ್ವೇಶ ಪ್ರಸನ್ವೆಂಕಟ ಕೃಷ್ಣನಾಗಮದ । ನಿರ್ವಚನ ಕರಿಸಿ ಕೇಳಮ್ಮಾ ॥ ೩ ॥ ಅಂತೂ ॥ ೨೫ ॥

೮ ರಾಗ---ಭೈರವಿ ಘಂಟಾರ್ಣವ ತಾಳ---ಆದಿ

ಬಂದಳು ನೃಪನರಮನೆಗೆ ತಾ । ನಿಂದಲ್ಲಿ ನಿಲದೆ ಕಿಲಿ ಕಿಲಿ ನಗುತಾ । ಕುಲು ಕುಲು ನಗುತಾ ॥ ಪಲ್ಲ ॥ ಬಂಥೇಳಿದ ನುಡಿಗೇಳ್ದೂ ಪೂ । ರ್ಣೇಂದು ವದನೆ ಮುದ ತಾಳ್ದು ॥ ಮಂದಿರಕೆ ಕರಸಿದಳು ನಲು । ವಿಂದಲಿ ಬಲು ಬೆಡ-ಗೀನ ಕೊರವಂಜಿ ॥ ೧ ॥ ತಳಪಿನ ಮುತ್ತಿನ ಕಟ್ಟು ಶುಭ । ತಿಲಕದ ಹಚ್ಚೆಯು ಬಟ್ಟೂ ॥ ಅಲಗುವ ಮುಗುತಿಯುಬಲೆ । ಸಲೆ ಬಳಕುತ ಬಡನಡುವಿನ ಚಪಲೆ ॥ ೨ ॥ ಬಟು ಗಲ್ಲದ ಮಕರಿಕಪತ್ರಾ ಪವ । ಳ್ವಾಟಿ ದಾಡಿಮರದನ ಗಾತ್ರಾ । ವಿಟ ಮೃಗ ಸ್ಮರ ಶರ ನೇತ್ರಾ ಕೊರ । ಳ್ದಟಿಸುವ ಮುತ್ತಿನ್ಹಾರಗಳ ಲೊಪ್ಪುತಾ ॥ ೩ ॥ ಧಟ್ಟಡಿ ಮೋಲಿಯ ಪಟ್ಟಕೆಯು ಶ್ರೋಣಿ । ಮುಟ್ಟುವ ಮಣಿಯ ಮಾಲಿಕೆಯು ॥ ಬಿಟ್ಟು ಮಂಜರಗ ಮಾಲಿಕೆಯು ಕಂ । ಕಂಣಿಟ್ಟ ಮೃಗಕೆ ಭ್ರೂಸ್ಮರಕಾರ್ಮುಕೆಯು ॥ ೪ ॥ ತೆಳ್ಳೋದರದ ತ್ರಿವಳಿಯೂ ಜಿಗುಳಿ । ಬೀಳ್ವ ಮಣಿ ಮುಕ್ತಾವಳಿಯೂ॥ ಸಲ್ಲಲಿತ ಸಂಪಿಗೆ ಕಳಿಯೂ ಗೆಲ್ವಾ । ಚಲ್ವೆ ಕೊರವಿ ಪುರವೀಥಿಯ ಬಳಿಯಾ ॥ ೫ ॥ ಕಿಣಿ ಕಿಣಿ ರವದ ಕಿಂಕಿಣಿಯು । ಝುಣಝುಣತ್ಕರಿಪಂದಿಗಿ ಪೈಜಣಿಯು ॥ ಖಣಿ ಖಣಿ ಥೈಯೆಂಬ ಖಿಣಿಯೂ ಕುಚ । ಕುಣಿಸಿ ನಟಿಪ ನಡವಾಂಗನೆಯೂ ॥ ೬ ॥ ಸಿಂಗನ[೧] ಉಡಿಯಲಿ ಕಟ್ಟೀ ಉ । ತ್ಸಂಗಗಳೊಲಪಿನ ಧಿಟ್ಟೆ॥ ರಂಗ ಶ್ರೀ ಪ್ರಸನ್ವೇಂಕಟ ಕೃ । ಷ್ಣಂಗನೆ-ಯನು ಕಾಂಬುವೆನೆಂಬ ಹರುಷದಿ ॥ ೭ ॥ ಅಂತೂ ॥ ೩೨ ॥

---

೧. ಕೂಸಿನ್ನ.

೯ ರಾಗ— ಕನ್ನಡ ಕಾಂಬೋಧಿ ತಾಳ— ವಚನ

ಪದುಮನಾಭನ ರಾಣಿ ವಾಸದಲಿ। ಯದುಕುಲೇಂದ್ರನ ಚರಣೋಚ್ಚಾ-ರಣಿಯಲ್ಲಿರಲೀ ॥ ಒದಗಿ ಬಂದಳು ಕೊರವಿ ಕರವೃತ್ತ ತಾನು। ಚದುರ ಪ್ರಸನ್ವೆಂಕಟ ಕೃಷ್ಣನರಸಿಯನೂ ॥ ೧ ॥ ಅಂತೂ ॥ ೩೩ ॥

೧೦ ರಾಗ—ಕೇದಾರಗೌಳ ತಾಳ— ಅಟ್ಟ

ಎಲ್ಲಿಹಳೆಲ್ಲಿಹಳು ರಾಯನ ಮಗ। ಳೆಲ್ಲಿಹಳು ರಾಯನ ಮಗ। ಳೆಲ್ಲಿ-ಹಳು ನೀಡೆ ಯವ್ವ ॥ ಪಲ್ಲ ॥ ಬಲ್ಲೆ ನಾ ಬಲ್ಲೆ ನಿನ್ನಯ ಮನದಣಿಕೇಯ। ಸೊಲ್ಲು ಕೇಳಿ ನೀಡೆ ಯವ್ವ ॥ ನಿಲ್ಲದು ನಿಲ್ಲದಕ್ಕಿಯ ಚಿನ್ನ ಹಸಿದ ಕೈ। ಒಳ್ಳೇ ಕಜ್ಜಾಯ ನೀಡೆ ಯವ್ವಾ ॥ ೧ ॥ ಕಟ್ಟೋೀಗರಕೆ ಮನವಿಟ್ಟ ಕೊರವಿಯಲ್ಲ। ವ್ಯೃಷ್ಟಾನ್ನವ ನೀಡೆ ಯವ್ವಾ ॥ ಅಟ್ಟಿಟ್ಟ ಪಂಚ[1] ಬಗೆ ಭಿಕ್ಷ ಎನಗಿಂದು। ಇಷ್ಟ ಕಾಣೆ ನೀಡೆ ಯವ್ವಾ ॥ ಶ್ರೇಷ್ಠಾದ ಶಾವಿಗೆ ಬಟ್ಟವಿ ಪಾಯಸ। ಹೊಟ್ಟೆ ತುಂಬ ನೀಡೆ ಯವ್ವಾ ॥ ಇಷ್ಟಣಲೀಕೆನ್ನ ತುಷ್ಟಿಬಡಿಸಿ ಸತ್ಯ। ಗೋಷ್ಠಿ ಕೇಳಿ ನೀಡೆ ಯವ್ವಾ ॥ ೨ ॥ ಮನ್ನಾಣೆ ಇಲ್ಲದೆ ಮನೆಯ ಹೊಗುವಳಲ್ಲ। ಕನ್ನೆ ಬಾರೆ ಮುಂದಕವ್ವಾ ॥ ಮುನ್ನೆ ರಕ್ಕಸನೊಯ್ದು ಮಡದೀಗೆ ಒಳಿ। ತವನೆಲ್ಲ ಹೇಳಿದ್ದೆ ನಾನವ್ವಾ ॥ ನಿನ್ನ ಪ್ರಾಣದ ಪ್ರಿಯನೊಬ್ಬಾನೆ ಪರದೈವ। ಕನ್ಯೆ ಕೇಳಜ ಪ್ರಾಣರವ್ವಾ ॥ ಕಣ್ಣಾರ ಕಾಂಬೆ ನಿಮ್ಮಣ್ಣನ ಪಾಟ ಪ್ರ। ಸನ್ವೆಂಕಟ ಕೃಷ್ಣ-ನಿಂದವ್ವಾ ॥ ೩ ॥ ಅಂತೂ ॥ ೩೬ ॥

೧೧ ರಾಗ—ತೋಡಿ ವಚನ (ಚೂರ್ಣಿಕಾ)

ಈ ವಾಕ್ಯಮಂ ಕೇಳಿ। ತೀವಿದ ತೋಷಂ ತಾಳಿ। ದೇವಿ ರುಕ್ಮಿಣಿಯಕ್ಕ। ಪಾವನ ಹಾಸಂಗಿಯಿಕ್ಕಿ[2] ॥ ಆವಲಿಂ ಬಂದೆವ್ವಾ, ದೇವಲೋಕದ ಕೊರವೆ। ಈ ಒಳ್ಳೇ ಮೆಚ್ಚು ಮಾತು। ಆವಗನುಭವ ಮಾತೇ ॥ ಹೀಗೆಂದಾಸನಂ ಕೊಟ್ಟು। ಬಾಗಿಲೋಳ್ ಕಾವಲಿಟ್ಟು। ಬೇಗ ಪ್ರಸನ್ವೆಂಕಟ ಕೃಷ್ಣ। ನ್ನಾಗ-ಮವ ಕೇಳ್ಕಳವ್ವೆ ॥ ೧ ॥ ಅಂತೂ ॥ ೩೭ ॥

---

೧. ಪಂಚವಿಧ.

೨. ಆಸನ.

೧೨ ರಾಗ –ರೇಗುಪ್ತಿ ತಾಳ– ಅಟ್ಟ

ಕುಳ್ಳಿರೆ ಕುಳ್ಳಿರೆ ಕುಳ್ಳಿರೆ ಕೊರವಂಜಿ । ಪುಲ್ಲಬಾಣನಾಣೆ ಕುಳ್ಳಿರೆ ‖ ಸೊಲ್ಲವ್ಮಾ ಸೊಲ್ಲವ್ಮಾ ಹಲವು ಮಾತಿನ ಜಾಣೆ । ಎಲ್ಲಾ ಬಯಕಿನೆಲ್ಲಾ ಸೊಲ್ಲವ್ಮಾ ಕೊರವಂಜಿ ‖ ಪಲ್ಲ ‖ ಆದರದಾ ಮಾತು ಕೇಳುತ ಕುಳಿತಳು । ಯಾದವರರಸ ಮುಕುಂದನ್ನಾ ‖ ಕೋದಂಡ ಪಾಣಿ ತಿರುವೆಂಗಳ ಮೂರ್ತಿ-ಯಾ । ಪಾದಕ್ಕೆ ಮಾಡಿದಳೊಂದಾನೆ ‖ ೧ ‖ ಮಣಿಮಯದಾ ಬುಟ್ಟಿ ಎಡದ-ಲಿಟ್ಟುಕೊಂಡು । ವನಿತೆ ಪದ್ಮಾಸನವಿಟ್ಟಾಳೂ ‖ ಮಿನುಗುವ ಎಳಿನಗೆ ಅಣು-ಗನ್ನ ಮಲಗಿಸಿ । ವನಿತೆ ರುಕ್ಮಿಣಿಯನ್ನು ಕರೆದಾಳೂ ‖ ೨ ‖ ಜಾಣೆ ಬಾರೆ ಸುಖಪೂರ್ಣೆ ಬಾರೆ ನಾರಿ । ಮಣಿ ಕೇಳೆ ಕಲ್ಯಾಣೆ ಬಾರೆ ‖ ವಾಣಿಪತಿ ಪಿತ ಪ್ರಸನ್ವೆಂಕಟ ಕೃಷ್ಣನ್ನ । ರಾಣಿ ಬಾರೆ ಸುಪ್ರಾಣೆ ಬಾರೆ ‖ ಕಲ್ಯಾಣಿ ಬಾರೆ ಫಣಿವೇಣಿ ಬಾರೆ । ಶುಭ ಶ್ರೋಣಿ ಬಾರೆ ಎಂದು ಕರೆದಾಳು । ಕೊರವಂಜಿ ‖ ೩ ‖ ಅಂತೂ ‖ ೪೦ ‖

೧೩ ರಾಗ—ಕಾಂಬೋದಿ ವಚನ

ಅಮ್ಮ ರುಕ್ಮಿಣಿಯಮ್ಮ ಉಮ್ಮಳಿಯಂ[1] ಬಿಟ್ಟು । ಮೊಮ್ಮರಡೆ ಮುತ್ತಿನ ರತುನ ಕಾಣಿಕಿಟ್ಟೊ ಪರ ‖ ಬೊಮ್ಮ ಪರಸನ್ವೆಂಕಟ ಕೃಷ್ಣನಡಿಗಳ । ನಮ್ಮಿಸಿ ಮನೋರಥವ ಮನದಿ ಬೆಸಗೊಳಲೂ ‖ ೧ ‖ ಅಂತೂ ‖ ೪೧ ‖

೧೪ ರಾಗ—ಸಾವೇರಿ ತಾಳ—ಝಂಪೆ

ಉಂಡ ಊಟ ಕಂಡ ಕನಸು ಪುಂಡರೀಕಾಂಬಕಿಯೇ । ತಂಡ ತಂಡದ ವಾರ್ತೆ ಪೇಳುವೆನು ಸಖಿಯೇ ‖ ಹಿಂಡು ದೈವದ ಗಂಡ ಪ್ರಸನ್ವೆಂಕಟ ಕೃಷ್ಣನ್ನ । ಕಂಡು ಸಾರುವ ಕೊರವಿ ಎಳ್ಳನಿತು ಸಟೆಯರಿಯೇ ‖ ೧ ‖ ಅಂತೂ ‖ ೪೨ ‖

೧೫ ರಾಗ—ಸೌರಾಷ್ಟ್ರ ಚೂರ್ಣಿಕೆ

ಕಾಸಿನಾಸೆಯವಳು ನಾನಲ್ಲ । ಭಾಷೆ ಹುಸಿದರೆ ಬೀದು ಬಿಡುವೆನೆಲ್ಲಾ ‖ ಭಾಷೆ ಪಾಲಕರು ನಮ್ಮ ಸಿದ್ಧರೆಲ್ಲಾ । ಲೇಸಾಲೇಸೆಂದು ಕೇಸಕ್ಕಿ ತಿಮ್ಮಯ್ಯನ

೧. ಮನಸಿನ ದುಃಖ, ಕ್ಲೇಶ.

ಚಿತ್ತವ ಮುಚ್ಚ್ಯಾಲೆ ದುಂಡೆ || ಎನ್ನ ಮನೆ ದೈವ ಎನ್ನಕ್ಕ ಕೇಳೆಯವ್ವ | ತಿರುಮಲೆ ತಿರುವೆಂಗಳಯ್ಯಾ | ವರಹೋಬಲ ನರಸಿಂಗೈಯ್ಯಾ | ಹರಿ ಕಂಚಿವರದ ರಾಜೈಯ್ಯಾ | ಶಿರಿರಂಗದ ರಂಗರಾಯಯ್ಯಾ | ಬದರಿಯ ನರನಾರಾಯಣಯ್ಯಾ || ಪುಂಡಲಿಕವರದ ಪಂಢರಿರಾಯ ಅಮ್ಮ | ಉಡುಪ ಕುಲಜ[೧] ಮನ್ನಾರಿ ಕೃಷ್ಣ | ವಡ್ಡಿ ಜಗನ್ನಾಥ ಅಲ್ಲಾಳನಾಥ | ಕೊಲ್ಲಾಪುರದನಾಥೆ | ಯದುಗಿರಿನಾಥ ಶಿರಿಮುಷ್ಣಿನಾಥ | ಕೃತಪುರದ ವೀರನಾರಾಯಣ | ಕೊಲ್ಲಾಪುರದ ಕನ್ಯೆ | ವೇಲಾಪುರದ ಚನ್ನ | ಅನಂತಶಯನ ಜನಾರ್ದನ್ನ | ಅನವರತ ಪರಸನ್ನ ವೆಂಕಟ ಕೃಷ್ಣನ ರನ್ನೆ | ಇಂತಿಪ್ಪಾನೇಕ ದೈವಗಳು ಏಕವೆಂದು ಏಕಾನೇಕವೆಂದು ಎಂಬಿಸೆನೆ ಕೇಳೆಯವ್ವಾ || ೧ || ಅಂತೂ ||೪೩||

೧೬ ರಾಗ—ಮೋಹನ (ಶಂಕರಾಭರಣ) ಳ—ಆದಿ

ಇಂತಿಪ್ಪ ಎನ್ನ ಮನೆಯ ದೈವ ಆವ | ರಂತವ ಜೊಮ್ಮಾರರಿಯಾರವ್ವಾ ವಿ| ಶ್ರಾಂತಿಲಿ ಕೊಂಡಾಡಿಡೆನವ್ವಾ ನಾನು| ಕಂತುವಿನಣ್ಣನ[೧] ಮಗ ವ್ವ || ೧ || ಇಪ್ಪಲಿಪ್ಪ[೨] ಕೋಟಿ ನಾನಲ್ಲಾ ಹೋಗಿ| ಬಪ್ಪೆ ಕದಿನಾಲ್ಕು ಲ [೩]ಕಕೆಲ್ಲಾ || ಛಪ್ಪನ್ನಾ ದೇಶಗಳ ಸುದ್ದಿನ್ಯೆಲ್ಲಾ! ಕೇಳಿ ಬಪ್ಪವ[೪] ಕಜ್ಜವ[೫] ಕೃಷ್ಣ ಎಲ್ಲಾ ||೨|| ಆವಾವ ದೇಶದ ಸುದ್ದಿ ಕೇಳೌ ನಿನ್ನ| ಭಾವಾದ ಬಯಕೆನೆಲ್ಲ ಕೇಳೌ || ಶ್ರೀವರ ಪ್ರಸನ್ನ ವೆಂಕಟಾದ್ರಿ ಕೃಷ್ಣ ದ್ವಾರಕಿಂದ ಆವಾಗ ಬಪ್ಪನೆಂದು ಕೇಳೌ || ೩ || ಅಂತೂ || ೪೬ ||

೧೭ ರಾಗ—ಶಂಕರಾಭರಣ ಚೂರ್ಣಿಕೆ

ಓ ಅಮ್ಮ ನಿನ್ನವರುಗಳು ಆಬಲ ಮಗು ಮದನ ಕಾಮಾ | ಬಂಡು ಕೋರ ಪದಕಾನು ಚಿಂತಿಸ ಮಾಣಮ್ಮಾ | ನಾ ತಿರುಗಿ ಬಂದ ದೇಶ | ಐವತ್ತಾರು ಸೊಲ್ಲಾಲೆ | ಅಂಗ ವಂಗ ಕಳಿಂಗ | ಕಾಂಭೋಜ ಬೋಟಾ ಕರ್ನಾಟಕಾ | ಘೋಟ ಮಹಘೋಟ ಜಿನ್ನ ಮಹಜನ್ನ | ಜೋನ್ನಗ ಕಾಶ್ಮೀರ ತುರುಷ್ಕ ಮಾಗಧ | ಬಂಗಾಳ ಗೌಳ ಮಾಳವ ಮಲೆಯಾಳ ನೇಪಾಳ ಗೌಡ

---

೧. ಉಡುಪಕುಲಜ – ಚಂದ್ರವಂಶೋತ್ಪನ್ನ.

೧. ಬ್ರಹ್ಮದೇವರ. ೨. ಇದ್ದಲ್ಲೇ ಇರುವ. ೩. ಬರುವ. ೪. ಕಾರ್ಯ.

ಗುರ್ಜರ ಕೊಂಕಣಾ । ದರ್ದುರ ಬರ್ಬರ ಸೌರಾಷ್ಟ್ರ ಮಹಾರಾಷ್ಟ್ರ ಸಂಬಳ । ಮುಂಗಿಳ ಘೋಟಮುಖ । ಯೇಕಪಾದ ಸಾಳ ಸಂಸಾಳಕ । ಆನರ್ತ ಹಮ್ಮಿರ ಕೊಮ್ಮಿರ ವತ್ಸ ಪಾಂಚಾಳ । ರಾಜಶೇಖರ ವಂಶೇಖರ ಯುಗಾಂಧಾರ ಮಧ್ಯ ದೇಶ । ಲಂಬಕರ್ಣ ಶ್ರೀರಾಜ್ಯ ಆಂಧರ ದ್ರವಿಡ । ಆರವ ಕನ್ನಡ ತುಳವ ತುಳಾಂಡ । ಜಾಳೇಂದ್ರ ಕೈಕೇಯ ಕೌಂಸಲ ಕಾಂಚ ಕನ್ನೋಜ ಸವ್ವೀರ ಸಿಂಧು ಕೇರಳ ವೈದರ್ಭ ದೇಶದೋಳ್ ಕುಂಡಿನಾಪುರ ದೊಳ್ ನಿನ್ನ ಗುರುತವ ಕೇಳಿ ಮನದಂಡಲಿಕೆಗೆ ಸಾಗಿದೆನೆ ದುಂಡೇ[೧] ॥ ೧ ॥ ಅಂತೂ ॥ ೪೭ ॥

೧೪ ರಾಗ—ರುದ್ರಾಭರಣ (ಮೆಚ್ಚಬಹುಳ) ತಾಳ—ಅಟ್ಟ

ಈ ನಾಡ ಚರಿಸಿ ನಿನ್ನರಸುತ ಬಂದೆನೆ । ಜಾಣೆ ಬಂಗಾರೆವ್ವ ಕೈ ತೋರೆ, ನಿನ ॥ ಕಾಣುತ ಹಸಿವೆ ನೀರಡಿಕೆಲ್ಲ ಹೋಯಿತು । ಜಾಣೆ ಬಂಗಾರೆವ್ವ ಕೈ ತೋರೆ ॥ ಪಲ್ಲ ॥ ಸಂಧಾನಕ್ಹಾರುವನ ಆಟ್ಟದ್ದಿ ಮೊದಲೇನೆ । ಮಂಗಳ ದೇವಿ ಕೈ ತೋರೆ ॥ ೧ ॥ ನೀಬರದೊಕ್ಕಣಿಕೆ ಯದುರಾಯನರಿತಾನು । ಸೌಭಾಗ್ಯ-ವಂತೆ ಕೈ ತೋರೆ ॥ ೨ ॥ ರಥವನೇರಿಕೊಂಡು ಬರಹ ನೋಡಿಕೊಂಡ । ಜಾಣೆ ಬಂಗಾರೆವ್ವಾ ಕೈ ತೋರೆ ॥೩॥ ಧ್ಯಾನದಾ ಕಳವಳ ಮುಸುಳ[೨] ಗಂಟಿನ ಚಿಂತೆ । ಮೂಣು ಮಂಗಳದೇವಿ ಕೈ ತೋರೆ ॥ ೪ ॥ ಶ್ರೀಭುವನೇಶ ಪ್ರಸನ್ನ ವೆಂಕಟಕೃಷ್ಣ । ತಾ ಬಹ ನೆಲೆದುಂಡೆ[೧] ಕೈ ತೋರೆ ॥ ೫ ॥ ಅಂತೂ ॥ ೫೨ ॥

೧೯ ರಾಗ—ಕಲ್ಯಾಣಿ ಚೂರ್ಣಿಕೆ

ಎಲೆಲೆ ಎಳೆವೆಂಗಳೆ । ಎಲೆ ಹುಲ್ಲೆ ಗಂಗಳೆ । ಮಹಾಭೂಷಣದ ಮೂರು ವೇಣೆ ॥ ಮಡದಿಯರ ಸುಪ್ರಾಣೆ । ಕೀರವಾಣಿ ಕಿಸಲಯಪಾಣಿ ಕಂಜಜ ಬಿಂಬ ಸದನೆ[೧] । ಕುಲಶ ಮಣಿರದನೆ । ಮದನ ಕಾರ್ಮುಕ ಕೋಪಮ ಭ್ರೂಲತೆಯಳೆ । ಮಹಾಲಕುಮಿಯಳೆ । ಅರುಣ ವಿದ್ರುಮಾಧರೆ । ಅಬ್ಜಾಭ ಕಂಧರೆ । ಅರ್ಧ ಚಂದ್ರನ ಪೋಲ್ವಿಡಿಪ ಶ್ರೀಯಳೆ । ಅನರ್ಘ್ಯ ಚೂಡಾಮಣಿಯಳೆ । ಸಿಂಧೂರ

೧. ನವಸುಂದರಯುವತಿ

೧. ಶ್ರಿಂಗಾರದ ಸೊಬಗಿನ ಯುವತಿ. ೨. ವಂಚನ, ಮೋಸ.

ಶೀಮಂತಿನಿಯೆ || ಶಿರಿತಿಲಕ ಶೋಭಿಸಿಯೆ | ಸುಣ್ಣಲ್ಲ ಕದಪು ನಾಶಿಕ ಮಣಿ-ಯಳೆ | ನೂತನೊಜ್ರದೋಲಿಯಳೆ | ನಿಷ್ಕಂತಾ-ಭರಣಿಯಳೆ | ನಿತ್ಯ ಮಂಗಳ ಸೂತ್ರಿಯಳೆ | ನಿಡು ಜಾಲಕ ಮಾಲಿಯಳೇ | ಬುಗುಡೆ ಚಳತುಂಬ ಕೊಪ್ಪಿನ ಕಿವಿಯಳೆ | ಬಾವಲಿನಾ ಗೋತ್ರ ಪೊಂಬರಳಿಲೆ ಲಲಿತ ಬಾಹುಲತೆಯಳೆ | ಲಸತ್ ವನಜ ಕೋರಕಸ್ತನಯಳೆ | ಕಡು ತೆಳೋದರೆ[1] | ನಿಮ್ನನಾಭಿಯಳೆ ಕಂಠೀರವ ಕಟಿಯಳೆ | ಕರಭೋರು ಯುಗಳವಳೆ | ಅಪರಂಜಿ ಕಂಚುಕಾಂಬರೆ ಉತ್ತರೀಯಳೆ | ಅಮೌಲ್ಯ ಕಾಂಚಿದಾಮಾಂಕಿತಳೆ | ಒಟುಗನ್ನಡಿ ಜಾನು-ದ್ವಯಳೆ | ಬಾಣ ಪಂಚಕನ ಬತ್ತಳಿಕೆಯ ಜಂಘೆಯಳೆ | ಕೋಮಲತರಾಂಘ್ರಿ ಸರಸಿಜಯುಗಳೆ | ನೀಲ ಪಚ್ಚ ಪದ್ಮರಾಗ ಹೀರ ಮುತ್ತಿನ ಪೆಂಡೆಯಳೆ | ಕಾಲಂದಗಿ ಮೆಂಟಕಿ ವೀರಮುದ್ರಿ ಕಿರಿ ಪಿಲ್ಲಿಯಳೆ | ಮಣಿಮಯಾಂಗ ಧವಲ ಮಾಂಗಲ್ಯ ಭರಣೆ | ಮದಗಜ ಗಮನೆ | ಪ್ರತಿಯಿಲ್ಲದ ರನ್ನದ ಬೊಂಬೆ | ಪರ ಬೊಮ್ಮನ ಪಟ್ಟದ ರಂಭೆ | ಬಾಬಾ ತಾತಾ ಎಂಬು ವಾಮಕರವ ಬೇಡಲಿತ್ತಳಾ ರುಕ್ಮಿಣಿ ತಾಯಿ || ೧ || ಅಂತೂ || ೫೩ ||

**೨೦ ರಾಗ—ಸಾರಂಗ** **ತಾಳ—ಆದಿ**

ಜಗದಾ ನಾರಿಯರ ಕೈಗಳ ಕಂಡೆನವ್ವಾ | ಮೃಗಮದಗಂಧಿ ನಿನ್ಹೋಲ್ವ ರಿಲ್ಲವ್ವಾ || ೧ || ಯುಗಯುಗಾಂತರ ದೇಶ ದೇಶದಲ್ಲೆಲ್ಲಾ | ಅಗಲ್ಯಾಟ-ವಿಲ್ಲಾ ನಿನ್ನರಸು ನಿನಗವ್ವಾ || ೨ || ಸವತೇರು ಭಾಳುಂಟು ನಿನಗತಿಜಾಣ | ಯುವತೆ ಪ್ರಸನ್ವೆಂಕಟ ಕೃಷ್ಣ ನಿನ್ನ ಪ್ರಾಣ || ೩ || ಅಂತೂ || ೫೬ ||

**೨೧ ರಾಗ—ಬಿಲ್ಹಾರಿ** **ತಾಳ—ಆದಿ**

ಕಣಿ[1] ಕೇಳ್ವಕ್ಕಣಿ ಕೇಳೆ ಕಣಿ ಕೇಳೆ ಚಲ್ವೆ | ಕಣಿ ಕೇಳೆ ನಿನ್ನ ಮನದಾ ಮಾಥೇಳ್ವೆ || ಎಣೆಗೊಳ್ಳದೀರಮ್ಮಾ ಇಂದು ನಾಳೆಂದೂ | ಗುಣನಿಧಿ ಗೋಪಾಲ ಬಹ ದಯಾಸಿಂಧೂ || ಪಲ್ಲ || ತ್ರುಟಿಯುಗವಾಗಿದೆ ನಿನಗೀಗ ಮುಗುಧೆ | ಕುಟಿಲ ಮಾಗಧ ಸಾಲ್ವ ನೆನೆದ ದುರ್ಬುದ್ಧೆ || ಘಟಿಸಾದೆಂದಿಗೂ ಖಳರಾ

---

೧. ತೇಳೋದರಿ (ತೆಳ್ವೋದರಿ.)

೧. ಡಂಗುರ, ಶಕುನ, ಪ್ರಶ್ನೆ.

ಮನೋರಥ ಸಿದ್ಧಿ। ದಿಟವೆನ್ನ ವಾಕು ಸುರಲೋಕ ಪ್ರಸಿದ್ಧಿ ॥ ೧ ॥ ಹಿಂದೊಮ್ಮೆ ಖಳರು ಗೋವಿಂದ ಬಂದಾಗ। ಮಂದಾಮತಿಯಲಿ ಮನ್ನಿಸಾದಿರಲಾಗ ॥ ಇಂದ್ರಾ ಸಿಂಹಾಸನ ಹರಿಗೆ ಕಳುಹಿಸಿದ । ವೃಂದಾ ದೈತ್ಯರಿಗೆಲ್ಲ ಭಯವ ಸೂಚಿ-ಸಿದ ॥ ೨ ॥ ಜಂಭಾರಿ ಕುಲಿಶಾಕಂಜುತ ಪೊಕ್ಕರೆಲ್ಲಾ । ದಂಭಿಸಿದರು ಆಗಾಡಂಬರವೆಲ್ಲಾ॥ ಅಂಬುಜಾಕ್ಷನಿಗೆ ನಿನ್ನ ತಾತಾ ಪೂಜಿಸಿದಾ। ^೧^ಅಂಬರನಾಭಿ^೧^ ತನ್ನೊಳ್ ವಿಶ್ವವ ತೋರ್ದಾ ॥ ೩ ॥ ಅದನೆಲ್ಲಾ ಬಲ್ಲೆವ್ವ ಹರಿಯ ನಿಜ ನಲ್ಲೆ । ಬೆದರಿದೊಲ್ ತೋರ್ವೆ ನಿನ್ನ ಮಾಯವ ಬಲ್ಲೆ ॥ ಪದುಮಗಾಧೀನವಾದ ಸರ್ವಸ್ವತಂತ್ರೆ । ಪದುಮಜ ಭವರ^೨^ ಹೃದಯಾಬ್ಜ ನೀಯಂತ್ರೆ ॥ ೪ ॥ ಕೇಳವ್ವಾ ನಿನ್ನ ಹೆತ್ತವರಿಗೆ ನಿನ್ನ ಮೇಲೆ। ಭಾಳ ಹಂಬಲವಿದೆ ಪಾಪಿ ನಿಮ್ಮಣ್ಣಾ ॥ ಆಲೋಚನಿಲದೆ ನಿಶ್ಚಯಿಸಿದಾನೆ ಶಿಶು। ಪಾಲಗೆ ನಿನ್ನ ಕೊಡಬೇಕೆಂತೈ-ದಾನೆ ॥ ೫ ॥ ಆಗಲ್ಯಾಕವ ನಿಂದಲೀ ಕಜ್ಜ ಬುರ್ರಾ । ಬ್ಯಾಗ ಭೀಷ್ಮಕನಂತ ಬಲ್ಲಾ ಶ್ರೀಧರ ॥ ಆ ಗೌರಿ ಮೌನಿ ಎಂಬವಳಾ ಪೂಜೆಯಲಿ। ಯೋಗವಾ-ಗಿರ್ದಾ ಕಾಪುರುಷ ಸಭೆಯಲ್ಲಿ ॥ ೬ ॥ ಸಾಗರಾಶಯನ ತಾ ಸಮಯಕ್ಕೆ ಬರುವಾ । ನೇಗಿಲಧರನು ಕೃಷ್ಣನ ಕೂಡೆ ಇರುವ ॥ ಮೇಘ ಮುಸುಕಿರ್ದಾ ಚಂದಿರನಂತೆ ನಿನ್ನ। ಯೋಗೇಶ ಪ್ರಸನ್ವೆಂಕಟಕೃಷ್ಣ ನೋಡುವ ಚನ್ನಾ ॥ ೭ ॥ ಅಂತೂ ॥ ೬೩ ॥

೨೨ ರಾಗ—ಭೈರವಿ ತಾಳ—ಜಿಲಂದಿ

ಇನಿತೆಲ್ಲಾ ಕೊರವಂಜಿ ಕರವ ಪಿಡಿದು ಹೇಳಿ। ಕ್ಷಣಕ್ಷಣಕ್ಕೊಡೆಯನ ಹೊಗಳಿ ॥ ನೆನಪಿಗೆ ಬೆಸಕೊಂಡು ಕಾಲಜ್ಞಾನದ ವಾರ್ತೆ। ಎನ ಗತಿ ಅಮ್ಮಯ್ಯಾ ಹೇಳೆಂದಳು ॥ ೧ ॥ ಶ್ರೀರುಗ್ಮಿಣಿಯ ಮನದ ಉಲ್ಲಾಸವೆಲ್ಲಾ। ಪೂರೈಸುವನೆಂಬಾ ನುಡಿಯು ॥ ತೋರುವೆನ್ನಯ ನಾಲಿಗೆಯಿಂದಲು। ಸುರೂವೆ ವೀರಾ ದ್ರಾವಿಡ ವೆಂಕಟಯ್ಯಾ ॥ ೨ ॥ ಶರಣ್ಯಲೆ ಸತ್ಯಾನೆ ಶರಣ್ಯೆಲೆ ನಿತ್ಯಾನೆ। ಶರಣು ಶರಣು ನಿತ್ಯ ಮುಕ್ತ ॥ ಶರಣು ಪರೇಶನೆ ಶರಣವಿನಾಶಾನೆ। ಶರಣು ಪ್ರಸನ್ವೆಂಕಟ ಕೃಷ್ಣ ॥ ೩ ॥ ಅಂತೂ ॥ ೬೬ ॥

---

೧. ಅಂಬರನಾಭಿ (ಅಂಬುಜನಾಭ) ೨. ಭವರ (ಭವಾದ್ಯರ).

೨೩ ರಾಗ—ಮೋಹನ ವಚನ (ದ್ರಾವಿಡ ಭಾಷಾಮಿಶ್ರ)

ಓ ರುಗ್ಮಿಣಿ ತಾಯಾರೆ| ಎನ್ನ ಮನಸಿಲ್ಯನ್ಯ ನಚ್ಚಿ ಕಾರ್ಯಂ | ಕೈಗೂಡೆ ನಾಲು ಎನಕೆ | ಎನ್ನ ಸಂತೋಷ ಪಣ್ಣೆರಾಯಿ || ಓ ಯಮ್ಮ ಎನ್ನ ಪ್ರಾಣ ನಾಯೀ[1]ಘೆಂಘಮ್ಮ ಶ್ರೀಕೃಷ್ಣ | ಒಂದು ಪೊಟ್ಟಣೆ ಕೈಪಿಡಚಿ ಕಲ್ಯಾಣಂ ಪಂಣೆ ಕೊಳ್ಳರಾಂ[2] | ಇಂತ[3] ವಾರ್ತೆ ತಪ್ಪೆನಾಲು ನಾಂ| ಕೊರಚಿಯಲ್ಲೆ ಉನ್ನತ| ಯಯಂ ರುಗ್ಮಂ| ವೆಕ್ಕುತೆ ಕೊಲ್ಲರಂ | ವರ್ದ್ದಾನು ಪೋ ಯಮ್ಮಾ | ಇದಂ ವಾರ್ತೆಮಯ್ಯಂ ಪಣ್ಣಿಕೋ ಅಮ್ಮಾ || ೧ || ಅಂತೂ || ೬೭ ||

೨೪ ರಾಗ—ನಾರಾಯಣಗೌಳ ತಾಳ—ಅಟ

ಮದ್ಯಪಾನಿ ತಮಸ ಯವನಾನ ಕೊಲಿಸಿದನೆ | ನಿದ್ದೆಗೈವ ರಾಯಾ-ನಿಂದಲೀ || ಸದ್ದಿಲ್ಲಾದೆ ಮಥುರಿ ಜನರಾ ಸಾಗರದ| ಮಧ್ಯ ದ್ವಾರಕಿಯಲಿ-ಟ್ಟನೆ || ೧ || ಯವನ ಸೈನ್ಯ-ಜಲಧಿ ಬತ್ತೀಸಿ ಸಾಲ್ವಾದ್ಯರ| ಹವಣ ಮುರಿದು ನಿಜರ ಹೊರೆವನು ನಿನ್ನ || ವಿವಹ ಮಾಳ್ಪೆನೆಂಬ ಮಾಗಧ ಚೈದ್ಯನು ತನ್ನ | ಕುವರನೆಂದು ಮಾನವಿಡಿದಿಹ || ೨ || ಇನಿತರೊಳು ರಂಗರಾಯನು ಮೋಹ-ರದಿ| ಮಣಿರಥವನೇರಿ ಬಾಹೋನೆ || ವನಿತೆ ನಿನ್ನಂದಣ ನೋಡಿ ಜಿಗಿವ ನಲ್ಲಿಂದ| ಘನತರ ವೃಗೇಂದ್ರನಂದದಿ || ೩ || ನರಿಯ ಹಿಂಡಿನೊಳಗಿ-ನಾನೆಯಾ ಒಯ್ವ ತೆರದಿ | ಹರಿ ನಿನ್ನಪ್ಪಿಕೊಂಡು ಹಾರುವ || ಗರುಡ ಅಮೃತ ಕಲಶವ ಸುರರ ಗೆದ್ದು | ಹರುಷದಿಂದೊಯ್ವಂತೆ ಒಯ್ವ || ೪ || ಸರಸಿಯಾಬ್ಜ ಹಂಸ ಒಯ್ವಪೊಲ್ ಪರಮಾತ್ಮ| ತ್ವರದಿ ತನ್ನಾರಥಕೆ ಒಯ್ವನೇ || ಬರಿದೆ ದುಗುಡವ್ಯಾಕೆ ಬಾಲಕಿ ಪ್ರಸನ್ವೆಂಕ | ಟ್ಟರಿ ಕೃಷ್ಣ ನಿನ ಮೆಚ್ಚಗಾರನೇ || ೫ || ಬಂದನೆಂಬ ನುಡಿಯು ಬರುತಿದೆ ಜವದಿ ಕೃಷ್ಣ | ಬಹನೆಂಬ ನುಡಿಯು ಬರು-ತಿದೆ ಜವದಿ ಕೃಷ್ಣ | ಬಹನೆಂಬ ನುಡಿಯು ಬರುತಿದೆ || ೬ || ಅಂತೂ || ೬೩ ||

---

೧. ನಾಯೀ–(ನಯು) ೨. ಕೊಳ್ಳರಾಂ– (ಕೊಳ್ಳನಹಂ)
೩. ಇಂತ – (ಇದಂ)

೨೫ ರಾಗ—ಎರಕಲ ಕಾಂಬೋದಿ ಆಧ್ಯಾತ್ಮ ಗದ್ಯ

ನೀಡೆ ಯವ್ವಾ ಎನ್ನ ಮನೆಯ ಗಂಡನ ಕಾಟ ಘನ್ನ ಯವ್ವಾ। ಕ್ಷಣಕ್ಕೈದು ನಡೆಯುವನವ್ವ। ತಿರೆತಂದರೆ ಇಮ್ಮನ ಬೇಡುವನವ್ವಾ। ಚಂಬಣ್ಣ ಕರಿ ಬಿಳಿಯೆ ಬಟ್ಟೆ ನಮ್ಮತ್ತಿಗಳವ್ವಾ। ಆರುಮಂದಿ ಗಂಡನ ಗೆಳೆಯರವ್ವಾ। ಏಳು ಪದರು ಮೂರು ತ್ಯಾಪಿ ಗಡಶವ್ವಾ। ಗುಂಡಲಿ ಬಿದ್ದರೆ ಸುಲಿಗೆ ಮಾರೆವ್ವ। ಗುಡಲೊಳು ಮೂರು ವಲೆ ಉಂಟವ್ವ। ಎಪ್ಪತ್ತೆರಡು ಸಾವಿರ ನೂಲಿನ ಶಿಂಬೆಗಳವ್ವ। ಕೊರವನ ಕೈಯಿಚ್ಚಿ ಮೂರು ನಾಯಿಗಳವ್ವ। ಕೊಬ್ಬಿನ ಸವತೇರು ಎಂಟು ಮಂದಿ ಕೊರವಗೆ ಮೆಚ್ಚು ಮಾಡುವರವ್ವ। ಒಂಭತ್ತು ಗುದ್ದಿನೊಳಗೆ ಹತ್ತು ಹೆಗ್ಗಣದ ಓಡ್ಯಾಟವ್ವ। ಎಣಿಕಿಲ್ಲದ ಕುತ್ತುಗಳುಂಟವ್ವ। ಸಂಸಾರದೊಳು ಎಳ್ಳಿನಿತು ಸುಖವಿಲ್ಲವ್ವಾ। ಅತ್ತೆಗಳಾಟ ಗಂಡನ ಬ್ಯಾಟ। ಸವತಿಯರ ಕಾಟ। ನೆರೆಹೊರೆಯವರ ನೋಟಾ ಮನಿಯ ಮಾಟಾ। ಗತರಸದೂಟಾ। ಕಂಜಿ ನಡುನಡುಗಿ। ಮೂರರ ಹಾದಿಯ ಮೆಟ್ಟಿ ಬಂದು। ಆರೂರ ಅರಸಿನ ಮೊರೆ ಬಿದ್ದೆನವ್ವ। ವೈದರ್ಭದೇಶದೋಳ್ ಕುಂಡಿನಾಪುರದೊಳ್ ನಿನ್ನ ಗುರುತವ ಕೇಳಿ ಉಪವನದ ಪ್ರದ್ಯೋತನಾಳ್ವ। ಎರಡು ಭಾವಿಯ ಮ್ಯಾಗಣ ಹುವ್ವಿನ ತೋಟದ ನಡುವೆ ಬುತ್ತಿಯನುಂಡು। ನಿನ್ನ ಕಂಡು। ಕುಂತಳಾಪುರದಲ್ಲಿ ಕುಳಿತುಂಬ ಬ್ರಹ್ಮಾನಂದದವರ ಭಾಗ್ಯವ ಬೇಡ ಬಂದಿನೆ ಯವ್ವ। ಹಸುವಿಗೆ ಹಾಲನೆರೆ ಯವ್ವಾ। ಶಿಶುವೀಗೆ ನವನೀತ ನೀಡೆ-ಯವ್ವ। ಭಂಗಾರೆವ್ವಾ ಶಿಂಗಾರೆವ್ವಾ। ಸೋರ್ಮುಡಿಯವ್ವ[೧]। ಮಲ್ಲಿಗೆದುರುಬು ಸಂಪಿಗೆ ಮುಡಿಯು। ಪಚ್ಚ ಮರಗು ಮುಡಿವಾಳ। ಶಾವಂತಿಗಿ ತುರುಬಿನವ್ವ। ಪ್ರಸನ್ವೆಂಕಟ ಕೃಷ್ಣನ। ತೋಳ್ತಲಗಿಂಬನವ್ವಾ ನೀಡೆಯವ್ವಾ ॥ ೧ ॥ ಅಂತೂ ॥ ೭೪ ॥

೨೬ ರಾಗ—ದೇಶಿ (ಮುಖಾರಿ) ವಚನ

ಇಂಥಾಧ್ಯಾತ್ಮವಂ ಪೇಳಿ। ಕಂತುವಿನ್ಯೈಯ್ಯನ ಕಾಂತಿಯ ಸಂತಸ ಪಿಡಿಸಿ। ಅಂತರಂಗದಿ ಚಿಂತಾಯಕನನ್ನೇ ನೆನೆದು। ಭ್ರಾಂತಿ ಪರವಶದಂತೆ

೧ ಸೋರ್ಮುಡಿಯವ್ವ (ಸೋಲ್ಮುಡಿಯವ್ವ)

ಕೆಂಜೆಡೆಯಂ ತೂಗಿ ತೂಗಿ | ಅಂತದತ್ಯಂತ ತೂಳಂ ತುಂಬಿ | ಇಂತೆಂದಳಾ ಕೊರವಂಜಿ || ೧ || ಅಂತೂ || ೭೫ ||

**೨೭ ರಾಗ— ಬವ್ರಳ** **ತಾಳ— ಆದಿ**

ಹಿಂಡು ಭಂಡರೆಲ್ಲ ಕೂಡಿ ನಿನ್ನ ಮುಚ್ಚಲು[೧] ಎತ್ತಿ | ಕೊಂಡು ಒಯ್ವ ಜಾಣ ಬರುತಾನೆ || ೧ || ಪುಂಡರೀಕ ಸುರಗಿ ಖಡ್ಗ | ಭಂಡಿ ಪಾಲ ನುಗ್ಗು ಮಾಡಿ | ದಂಡಿಸುವ ಜಾಣ ಬರುತಾನೆ || ೨ || ಮುಂಡೆಯಲ್ಲಿ ಪಚ್ಚ ಚೂಡ-ವಿಟ್ಟು ರುಗ್ಮನಭಿಮಾನ | ಕೊಂಡೇನೆಂಬ ಜಾಣ ಬರುತಾನೆ || ೩ || ಕುಂಡಿನಾಪುರದಲ್ಲಿ ನೆರದ ಕೊಂಡಿ ಕುಹಾಕರ ತಲೆಯ | ಚಂಡನಾಡ್ವ ಜಾಣ ಬರುತಾನೆ || ೪ || ತಂಡ ತಂಡದಲ್ಲಿ ನಿನ್ನೈಯ್ಯನಾ ಸದ್ವಾಸದನನ್ನ | ಉಂಡೆ-ನೆಂಬ ಜಾಣ ಬರುತಾನೆ || ೫ || ಲೆಂಡ ದಾನವಾರಿ ಪ್ರಸನ್ನ ವೆಂಕಟ ಕೃಷ್ಣ ಬೊ | ಮ್ಮಾಂಡ ಪತಿ ಜಾಣ ಬರುತಾನೆ || ೬ || ಅಂತೂ || ೭೧ ||

**೨೮ ರಾಗ—ಸೂರಟಿ** **ತಾಳ—ಝಂಪಿ**

ಚನ್ನಿಗ ಕೊರವಂಜಿ ಮಾತು ಶ್ರೀ | ಕನ್ಯೆ ಕೇಳಿ ನಲಿವಾಂತು || ಮನ್ನೀಸಿ ಗುಣವ ಕೊಂಡಾಡಿ ಮುಕ್ತಿ | ರನ್ನಗಾಣಿಕೆಯನು ನೀಡಿ[೧] || ೧ || ಎಲೆ ಸತ್ಯ ಲೋಕದ ಕೊರವೆ ನೀ | ಬಲು ಸತ್ಯ ನುಡಿದೆ ನಾನರಿವೆ || ಛಲದಂಕ ದೇವರ ದೇವ ಈ| ಖಳರೊಳು ಒಯ್ವ ದರಿದೆ ಯವ್ವಾ || ೨ ||ಹರಿರಥವೇರಿ ಬಾಹೋವ ಕಾ | ಪುರುಷರ ಮತವ ಕೆಡಿಸುವಾ || ಸಿರಿ ಪ್ರಸನ್ವೆಂಕಟ ಕೃಷ್ಣಾ[೨] ಬಂದು | ಹೊರವದುಂಟೇನವ್ವಾ ರಮಣಿ || ೩ || ಅಂತೂ || ೭೪ ||

**೨೯ ರಾಗ—ಮುಖಾರಿ** **ತಾಳ—ಆದಿ**

ನಂಬತೀನೆ ನಿನ್ನ ಮಾತು ಕೆಳದಿ ಕೊರವೆಮ್ಮಾ ನ | ಮ್ಮಂಬುಜಾಕ್ಷ ಬಾಹನೇನೇ ದೇವಿ ಕೊರವೆಮ್ಮಾ || ಪಲ್ಲ || ಉಡಿಯ ಕಂದನಾಣೆ ಇಡುವೆ

---

೧. ಮುಚ್ಚಲು—(ಮೆಚ್ಚಲು)

೧. ಮುಕ್ತಿ ರನ್ನಗಾಣಿಕೆಯನು ನೀಡಿ — (ಮುಕ್ತಿ ಆನಂದದೂಟವನು ನೀಡಿ)

೨. ಕೃಷ್ಣಾ — (ರಮಣ)

ನಂಬೆ ರುಗ್ಮಿಣಿ ನಾ | ನುಡಿವ ನಾಮುದಾಣೆ ಇಡುವೆ ನಂಬು ರುಗ್ಮಿಣಿ ॥ ೧ ॥ ಎಡದ ತೋಳು ತೊಡೆಗಂಗಾಳು ಹಾರಲೊಳಿತೇನೆ[೧] ಚಿಲಿಪಿಲಿ ॥ ನುಡಿವಾ ಶಕುನ ಎಡದಾ ಗೌಳಿಯಾ ನುಡಿಯೂ ಒಳಿತೇನೇ ॥ ೨ ॥ ಕಡಲಾಶಯನ ನಿನ್ನ ಪ್ರಾಣದೊಡೆಯ ಬಪ್ಪಾನೌ ಎನ್ನ । ಪಡದನಯ್ಯಾ ಪ್ರಸನ್ವೆಂಕಟ ಕೃಷ್ಣ ತಪ್ಪಾನೌ ॥ ೩ ॥ ಅಂತೂ ॥ ೮೭ ॥

೩೦ ರಾಗ—ಕನ್ನಡ ಕಾಂಬೋದಿ (ಮೂಂಡ) ತಾ— ಝಂಪಾ

ನಿನ್ನ ಗಂಡ ಬೆಣ್ಣೆಗಳ್ಳ । ಕನ್ಯೆ ಗೊಲ್ಲತೇರ ನಲ್ಲಾ । ಕಣ್ಣಿವೆ ಸನ್ನೆಗಾರ ನಂದಗೋಪ ಕುಮಾರ ॥ ಪಲ್ಲ ॥ ಚಿನ್ನತನದಿ ದಶಲಕ್ಷಾ । ಚಿನ್ನರ ಪಡದ ದಕ್ಷಾ | ಹೊನ್ನ ಕೊಳಲೂದಿ ಮೂಜಗವನ್ನು ಮೋಹಿಸುವ ॥ ೧ ॥ ಉನ್ಮತ್ತ ಮಾತುಳನ ತುಳಿದ ಪೆತ್ತರ ಪೊರದ । ಮನ್ನಿಸಿ ಪಾಂಡವರ ಕಾಯ್ವಾ । ಚಿನ್ಮಯಾ ಸುಖದಾ ॥ ೨ ॥ ಪೆಣ್ಣು ಹದಿನಾರು ಸಾವಿರ | ನೂರೆಂಟನಾಳ್ವ ಚದುರಾ । ನಿನ್ನ ಪ್ರಾಣಪ್ರಿಯ ಬಂದ ಪ್ರ | ಸನ್ವೆಂಕಟ ಮುಕುಂದಾ ॥ ೩ ॥ ಅಂತೂ ॥ ೯೦ ॥

೩೧ ರಾಗ—ಕಾಪಿ ವಚನ

ನುಡಿ ನುಡಿ ನುಡಿಯುಲಿ ಬಡನಡುವಿನ ಮಡದೇ । ನಿನ್ನುಡಿಗುಚಿತವ ಕೊಡುವೆ ನಡುವಿಡುವೆ । ಮನವಿಡುವನೆ ಕಡಲೊಡೆಯ ಕೈವಿಡುವನೆ ॥ ಎನ್ನ ಕಡೆಯ ನೋಡಿ ನುಡಿವನೆ ಸವಿನುಡಿಯ । ಕಡು ಬಲಿಭುಜ ಗಡಣಂಗಳ ನಡುವ್ವಂಸನ ಪಡಿಮಿಡುಕುವೆ । ನಡೆ ಬ್ಯಾಗೆಂದು ಘಡೆ ಗೂಡಿಹಲಿಯೊಡ- ನಾಗಮ ನುಡಿಯೆ । ನಿನ್ನುಡಿಗಮೃತವ ಪಡಿಯೆ । ಮತ್ತೀ ಜಡ ಜಗಗಳ ಕೊಡಿಯೆ | ಪ್ರಸನ್ವೆಂಕಟ ಕೃಷ್ಣರೇಯನ ಜಡಿಯಳಿ । ನುಡಿ ನುಡಿಯೆ ಕುಡಿ- ನುಡಿಯೆ ॥ ೧ ॥ ಅಂತೂ ॥ ೯೧ ॥ ನುಡಿಗಳು.

---

೧. ಹಾರಲೊಳಿತೇನೇ — (ಹಾರೋದೊಳಿತೇನೇ)

— ನಾದನಾಮ ಕ್ರಿಯೆ ತಾಳ— ಝಂಪಿ

ಕೇಳೆ ನರಸಿಂಗನಂಗನೆಯೆ ಇದೂ || ಪಲ್ಲ || ನರಿಗಳು ಬಲ್ಲವೇನೆ ನಲಿದು ನೀನು | ದುರುಳಾರಿಗೆ ದಕ್ಕ ಬಲ್ಲೀನವ್ವಾ ನಿನ್ನಾ || ಚರಣೆ ಎಲ್ಲ ಜಗದ್ವಿಡಂಬನವ್ವಾ, ಹರಿ | ಬರುತಾನೆ ಗುರುತಗಂಟನಿಕ್ಕವ್ವಾ || ೧ || ನನ್ನ ತರಳನಾಣೆ ಸಟೆಯನಾಡೆನವ್ವಾ | ಇನ್ನೊರೆದ ವಾಕು ಸಾಕ್ಷಿ ಬರುತಾನವ್ವಾ|| ಮನ್ನೆ ಅರಕೆಯುಳ್ಳ ತಾಯಿಯಾದಾರೆ ನೀ | ಎನ್ನ ಕರೆಸಿಕೊಳ್ಳೇ ನಿನ್ನ ಮನೆಗೆ ನೀರೆ || ೨ || ನಿನ್ನ ಹೆಸರ ತಕ್ಕ ಊಟವ ನೀಡೆ ನಾ | ಘನ್ನ ಹಸಿದೆನೆಂದು ಉಂಡು ಕೊರವಿಯು ಪ್ರ | ಸನ್ನವೇಂಕಟ ಕೃಷ್ಣನ ರಾಣಿಗೆ | ಚನ್ನಾಗ್ಹರಿಸಿ-ದಾಳು ಬಸರು ಬೇಗಾಗೆಂದು || ೩ || ಅಂತೂ || ೯೪ ||

೩೩ ರಾಗ—ಧನಾಶ್ರೀ (ನಾಗ ಗಾಂಧಾರ) ತಾಳ— ಆದಿ

ಚಕ್ಕನೆ ನಿಂತಳು ಕೊರವೆವ್ವಾ ಕಂಡು | ಫಕ್ಕನೆ ನಿಂತಳು ರುಗ್ಮಿಣೆವ್ವಾ ಪ್ರಾಣ || ದಕ್ಕರಾ ಬಿಡಲಾರೆ ನಿನ್ನ ಗೆಳತೆ ಪ್ರೇಮ | ಉಕ್ಕುತ್ತಿದೆ ನೀ ಹೋಗುವದೋತೆ ಎನಲು ನಕ್ಕು || ೧ || ಶ್ರೀ ಗೋಪಾಲ ಬಾಹನಕ ನಿಲ್ಲೇ ವಿಯೋಗ ತಾಳಲಾರೆ ನೀ ಬಲ್ಲೇ || ಹೀಗೆನ್ನೆ ಜೇಡಿಕೊಂಡಳು ಮರಳೆ ನೆನ | ದಾಗೆ ಬಾಹೆನೆಂಥೇಳೆ ತೆರಳೆ | ಅನುರಾಗದಿಂದಾ || ೨ || ಆವ ಪರಿಯಿಂದಲೇ ಹರಿಸೇವೆ ಮಾಡಿ | ದೇವ ಋಷಿ ನಿಜಾನಂದ ತೀವಿ || ಶ್ರೀವರ ಪ್ರಸನ್ವೆಂಕಟ ಕೃಷ್ಣನ ಮಹ | ತೇವಿಡಿದು ಹೊಗಳುತ ಮುನಿರನ್ನ ರಾಮೆಯಾಜ್ಞದಿ || ೩ || ಅಂತೂ || ೯೭ ||

೩೪ ರಾಗ—ಧವಳಾರ ತಾಳ—ಆದಿ

ಸುರ ಋಷಿ ಪೇಳ್ದ ವಕ್ಕಣಿಯಾ | ಹರುಷಾದಿ ಕೇಳ್ದ ರುಗ್ಮಿಣಿಯಾ || ಅರಸು ಪ್ರಸನ್ನ ವೆಂಕಟಕೃಷ್ಣ | ನಿರುತದಿ ಜಯವ ಸಮಗೀವ || ೧ || ಜಯ ಜಯ ಚಿನ್ಮಯ ಮೂರ್ತಿ | ಜಯ ಜಗನ್ಮಯ ಸ್ವಚ್ಛ ಕೀರ್ತಿ || ಜಯ ಜಯ ಪ್ರಸನ್ನವೆಂಕಟಕೃಷ್ಣ | ಜಯ ಮೂರ್ತಿ ನಿನಗೆ ಶರಣು ಶರಣಾರ್ತಿ || ೨ || ಅಂತೂ || ೯೮ ||

೧೯೦

## ನಾರಾಯಣ ಪಂಜರ

**ರಾಗ—ಸಾರಂಗ** **ತಾಳ—ಝಂಪೆ**

ನಾರಾಯಣಾಯ ನಮೋ ನಾರಾಯಣಾಯ ನಮೊ । ನಾರಾಯಣಾಯ ನಮೊ ನಾರಾಯಣಾ ॥ ನಾರದರ ಮುಖದಿಂದ ನರಕಸ್ಥರೆಬ್ಬಿಸಿದೆ । ನಾರಾಯಣಾಯ ನಮೊ ನಾರಾಯಣಾ ॥ ಪಲ್ಲ ॥ ಮತ್ತಕರಿಯವಸಾನಕೆ ಹರಿಯೆ ನೀ ಬಂದು ಕಾಯ್ದೆ ನಾರಾಯಣಾಯ ನಮೋ ನಾರಾಯಣ ॥ ಭಕ್ತ ಪ್ರಲ್ಹಾದನೇಕಾಂತ ನಿಷ್ಠೆಗೆ ಒಲಿದೆ ನಾರಾಯಣಾಯ ನಮೋ ನಾರಾಯಣ ॥೧॥ ಪೃಥುವಿಗಳ್ಳನನಿರಿದು ಸತಿಯನುದ್ಧರಿಸಿದೆ ನಾರಾಯಣಾಯ ನಮೋ ನಾರಾಯಣ ॥ ಪೃಥುಚಕ್ರವರ್ತಿಗೆ ಪ್ರತ್ಯಕ್ಷನಾಗೊಲಿದೆ ನಾರಾಯಣಾಯ ನಮೋ ನಾರಾಯಣ ॥ ೨ ॥ ಶೂಲಿಯಸುಬೆಂಬತ್ತಿ ಸುಡುವನೆಂಬನ ಸುಟ್ಟೆ ನಾರಾಯಣಾಯ ನಮೋ ನಾರಾಯಣ ॥ ಶೀಲವಿಡಿದಂಬರೀಷನ ವ್ರತವ ಗೆಲಿಸಿದೆಯೆ । ನಾರಾಯಣಾಯ ನಮೋ ನಾರಾಯಣ ॥ ೩ ॥ ಮಕರ ರೂಪದಿ ಸತ್ಯವ್ರತಗೆ ತತ್ವವನೊರೆದೆ ನಾರಾಯಣಾಯ ನಮೋ ನಾರಾಯಣ ॥ ಮುಖದಿ [1]ಶ್ರುತಿಪಿಡತಂದು ವಾರಿಜಾಸನಿಗಿತ್ತೆ। ನಾರಾಯಣಾಯ ನಮೋ ನಾರಾಯಣ ॥ ೪ ॥ ಸುರಹೊತಿಗಖಿಳ ಪರಮಾರ್ಥವನು ಅರುಹಿದೆ । ನಾರಾಯಣಾಯ ನಮೋ ನಾರಾಯಣ ॥ ಸುರಪನ್ನ ಭಯವಟ್ಟೆ ಧ್ರುವಗೆ ಧ್ರುವಪದವಿತ್ತೆ । ನಾರಾಯಣಾಯ ನಮೋ ನಾರಾಯಣ ॥ ೫ ॥ ಮಹಾಪಾಪ ನಿರತ ಅಜಾಮಿಳನಘವ ಹರಿಸಿದೆ ॥ ನಾರಾಯಣಾಯ ನಮೋ ನಾರಾಯಣ ॥ ಮಹಿದಾಸನಾಗಿ ತಾಯಿಗೆ ತತ್ವವನು ಪೇಳ್ದೆ ॥ ನಾರಾಯಣಾಯ ನಮೋ ನಾರಾಯಣ ॥ ೬ ॥ ಮುನಿಕಾಲಿಲೊದೆಯೆ ಕರುಣಿಸಿದೆ ಕರುಣಾನಿಧಿ ॥ ನಾರಾಯಣಾಯ ನಮೋ ನಾರಾಯಣ ॥ ಮುನಿವೆಂಗಳರೆಯಾಗೆ ಪದಸೋಂಕಿಸೆತ್ತಿದೆಯೊ ॥ ನಾರಾಯಣಾಯ ನಮೋ ನಾರಾಯಣ ॥ ೭ ॥ ಮುಖವರಕ್ಷಿಸಿ ರಾಜಋಷಿಗಭೀಷ್ಟೆಯ ನಿತ್ತೆ । ನಾರಾಯಣಾಯ ನಮೋ ನಾರಾಯಣ ॥ ಮಕರಧ್ವಜಾರಿದನು ಮುರಿದ ಅವನಿಜೇಶ॥ ನಾರಾಯಣಾಯ ನಮೋ ನಾರಾ

---

೧. ಈ ನುಡಿಯು ಶ್ರೀಗೊರಬಾಳರ ಹೊತ್ತಿಗೆಯಲ್ಲಿಲ್ಲ.

ಯಣ ॥ ೮ ॥ ಶುಭ ಕಪೀಶಗೆ ಅಭಯ ವರವಿತ್ತು ಕೈಪಿಡಿದೆ। ನಾರಾಯಣಾಯ ನಮೋ ನಾರಾಯಣ ॥ ಶುಭಕಂಠನಂಜಿಕೆಯ ಹನುಮ ಪೇಳಲು ಕಳದೆ ॥ ನಾರಾಯಣಾಯ ನಮೋ ನಾರಾಯಣ ॥ ೯ ॥ ಶರಣುಹೊಕ್ಕಿಹ ವಿಭೀಷಣಗರಸುತನ ಕೊಟ್ಟೆ। ನಾರಾಯಣಾಯ ನಮೋ ನಾರಾಯಣ। ಶರಧಿ ರಾವಣನಿರಿದು ಸುರರ ಸಂಕಟ ಹರಿದೆ ॥ ನಾರಾಯಣಾಯ ನಮೋ ನಾರಾಯಣ ॥ ೧೦ ॥ ಅನುಜನಗ್ನಿಗೆ ಧುಮುಕಲವಧಿ ಮೀರದೆ ಪೊರೆದೆ। ನಾರಾಯಣಾಯ ನಮೋ ನಾರಾಯಣ। ಅನಿಮಿಷರ ನಿಕರಕತಿ ಆಲ್ಹಾದ ಬೆಳೆಯಿಸಿದೆ ॥ ನಾರಾಯಣಾಯ ನಮೋ ನಾರಾಯಣ ॥ ೧೧ ॥ ಉರಿ ನುಂಗಿ ಗಿರಿ ನೆಗಹಿ ವ್ರಜವ ಪಾಲಿಸಮಾಡ್ದೆ। ನಾರಾಯಣಾಯ ನಮೋ ನಾರಾಯಣ। ಉರಗನೆಳೆತಂದವನ ರಾಣಿಯರ ಸ್ತುತಿಗೊಲಿದೆ ॥ ನಾರಾಯಣಾಯ ನಮೋ ನಾರಾಯಣ ॥ ೧೨ ॥ ಕ್ರತು ನಾರಿಯರ ಅನ್ನ ಸವಿದುಂಡು ಸುಖವಿತ್ತೆ। ನಾರಾಯಣಾಯ ನಮೋ ನಾರಾಯಣ। ಕ್ರತು ಭೋಕ್ತೃ ಕ್ರತುಗಾತ್ರ ಕ್ರತುಪಾಲ ಕ್ರತಶೀಲ ॥ ನಾರಾಯಣಾಯ ನಮೋ ನಾರಾಯಣ ॥ ೧೩ ॥ ಗೋಪ ಸ್ತ್ರೀಯರ ಕುಚದಿ ನ್ಯಸ್ತಚರಣಾಬ್ಜಯುಗ। ನಾರಾಯಣಾಯ ನಮೋ ನಾರಾಯಣ। ಗೋಪೀಜನಜಾರ ನವನೀತ ದಧಿ ಮಹಚೋರ। ನಾರಾಯಣಾಯ ನಮೋ ನಾರಾಯಣ ॥ ೧೪ ॥ ವಂಶ ಗಾಯನ ಪ್ರೀಯ ವಿಧುಕುಲೋದ್ಭವ ಕೃಷ್ಣ। ನಾರಾಯಣಾಯ ನಮೋ ನಾರಾಯಣ। ವಂಶವರ್ಧಕ ಸುಜನ, ವಂಶ ಮರ್ದನ ಕುಜನ ॥ ನಾರಾಯಣಾಯ ನಮೋ ನಾರಾಯಣ ॥ ೧೫ ॥ ಅಕ್ರೂರವಂದ್ಯ ಕಂಸಾರಿ ಕುಬ್ಜಾ ರಮಣಾ। ನಾರಾಯಣಾಯ ನಮೋ ನಾರಾಯಣ। ಆಕ್ರಂದಿಸಿದ ತಂದೆತಾಯಿಯರ ಭಯವಳಿದೆ। ನಾರಾಯಣಾಯ ನಮೋ ನಾರಾಯಣ ॥ ೧೬ ॥ ಅದಿತಿ ಕುಂಡಲದಾತ ಭಗದತ್ತ ವರದನೆ। ನಾರಾಯಣಾಯ ನಮೋ ನಾರಾಯಣ। ಅಧಿಪತಿಗಳಧಿಪತಿಯೇ ಭೈಷ್ಮಿಸತ್ಯಾರಮಣ ॥ ನಾರಾಯಣಾಯ ನಮೋ ನಾರಾಯಣ ॥ ೧೭ ॥ ಶಂಭು ವಂದಿತ ಪಾದ ಸಾಂದಿಪೋದ್ಭವನಿತ್ತೆ। ನಾರಾಯಣಾಯ ನಮೋ ನಾರಾಯಣ। ಶಂಬರಾರಿಯ ಜನಕ ಅಗ್ರ ಪೂಜಾಗ್ರಣಿಯೇ ॥ ನಾರಾಯಣಾಯ ನಮೋ ನಾರಾಯಣ ॥ ೧೮ ॥ ಪಾಂಡವರ ಪ್ರಾಣ ದ್ರೌಪದಿ ಮಾನ ರಕ್ಷಕನೆ। ನಾರಾ

ಯಣಾಯ ನಮೋ ನಾರಾಯಣ | ಪೌಂಡ್ರಕ ಶೃಗಾಲ ಕೌರವ ಭೂಮಿ ಭಾರಹರ | ನಾರಾಯಣಾಯ ನಮೋ ನಾರಾಯಣ || ೧೯ || ಅಭಿಮನ್ಯು ನಾತ್ಮಜನ ಬಸಿರೊಳಗೆ ಸಲಹಿದೆಯೋ | ನಾರಾಯಣಾಯ ನಮೋ ನಾರಾಯಣ | ಅಭಯಗಲಿ ಪಾಂಡವರ ಸಂತತಿಯ ಬೆಳಸಿದೆಯೋ || ನಾರಾಯಣಾಯ ನಮೋ ನಾರಾಯಣ || ೨೦ || ಗರುಡ ಗಂಧರ್ವ ಕಿನ್ನರ ಗೀತ ಸಂಪ್ರೀತ | ನಾರಾಯಣಾಯ ನಮೋ ನಾರಾಯಣ | ಗರುವೆ ಲಕುಮಿಯ ಕೂಡಿ ಕ್ರೀಡಾದ್ರಿಯಲ್ಲಿರುವೆ || ನಾರಾಯಣಾಯ ನಮೋ ನಾರಾಯಣ ||೨೧|| ಶಂಕ ಚಕ್ರ ಗದಾಬ್ಜ ಶ್ರೀವತ್ಸ ಶೋಭಿತನೆ | ನಾರಾಯಣಾಯ ನಮೋ ನಾರಾಯಣ | ಸಂಖ್ಯೆ ರಹಿತಾಭರಣ ಭೂಷಣಾವ್ಯಾಕೃತನೆ || ನಾರಾಯಣಾಯ ನಮೋ ನಾರಾಯಣ || ೨೨ || ಮೀನ ಕಚ್ಛಪ ವರಾಹ ನರಹರಿ ವಾಮನ ಭಾರ್ಗವ | ನಾರಾಯಣಾಯ ನಮೋ ನಾರಾಯಣ | ಮಾನವಪ ಕೃಷ್ಣ ಬುದ್ಧ ಕಲ್ಕಿ ಕಪಿಲಾತ್ರೇಯ || ನಾರಾಯಣಾಯ ನಮೋ ನಾರಾಯಣ || ೨೩ || ಸ್ವಾಮಿತೀರ್ಥಾಂಬು ಅಂತರ್ಗಂಗಾ ಅಭಿಷಿಕ್ತ | ನಾರಾಯಣಾಯ ನಮೋ ನಾರಾಯಣ | ಸ್ವಾಮಿ ಭೂವರಹ ವೈಕುಂಠನಾಥ ವಿಶ್ವೇಶ || ನಾರಾಯಣಾಯ ನಮೋ ನಾರಾಯಣ || ೨೪ || ಷಟ್ಕೋಟಿ ತೀರ್ಥಯುತ ಚರಣ ಶ್ರೀ ಭೂರಮಣ | ನಾರಾಯಣಾಯ ನಮೋ ನಾರಾಯಣ | ಷಟ್ಕಮಲ ನಿಲಯ ಚಿನ್ಮಯ ಚಿದ್ಗುಣಾರ್ಣವನೆ | ನಾರಾಯಣಾಯ ನಮೋ ನಾರಾಯಣ || ೨೫ || ಭಕ್ತಾಭಿಮಾನಿ ಭೂದೂರ ಭಕ್ತರ ಪ್ರಭುವೆ | ನಾರಾಯಣಾಯ ನಮೋ ನಾರಾಯಣ | ಭಕ್ತವತ್ಸಲ ಕೃಪಾಂಬುಧಿ ಪರಾತ್ಪರ ಕೃಷ್ಣ | ನಾರಾಯಣಾಯ ನಮೋ ನಾರಾಯಣ || ೨೬ || ವಸುಧಿ ವೈಕುಂಠ ಮಂದಿರವಾಸ ಶ್ರೀವಾಸ | ನಾರಾಯಣಾಯ ನಮೋ ನಾರಾಯಣ | ವಸು ಪ್ರೀತ ವಸುಕರ್ತ ವಸುದಾತ ವಸುಪೂರ್ಣ || ನಾರಾಯಣಾಯ ನಮೋ ನಾರಾಯಣ || ೨೭ || ಆದಿನಾಥಾಪ್ರಮೇಯಾದಿ ಪುರುಷೋತ್ತಮನೆ | ನಾರಾಯಣಾಯ ನಮೋ ನಾರಾಯಣ | ಆದಿ ಮಧ್ಯಾಂತ ಶೂನ್ಯಾದಿ ದೇವೋತ್ತಮನೆ || ನಾರಾಯಣಾಯ ನಮೋ ನಾರಾಯಣ || ೨೮ || ಬದುಕಿಪ್ಯಾದರೆ ನಿನ್ನ ಹೊಗಳಲಿಕೆ ಬದುಕಿಸೈ | ನಾರಾಯಣಾಯ ನಮೋ ನಾರಾಯಣ | ಬುಧರ ಸಂಗತಿ ಕೊಟ್ಟು ಮನಿಸೆನ್ನನು ತಂದೆ | ನಾರಾಯ

ಣಾಯ ನಮೋ ನಾರಾಯಣ || ೨೯ || ಕಿವಿಯಲ್ಲಿ ಮುಖದಲ್ಲಿ ನಿನ್ನ ನಾಮದ ನೆನವು | ನಾರಾಯಣಾಯ ನಮೋ ನಾರಾಯಣ | ಕವಲಾಗದಂತಿರಿಸಿ ತನ ಪದಾಬ್ಜವ ತೋರೊ|| ನಾರಾಯಣಾಯ ನಮೋ ನಾರಾಯಣ || ೩೦ || ಭವಭಯದಿ ತೊಳತೊಳಲಿ ಬಳಬಳಲಿ ಬಲು ದಣಿದೆ | ನಾರಾಯಣಾಯ ನಮೋ ನಾರಾಯಣ | ಭವವಿರಿಂಚ್ಯಾದಿ ಕರಿಗಭಯದನೆ ನೀ ಸಲಹೊ || ನಾರಾಯಣಾಯ ನಮೋ ನಾರಾಯಣ || ೩೧ || ನೀ ತಾಯಿ ನೀ ತಂದೆ ನೀ ಬಂಧು ನೀ ಬಳಗ | ನಾರಾಯಣಾಯ ನಮೋ ನಾರಾಯಣ | ನೀತಿಗಳ ನರಿಯೆ ನಿನ್ನಯ ನಾಮವೇ ಗತಿಯು|| ನಾರಾಯಣಾಯ ನಮೋ ನಾರಾಯಣ || ೩೨ || ತನು ನೆಚ್ಚಿಕಿಲ್ಲ ಚಿತ್ತದ ಗತಿಯು ನೀಟಿಲ್ಲ | ನಾರಾಯಣಾಯ ನಮೋ ನಾರಾಯಣ | ತನಯ ತರುಣೀ ಕೊನೆಯ ಸಂಗತಿಗೆ ಆರಿಲ್ಲ || ನಾರಾಯಣಾಯ ನಮೋ ನಾರಾಯಣ || ೩೩ || ದೋಷಗಳರಸದೆನ್ನನು ಸಾಕು ಸಾಕಯ್ಯಾ | ನಾರಾಯಣಾಯ ನಮೋ ನಾರಾಯಣ | ದಾಸ ಪಾಲಕದೇವ ಡಿಂಗರರ ಸಂಜೀವ || ನಾರಾಯಣಾಯ ನಮೋ ನಾರಾಯಣ || ೩೪ || ನಿನ್ನ ಮೂರುತಿ ನೋಡಿ ನೋಡಿ ಕಣ್ದಣಿಯದಲೆ | ನಾರಾಯಣಾಯ ನಮೋ ನಾರಾಯಣ | ನಿನ್ನನೇ ಮೂಲ ಬಿಂಬನೆಂದು ಕೊಂಡಾಡುವೆನೊ || ನಾರಾಯಣಾಯ ನಮೋ ನಾರಾಯಣ || ೩೫ || ನಿನ್ನ ವೈಬೆಮರಿನ್ಹೊಳೆಯಲ್ಲೆನ್ನ ಮುಳುಗಿಸಿ | ನಾರಾಯಣಾಯ ನಮೋ ನಾರಾಯಣ ನಿನ್ನವ ನಾ ನಿನ್ನವರ ಕೈಯಲ್ಲಿ ಕೊಡು ಬೇಗ || ನಾರಾಯಣಾಯ ನಮೋ ನಾರಾಯಣ || ೩೬ || ವಾರಿಯಲಿ ಭೂಮಿಯಲಿ ಅಡವಿಯಲ್ಯಾ ಕಾಯೊ | ನಾರಾಯಣಾಯ ನಮೋ ನಾರಾಯಣ| ವಾರಾಹ ವಾಮನ ನರಸಿಂಹ ಕೇಶವ| ನಾರಾಯಣಾಯ ನಮೋ ನಾರಾಯಣ || ೩೭ || ಸತ್ಕುಲೋದ್ಭವನಾಗಿ ಸನ್ಮಾರ್ಗರಿಯಲಿಲ್ಲ | ನಾರಾಯಣಾಯ ನಮೋ ನಾರಾಯಣ | ಸತ್ಕರ್ಮಗಳಿಗೆ ಬಹಿಷ್ಕೃತನಾಗಿ ಬಾಳುತಿಹೆ || ನಾರಾಯಣಾಯ ನಮೋ ನಾರಾಯಣ || ೩೮ || ಒಂದು ಜಾವದ ತಪ್ಪನೆಂದೆಂದಿಗೆಣಲಾರೆ | ನಾರಾಯಣಾಯ ನಮೋ ನಾರಾಯಣ | ವಂದಿಸುವೆ ಸಾಷ್ಟಾಂಗ ತ್ರಾಹಿ ತ್ರಾಹಿ ಪಾಹಿ || ನಾರಾಯಣಾಯ ನಮೋ ನಾರಾಯಣ || ೩೯ || ಮಧ್ವೇಶ ಮಧ್ವಪ್ರಿಯ ಮಧ್ವಮತ ಪ್ರತಿಪಾಲ | ನಾರಾಯಣಾಯ ನಮೋ ನಾರಾಯಣ | ಮಧ್ವ

ಗುರುಸ್ತುತ್ಯ ಮಧ್ವಾರ್ಚಿತಪದಾಬ್ಜ ಹರಿ ॥ ನಾರಾಯಣಾಯ ನಮೋ ನಾರಾಯಣ ॥ ೪೦ ॥ ಏನರಿಯದವ ನಾನು ನೀನೆ ಪರಗತಿ ಎನಗೆ। ನಾರಾಯಣಾಯ ನಮೋ ನಾರಾಯಣ। ಪ್ರಾಣ ನಿನಗರ್ಪಿಸಿದೆ ಪ್ರಸನ್ನ ವೆಂಕಟ ಕೃಷ್ಣ ॥ ನಾರಾಯಣಾಯ ನಮೋ ನಾರಾಯಣ ॥ ೪೧ ॥

೧೯೧

## ಭ್ರಮರ ಗೀತೆ

**ರಾಗ— ಆನಂದಭೈರವಿ** **ತಾಳ— ತ್ರಿಪುಟ**

ಭೃಂಗ ನಿನ್ನಟ್ಟಿದನೆ ಸಿರಿ। ರಂಗ ಮಧುರೇಲಿ ನಿಂದು। ಅಂಗಜಲುಬ್ಧಕ ಪೂಗೋ। ಲಂಗಳ ತಡಿಯಾನಿಕ್ಕಿ॥ ಹೆಂಗಳೆರೆಂಬೊ ಹುಲ್ಲೆ ವೃ। ಗಂಗಾಳ ಗುರಿಯು ಮಾಡಿ। ಹಿಂಗಿಸುತ್ತೈದಾನೆ ಅಸುವಾ। ಹೇ ಕಿತ್ತವ ॥ ಪಲ್ಲ॥ ನಿನ್ನ ನೋಡಿ ನಮ್ಮ ಅಚ್ಯು। ತನ್ನ ಕಂಡಂತಾಯಿತಯ್ಯಾ। ಚನ್ನಿಗಾರರಸು ಕುಶ। ಲೋನ್ನತಿಯೋಳಿಹನೇನೋ ॥ ಚಿನ್ನತನ ಮೊದಲಿಂದ। ವನ್ನ ಕಿತಾವ ನಾವ್ ಬಲ್ಲೆವೊ। ಘನ್ನ ಮಾಯಗಾರಾ ಚಿತ್ತಾ ಚೋ। ರನ್ನ ಹೇ ಕಿತವಾ॥ ಮನ್ನಣೆಗೆ ಮೆಚ್ಚಿ ತನು। ವನ್ನೊಪಿಸಿದ ಮುಗುಧ। ವೆಣ್ಣುಗಳು ವಿರಹಾಬ್ಧಿ। ಯನ್ನು ದಾಟಿಸುವೆನೆಂದೂ ॥ ತನ್ನ ನೇಹವೆಂಬೊ ನಾವಿ। ಯನ್ನೇರಿಸಿ ಮೋಸಾಗೈಸಿ। ನಮುನ್ನ ನಡುನೀರೊಳು ತೊರೆದಾನೋ ಹೇ ಕಿತವ ॥ ೧ ॥ ತಮ್ಮ ನಂದ ಗೋಪಾ ಯಶೋ। ದೆಮ್ಮನಾ ನೋಡಿ ಬಾರೆಂದು। ರಮ್ಮಿಯಾ ರಮ್ಮಣ್ಣಾ ನಿಮ್ಮಾ ಒಮ್ಮೆ ಕಳುಹಿದಾನೆ ಸೈ ॥ ಪಮ್ರಗೆಟ್ಟಾ ರಮ್ಮಣೇರು। ದುಮ್ಮಾಳಿಸು ತೆವೂ ವೃಥಾ। ನಮ್ಮ ಹಂಬಲಿನ್ನೇನವಗ। ಹೇ ಕಿತವಾ ॥ ಹೊಮ್ಮೆಲಟ್ಟಿ-ರಿಂದಾಲಂಚಿ ಗಮ್ಮನೆರಾ ಕುಜದಾ ಕುಂ। ಕುಮ್ಮದ ಕಸ್ತೂರಿ ಕರ। ವಮ್ಮದಿ ಶಿಲುಕಿದಂಗೆ ॥ ಕಮ್ಮಗೊಲಾ ಬಾಣಂಗಾಳ। ಹೆಮ್ಮಾಳೆ ತೋಯಿಸುತ್ತಿವೆ। ಸುಮ್ಮನೆ ಬಾಹುದು ಸುಲಭವೆ ॥ ಹೇ ಕಿತವ್ವಾ ॥ ೨ ॥ ಮಧುಕುಂಜ ವನ-ದೊಳು ಮಧುವೈರಿ ಕೊಳಲೂದೆ। ಮಧು ಸುಸ್ವರ ಕೇಳಿ ಮದಿರಾಕ್ಷಿಯರೆಲ್ಲಾ ॥ ಸ್ವಧಾಮ ಧ್ಯಾನ ಬಿಟ್ಟು ವೃಗ। ಮದಗುಂಪಾವಿಡಿದ್ದೈದಿ। ಮದನನ್ನೈಯನ ಕಾಣೆವೋ। ಹೇ ಕಿತವಾ ॥ ಮದನೇರಿ ತಲೆಬಾಗಿ। ಮೋನಿನೀ ನಿಟ್ಟಿಸಲಾಗಾ। ಮೃದು ವಾಕ್ಯಾದೊಳಿಮ್ಮಪ್ಪಿ। ಅಧರಾಮೃತಾ ಭೋಜನಾ। ಒದಗಿ ಸಂತತಾ-

ವಿತ್ತು ಸ | ನ್ನಿಧಿ ನಮ್ಮನ್ನಗಲಿ ಕಲ್ಲೆದೆ | ಮುದದಿಯಾದಾನೆಂತೊ ಕೃಪಾಳು || ಹೇ ಕಿತವಾ || ೩ || ಕಾತರವಿರಿಯಾಬಟ್ಟ ಮುತ್ತಿನ ಝಲ್ಲೆದುರುಬ | ಕತ್ತೂರಿ ತಿಲಕವು ಚೆಲ್ಲಿತ್ತು ಕುಂಡಲಾ ಬೆಳಕು || ವೃತ್ತವದನಾದಿ ಮಂದಸ್ಮಿತ್ತ ತಿಂಗ-ಳಿಂದ ನಮ್ಮ | ಚಿತ್ತ ತಾಪಾ ಪರಿಹರಿಪಾ | ಹೇ ಕಿತವಾ | ಹೆತ್ತ ತಾಯಿ ಆಪ್ತ ಬಂಧು ಗೋತ್ರಗತಿ ನೀನೆ ನಮ್ಮಾ| ವಿತ್ತವೆಂದೂ ನಂಬೀ ತನ್ನ ಹತ್ತಿಲೆ ಸೇರಿ-ದ್ದವರಾ | ಒತ್ತಿ ತಾ ರಥನೇರಿ ಸತ್ವರ ಬಾಹುವೆನೆಂದು | ಮತ್ತಕ್ರೂರನೊಡ-ನೈದಿಪಾ | ಹೇ ಕಿತವಾ || ೪ || ವಜ್ರಾಂಕುಶ ಧ್ವಜಾಂಕಿತ ಹೆಜ್ಜೆಯಾನು ತಿಳಿದು ನ | ಮ್ಮಬ್ಜಾಕ್ಷೀಯರೊಡನೆ ರತಿ ಕಜ್ಜದುಪಾವನದಲ್ಲಿ || ನಿರ್ಜರೋ-ತ್ತಂಸನೊಡನೆ ಮಜ್ಜನ ಕ್ರೀಡಾಡುವ ಸಾ | ಯುಜ್ಜಾ ಸುಖದೊಳಿದ್ದೆವೈಯ್ಯಾ | ಹೇ ಕಿತವಾ || ಅಬ್ಜಭವಾದಿಸುಜನ ಪೂಜ್ಯನಗಲಿದವ್ಯಾಲೆ | ನಿರ್ಜೀವಿಗಳಾಗಿ ಕಪ್ಪಾ ಕಜ್ಜಲ ಕಲಕಿಕೊಂಡು || ಲಜ್ಜಾಗೆಟ್ಟು ತನುಲತೆ ಝರ್ಜರಿತದಿ ಜೀವಿಸಿ | ವಜ್ಜರಿದೇನಮ್ಮಾ ದಲ್ಲಾನೆ | ಹೇ ಕಿತವಾ || ೫ || ಉತ್ಪಲ ಶಾಮಲ ಮೋದ ವ್ಯಕ್ತ ಬಾವನ್ನವಾ ತೀಡಿ | ಅತ್ಯಮಲ ಪೀತಾಂಬರ ಸುತ್ತಿದಾ ಸುನೂಪುರ ಝು | ಇತ್ಕಾರದಿಂ ಮಿಂಚಿಪೆಮ್ಮಾ ಚಿತ್ತಾಶಿಖಿಗೆ ಪೀಯೂಷಾ | ಸಕ್ತಮೇಘಾ-ನಂತೆ ಒಪ್ಪುವಾ | ಹೇ ಕಿತವಾ || ಮತ್ತೆ ವಕ್ಷದಾ ಶ್ರೀವತ್ಸಾ ಕೌತ್ಸುಭ ವೈಜಯಂತಿ ಶ್ರೀ | ಮತ್ತುಲಸಿ ಘಮಿಃಘಮಿಸುತ್ತಲಿಹಾರ್ಗಳ ಮಧ್ಯ | ರತ್ನಾನ ಕಂಕಣ ಭೂಜಾ ಕೀರ್ತಿಯಿಂದೊಪ್ಪುವ ಪುರು| ಷೋತ್ತಮನ್ನಬಣ್ಣಿಪರುಂಟೇ | ಹೇ ಕಿತವಾ || ೬ || ಹಿಂದೆ ಮಾಡಿದ ಸುಕೃತದಿಂದ ಮಧುನಗರದೊ | ಳಿಂದೀವ ರಾಕ್ಷಾನಾನಂದಾ ಸಿಂಧೂವಿಗೂಡಿ ತಾ ಪೂರ್ಣಾ || ಚಂದ್ರಾನೊಂತೊಪ್ಪುವಾ ಶಿರಿ ಮಂದರಧರನಂಘ್ರಿಯಾ | ಪೊಂದುವಾ ಭಾಗ್ಯಕೆ ಎಣೆಯುಂಟೆ || ಹೇ ಕಿತವಾ|| ಓಂದೆ ಮಾಪ್ಪ ರಾಸಕ್ರೀಡೆಯಿಂದ ಬಂದಪರಾಧವ | ಒಂದನೆಣಿಸಾದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗ | ದಿಂದ ವಂದಿಪೆವೊ ಭಕ್ತಾ ಬಂಧುವಿಗೆ ನಮ್ಮ ಮನಾ | ಮಂದಿರದೊಳಿಂದಿರೆಂದು || ಹೇ ಕಿತವಾ || ೭ || ಲಕುಮಿರಮಣ ನಾವಾ ಅಕ್ಷಮ ಗೊಲ್ಲತೀರು ನಾವು| ಕುಕ್ಷಿಯೊಳ್ ಬ್ರಹ್ಮಾಂಡವಗೆ ಮಕ್ಷಿಗಳಂ ತಿಪ್ಪೆವೊ || ಮೋಕ್ಷದಾರಸಾ ನಾವಾ ಗೋಕ್ಷೀರಾದಿ ತೃಪ್ತರಾವು | ಲಕ್ಷಿಸುವಾ-ನೆಂತೊ ನಮ್ಮನ್ನಾ| ಹೇ ಕಿತವಾ || ರಕ್ಷಿಸಲು ನಿಶಿದಿನಾ ಶಿಕ್ಷಿಣಿಗೆ ಪಾಲುಬೆಣ್ಣೆ| ಭಕ್ಷಿಸಿ ನಿರುತಾ ನಮ್ಮ ಅಕ್ಷಿಗೆ ಹಬ್ಬಾನುಣಿಸಿ || ಈಕ್ಷೋಣಿ ಪೊರವುದಕ್ಕೆ

ದೀಕ್ಷೆಗಿನ್ಯಾರಾರು ಸಾಮ್ಯಾ । ವಕ್ಷಮಾಣಾರೇವೆ ಮೂರ್ಖರೊ। ಹೇ ಕಿತವಾ ॥ ೮ ॥ ಹೆಂಗಾಳೆರೊಂದಾಗಿ ಅಂತರಂಗದಾರಸಾನಾಡಿದಾ । ಮಂಗಳ ಚರಿತ್ರೆಯಾ ಸಂಗೀತಾದಿ ಪೊಗಳುತಾ । ಕಂಗಳಜಲ ಉಕ್ಕುತ ಇಂಗಿತಜ್ಞ ದೇವನಂಗಾ। ಸಂಗದಾನಂದವಾ ನೆನೆದು। ಹೇ ಕಿತವಾ॥ ಮಂಗಳ ವೇದಸ್ತೇಯಾರಿ ಶೃಂಗಾರಾಕೂರುಮ ನಮೊ। ಪೊಂಗಣ್ಣಾನಾ ಶೀಳ್ದ ನಾರಸಿಂಗ ವಟು। ಭಾರ್ಗವ ನಮೊ ॥ ಅಂಗದಾ ಪಾರ್ಥಶಂಭೂ ತುರಂಗಪ ಪ್ರಸನ್ವೇಂಕಟ್ಟ ತುಂಗಮಹಿಮಾ ನಮೊ ಎಂಬೆವೊ ॥ ಹೇ ಕಿತವಾ ॥ ೯ ॥

೧೯೨

## ರಂಗನ ಕೊಳಲ ವರ್ಣನೆ

**ರಾಗ—ನೀಲಾಂಬರಿ** **ತಾಳ—ಅಟ್ಟ**

ರಂಗ ಕೊಳಲನೂದಲಾಗಿ । ರಂಗಯ್ಯಾ ಕೊಳಲನೂದಲು । ಮಂಗಳ ಮಯವಾಯಿತು ಧರೆಯು ಜ ॥ ನಂಗಾಳು ಜೀವನ ಚೇತನ ಮರೆದು ಶ್ರೀರಂಗ ಧ್ಯಾನಪರರಾದರೊ ॥ ಪಲ್ಲ ॥ ಬಾಡಿದಾ ಬಳ್ಳಿ ಮರಾ ಗೊನೆ ವಡಿದು । ತೀಡುವ ಮಂದಮಾರುತನ ಕೂಡಿ ತೂ । ಗ್ಯಾಡುವ ವನದ ಫಲದ ಗೊಂಚಲದಿ । ಪಾಡಾಲೊಲ್ಲಾವಳಿ ಕುಲಗಳೂ ॥ ಹೇಡಿಗೊಂಡಾವು ಜಾಣಾಕ್ಕಿ ಗಿಣಿಯು ಮಾ । ತಾಡದೆ ಕಳೆಗುಂದಿದವು ಕೋಗಿಲೆ ॥ ಓಡ್ಯಾಟ ವೈರಾಟ ಜರಿದು ಖಗಾಮೃಗ । ಗಾಢಾ ನಿದ್ರಾವಶವಾದವೊ ॥ ೧ ॥ ಕೆಳಗಿನುದಕ ಉಕ್ಕೇರಿ ಬಂದಾವು । ತುಳುಕಿ ಚಲ್ಯಾಡಿ ನಿಂತಳು ಯಮುನೆ ಮ್ಯಾಲೆ ಮಾ । ಡೊಡ್ಡಿ ಮೇಘಾಳಿ ಬೋರಿಟ್ಟವು । ಕಲು ಕರಗಿ ನೀರಾದವೊ ॥ ನಳಿನ ಚಂಪಕ ನಾಗ ಪುನ್ನಾಗ ಪಾ । ಟಲ ಶಾವಂತಿಗಿ ಕುಂದ ಬಕುಳಾವು । ಮಾಲತಿ ಜಾಜಿಯು ಪರಿಮಳಂಗೂಡಿ । ನೀಲಾಂಗನಂಘ್ರಿಗೆ ಎರಗಿದವೋ ॥ ೨ ॥ ಕೆಚ್ಚಲಾ ಬಿಗಿದು ತೊರದ ಮೊಲೆಯ । ವತ್ಸದೊಡಲಾಸೆ ಜರಿದೆಳೆ ಹುಲ್ಲು । ಕಚ್ಚಿ ಅಲ್ಲಿಗಲ್ಲಿ ನಿಂದಾವು ತಲೆಯಮೇಲ್ । ಪುಚ್ಛವ ನೆಗೆಹಿ ನೀಂಟಿಸಿ ॥ ಅಚ್ಯುತನಾಕೃತಿ ನೋಡಲು ಸುರರಿ । ಗಚ್ಚರವಾಯಿತು ಆವು ಕಂಡಾನಂದ ಪೆಚ್ಚಿ ಮುಕುಂದನ ಲೀಲಾವಿನೋದಕ್ಕೆ । ಮೆಚ್ಚಿ ಕುಸುಮವ ಸುರಿದರೊ ॥ ೩ ॥ ಮುದ್ದು ಮೋಹನನ್ನಾ ಮಂಜೂಳ ಸಂಗೀತ । ಸದ್ದಾನಾಲಿಸಿ, ಗೋಪಾಂಗ

ನೆರೆಲ್ಲರೂ । ಬುದ್ಧಿ ಸೂರ್‍ಯಾಡಿದರಂಗಜ ಶರಕೆ । ಬಿದ್ದು ಪರವಶರಾದರೊ ॥ ಸಿದ್ಧ ಮುನಿಜನರಿದ್ದ ಸಮಾಧಿಯೊಳ್ । ದ್ದಿದ್ದು ಕುಣಿದರಿದೆ ದಾವರೆಯ । ಗದ್ದುಗಿಯರಸನೊಲಿಸಿಕೊಂಡರು । ಗೆದ್ದರೊ ಭವಸಮುದ್ರವ ॥ ೪ ॥ ಶ್ರೀಮನೋಹರ ಮೂರ್ತಿ ಗೋಪಾಲನು । ಆ ಮಧುಕುಂಜವನದಿ ತ್ರಿಭಂಗಿಲಿ। ಹೇಮಾಂಬರುಟ್ಟು ಗೀರ್‌ಗಂಧಾ ಕಸ್ತೂರಿ । ನಾಮ ಮುಕುಟ ಕುಂಡಲಜೆಳಗೀಲಿ । ದಾಮ ವನಮಾಲಿ ರತ್ನಾಭರಣ । ಸ್ವಾಮಿ ಶ್ರೀಪ್ರಸನ್ನವೆಂಕಟ ಕೃಷ್ಣನ । ರಾಮಗುಂಡಕ್ರೀಯು, ಮೇಘರಾಗವ ಮಾಡೆ । ಸಾಮಗಾಯನದಿ ನಮೊ ಎಂದರು ॥ ೫ ॥

೧೯೩

## ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ+

ರಾಗ--ನಾಟ ಭಾಮಿನಿಷಟ್ಪದಿ ತಾಳ---ತ್ರಿಪುಟ

ಶ್ರೀರಮಾವರ ಶೃತಿವಿನುತ ಸುಖ[೧]। ಸಾರಗ್ರಹಕೆ ಸರ್ವೇಶ ಸುರಧ್ರುಮ| ವಾರಿಜಾಕ್ಷ ಮುಕುಂದ ಮುರಹರ ನಾರಸಿಂಹ ನಮೋ ॥ ಪಲ್ಲ ॥ ಗರುಡಗಮನ ಗುಡಾಳ ಕಾಖಿಳ । ಶರಣ ಜನ ಸುರಧೇನು ಸುರಮಣಿ । ಕರುಣಸಾಗರ ಕಾಮಿತಾರ್ಥದ ದುರಿತ ಗಜಸಿಂಹ ॥ ಸರಸಿಜಾಸನ ಸೇವ್ಯ ಮುಕ್ತಾ । ಭರಣ ನಮಿತ ಸುರೇಶ ನಿಶಾಚರ| ಹರಣಶೀಲ ಸಹಾಗಮಜ್ಞೇಯಾದಿ ಪುರುಷ ನಮೋ ॥ ೧ ॥ ವಿಶ್ವಗರ್ಭ ವಿಚಿತ್ರ ಚರಿತ ಶು । ಭಾಶ್ವವದನ ವಿಶಾಲ ವಿಶ್ರಯ । ಶಶ್ವದೇಕ ಸುವ್ಯಾಪ್ತ ಜ್ಞಾನಾನಂದ ಬಲಪೂರ್ಣ ॥ ನಶ್ವರೇಶ್ವರ ಸವಿತರೇಶ್ವರ । ಈಶ್ವರೇಶ್ವರ ವೇದಗೋಚರ । ಸುಸ್ವಭಾವನವಾಂಬುದಾಂಗ

---

+ "ಸಮಸ್ತನಾಮ...ಮಾಲಾ' ಎಂಬ ೭೦ ನುಡಿಗಳುಳ್ಳ ಕೃತಿಯ ಎರಡು ಪ್ರತಿಗಳು ದೊರೆತಿವೆ. ಒಂದು ಶ್ರೀ ಗೋರಬಾಳ ಹಣಮಂತರಾಯರಲ್ಲಿದ್ದು ಇನ್ನೊಂದು ಶ್ರೀ ಕಲಮದಾನಿ ನಾರಾಯಣರಾಯರಲ್ಲಿದೆ. ಮೇಲೆ ಬರೆದ ಪದಗಳು ಶ್ರೀ ಕಲಮದಾನಿಯವರಲ್ಲಿಯವು. ಎರಡು ಪ್ರತಿಗಳಲ್ಲಿ ವ್ಯತ್ಯಾಸವಿದ್ದ ಶಬ್ದಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಅವುಗಳನ್ನು ಶ್ರೀ ಗೋಳಬಾರ ಪ್ರತಿಯಿಂದ ತೆಗೆದುಕೊಳ್ಳಲಾಗಿದೆ.

೧. ಸುಖ (ಶುಭ). ಮೋಕ್ಷ.

ಕೃಪಾಳು ಕೃಷ್ಣ ನಮೋ ॥ ೨ ॥ ಜನಪ ಮುನಿನುತ ತಾಟಕಾಂತಕ। ಜನಕಜಾವರ ಲಕ್ಷ್ಮಣಾಗ್ರಜ। ಜನಕ ವಾಗ್ವರ ಇಂದ್ರ ಪೂಜಿತ ಸೂರ್ಯಸುತ ಪಾಲಾ ॥ ಧಿನಪ ಕುಲಪತಿ ದೀನ ವತ್ಸಲ। ವನಧಿ ಬಂಧ ವಿಹಾರ ದಶಶಿರ। ಹನನ ಕಾರಣ ಭರತ ಪಾಲಕ ರಾಮರಾಜ ನಮೋ ॥ ೩ ॥ ಪೂತನಾಂತಕ ಶಕಟಮಾರಕ। ವಾತ ಚಕ್ರಾನಿಷ್ಟ ಹರ ನವನೀತ ಪ್ರಿಯ ದಧಿಸಾರ ಭೋಜಕ ಗೋಪವಧುಲೋಲ ॥ ಸೀತಕರ ಕುಲತಿಲಕ ಶ್ವತಿವಿ। ಖ್ಯಾತ ಕರಿ ಚಾಣೂರ ಬಕ ಹರ। ಮಾತುಳಾಂತಕ ಪಾರ್ಥ ಸ್ಥಾಪಕ ಕೌರವಾಂತ ನಮೋ ॥ ೪ ॥ ಚಕ್ರಶಂಖ ಗದಾಬ್ಜಧರ ತ್ರಿ। ವಿಕ್ರಮಾಚ್ಯುತ ವರಹ ವಾಮನ। ನಕ್ರ ಶಿಕ್ಷಕ ನಾಗರಕ್ಷಕ ನಿತ್ಯತೃಪ್ತ ಹರೇ ॥ ಶಕ್ರಗಿರಿಜಾರ್ಚಿತ ಪದಾಬ್ಜ ತ್ರಿ। ವಕ್ರವಧು ಸೌಂದರ್ಯದಾಯಕ। ಅಕ್ರೂರಾಭೀಷ್ಟದ ವಿದುರ ಉದ್ಧವ ವರೇಣ್ಯ ನಮೋ ॥ ೫ ॥ ಮಧುಮಥನ ಕೈಟಭ ವಿದಾರಣ। ಕುಧರವರ ಅನಂತ ವರ್ಣಾ। ಭಿದ ಜನಾರ್ದನ ಸಾಮಗಾಯನವೇದ್ಯ ಅನವೇದ್ಯ। ವಿಧಿ ನಿಷೇಧಾಲಿಪ್ತ ಸತತ ವಿ। ಬುಧ ನಿಯಾಮಕ ನಿರ್ಭಯಾತ್ಮ ತ್ರಿ। ವಿಧ ಜನಾಶ್ರಯ ಕುಶ ಶಯನ ಸಾರಙ್ಗಪಾಣಿ ನಮೋ ॥ ೬ ॥ ವಾಸುದೇವ ಶುಭಾಶವಾಹಕ। ವಾಸವೇಯ ಕಪಿಲ ಋಷಭ ಮಹಿ। ದಾಸ ಯಜ್ಞ ದತ್ತಾತ್ರೇಯ ನಾರಾಯಣ ನಿರಾಮಯ ಭೋ ॥ ಶ್ರೀಸನಾತನ ಸಕಲ ಭುವನ ನಿ। ವಾಸ ಸಂಕರುಷಣ ಸದಾಸ್ಮಿತ। ಹಾಸ ಸೋಮದಿವಾಕರೇಷಣ ಸ್ವಪ್ರಕಾಶ ನಮೋ ॥ ೭ ॥ ಶೇಷಶಯನ ಜಗಚ್ಚರಾಚರ। ಪೋಷಕಾಧಾರಕ ಸ್ವಜನ ಹೃದ್। ಭೂಷಣಾ ಪರಿಚ್ಛಿನ್ನ ಅಪ್ರಮೇಯಾದಿ ಶ್ರುತಿವಕ್ತ ॥ ಘೋಷವರ್ಣ ಸಂಪೂರ್ಣ ವಾಚ್ಯಾ। ಶೇಷ ದೋಷ ವಿದೂರ ಖಳಜನ। ಭೀಷಣಾಪ್ರಾಕೃತ ಅನುಪಮ ಪರಮ ಪುರುಷ ನಮೋ ॥ ೮ ॥ ಇಹದ್‌ಭಯ ಕ್ಷಯಕರ ಗುಣತ್ರಯ। ರಹಿತ ವೃಧ್ಧಿಹ್ರಾಸ ವರ್ಜಿತ। ವಿಹಗ ತೈಜಸ ಪ್ರಾಜ್ಞ ವಿಶ್ವಾವಸ್ಥತ್ರಯ ದಾತಾ ॥ ಅಹಿತನಾಶ ಸುರೇಶ ಗಹನಾತ್। ಗಹನ ಅವ್ಯಯ ಅತಿಶಯಾದ್ಭುತ। ಬಹುಳ ಜೀವಾಂತರಿಯ ಅಂತರ್ಬಹಿಃ ಸ್ವತಂತ್ರ ನಮೋ ॥ ೯ ॥ ಪೂರ್ಣ ಕಾಮಾಂಬೋಧಿ ಶ್ರೀವಟ। ಪರ್ಣತಲ್ಪ ಪರಾತ್ಪರಾ ಪ್ರತಿ। ವರ್ಣನಿಗ ಮಾಗಮ ಅತರ್ಕ್ಯಾನಂತ ಸದ್ಗುಣನಿಧೇ ॥ ನಿರ್ಣಯಾತೀತಾ ನಿರುದ್ಧ ಸು। ಖಾರ್ಣವಾಚ್ಯುತ ಸೌಖ್ಯಕರ ನವ। ತೀರ್ಣ ವಿಗ್ರಹ ಪದ್ಮನಾಭ ಉದಾರ

ಲೀಲ ನಮೋ ॥ ೧೦ ॥ ಮೋಕ್ಷವಲ್ಲಭ ಭವಮಲಘ್ನ ಮು । ಮುಕ್ಷುವರದ ಮುನೀಂದ್ರ ಸುಮನೋ। ಧ್ಯಕ್ಷ ದಾಮೋದರ ದಯಾಪರ ಜಿತದಿತಿಜಸಮರ॥ ಭಿಕ್ಷುಕಾನ್ವಯ ಪ್ರಿಯ ಸಮಾಧಿಕ । ಪಕ್ಷ ಸೃಷ್ಟ್ಯಾದ್ಯಷ್ಟ ಕಾರಣ । ದಕ್ಷಾಧ್ವರ ಪರಬ್ರಹ್ಮ ನಿವಹಾದ್ಭಿನ್ನರೂಪ ನಮೋ ॥ ೧೧ ॥ ಕಂಠಕೌಸ್ತುಭ ಭೂಷಣಾಂಶುಕ। ಕುಂಠಿತಾತ್ಮೈಶ್ವರ್ಯ ಅಶುಭ ವಿ । ಲುಂಠಾಕಾ[1] ಧೋಕ್ಷಜ ಉಪೇಂದ್ರ ಶ್ರೀಶ್ರೀಶ ಅನಿರುದ್ಧ ॥ ಕುಂಠಿತ ಜನನ ಮರಣ ಶಿರಿ ವೈ । ಕುಂಠ ಪದ್ಮಾಮ್ಲಾನ ತುಲಸೀ । ಕಂಠ ಮಾಲಾನ್ವಿತ ಸುಗಂಧ ಜ್ಞಾನಕೋಶ ನಮೊ ॥ ೧೨ ॥ ನಿರ್ಜರೇಷ್ಟದ ನೀತ ಫಲದ ಕು । ದುರ್ಜನಾರ್ದಕ ದೂಷ ಣಾಂತಕ । ನಿರ್ಜಿತಾಖಿಳ ಸುಜನ ಪಾಲಕ ನಿಶಾಚರೌಘಹರಾ ॥ ವರ್ಜಿತ ಕಲುಷ ನಿತ್ಯ ವಿಬುಧರ । ಊರ್ಜಿತರ ಚಾರಿತ್ರ ವಿಮಲಗು । ಣಾರ್ಜಿತೋದಧಿ ವಿಸಥಧ್ವಜ ವೈರಾಗ್ಯ ಪುರುಷ ನಮೋ ॥ ೧೩ ॥ [2]ಅಪುಶಯನ ಆದ್ಯಾಪ್ತ ಇಷ್ಟಜ । ನ ಪರ ಗತಿಪ್ರದ ಈಶ ವರ ನುತ । ಉಪಮ ವಿರಹಿತ ಊರ್ಧ್ವಗ ಪ್ರಿಯ ಋಜುಭೃನ್ನೃಪಧರ[3] ॥ ವಿಪತ ದುಃಸ್ಕೃತ ಈಖ[4] ಮೋದಕ । ಚಪಲ ಏಕಾನೇಕ ವಿಗ್ರಹ । ಸ್ವಪರ ಐಶ್ವರ್ಯೋಜ ಔದಾರ್ಯ ಸಹಸ್ರ ನಮೋ ॥ ೧೪ ॥ ಕರುಣ ನಿಧಿ ಖಳಹಗೆಯರಾದ ಪ । ಘರ ಘರಾಧಿ ಸಮ್ಯ ಜ್ಞಾನಾಮುಕಸು । ಚರಿತ ಪ್ರಾಕೃತ ಛವಿರಹಿತ ಜನಪಾ ಝುಷ ಋಷಭಾ ॥ ಞರು ಜಗತ್ಪರ್ಯಟನ ಕಮಠ ಡ । ಮರ ಧರೇಡ್ಯನೆ ಗೂಢ ಗುಣಚಿತ್ । ಪರಕುಧರಧಿ ಕೋಚ್ಚಾರಜಾರಗ ದನುಹಸ್ಥನದ ನಮೋ ॥ ೧೫ ॥ ನರಸಖಾಮಿತ ಪಶುಪ ಫಣಿಮದ । ಹರ ಬಲಾನುಜಭರಿತ ವಿಕ್ರಮ । ಮರುತ ಕಾಂಗಯರಘ್ನನೆರ್ಲೇಶ್ವಶುರ ಲಕ್ಷ್ಮೀಶಾ ॥ ವರದರಾಟ್ ಶಶಿವದನ ಷಕೃ ಸ । ನಿರುತ ಸರ್ವಭುಕ್ ಯಜ್ಞ ಹವ್ಯೇ । ಕ್ಷರ ಸ್ವತೃಪ್ತ ಸ್ವಪೂರ್ಣ ಲಕ್ಷ್ಮೀಧರ ಯಜ್ಞಾಂಗ ನಮೋ ॥ ೧೬ ॥ ಕಪಟ ನಾಟಕ ಕಾಲಕಿತವ ಭ । ಯ ಪರಿಹರ ಕೀಚಕ ರಿಪು ಪ್ರಿಯ । ಕುಪುರುಷಾಂತಕ ಕೂಬಕೇಶನೆ ಕೈವಲ್ಯ ಕೇಶ ॥ ವಿಪುಲಕೋಶನೆ ಕೌಶಿಕ ಮುನೀಂದ್ರ ಮ । ಖ ಪರಿಪೋಷಕ ಕಂಬುಕಂಧರ । ತಪನ ಕೋಟಿ ಪ್ರಕಾಶ ಕಶ್ಯಪಸುತ ಸುರೇಂದ್ರ ನಮೋ ॥ ೧೭ ॥ ಖರ

---

೨. ಚೋರ (ಪರಿಹಾರಕ). ೩. ಜಲ (ಸಮುದ್ರ). ೪. ಸತ್ಯಸಂಧದಾಜರ ರಕ್ಷಕ. ೫. ವಾಯುಬ್ರಹ್ಮರಪೋಷಕ.

ವಿದಾರಕ ಖಾದಿ ಪಂಚಕ । ಭರದಖಿಳ ಗುರೊ ವ್ರಜಸಖಿಮನೋ । ಹರ ಸು
ಖುರಪುಟ ಶೋಭಿತ ಖಡ್ಗ ಖೂರ್ಚ್ಛ ಇಷು ಪಾಣಿ ॥ ಸುರಸ ಖೇಳನ ಪರ
ಸುಖೈಕ ಶ । ರಿ ರ ವಿಶಿಷ್ಟ ಸುಖೋದಯಾಂಕುರ । ವರ ಸುಖೌಧಾಖಂಡ
ಪರಶೋ ದುಃಖ ಹರಣ ನಮೋ ॥ ೧೮ ॥ ಗಗನ ನಾಭಾಗಾಧ ಚರಿತ ಗಿ ।
ರಿಗಣ ಸೇವ್ಯ ಸುಗೀತ ಪ್ರಿಯ ಗು । ಪ್ತಗುಣ ಗೂಢಧೀಗೇಹ್ಯತ್ರಯ ಯುತ
ಗೈದಿಹ ಗೋಗೋಪ್ತ ॥ ಸ್ವಗತ ಗಳರವ ಗಂಪರಾಂಕಿತ । ಸುಗಹನೋತ್ತರ
ಶುಭ ಸುಖಾಕರ । ಸುಗಮ ಸೂಕ್ಷ್ಮ ಸುದುರ್ಗಮಾಲಯ ವಿಜಿತ ರೋಷ
ನಮೋ ॥ ೧೯ ॥ ಘಟಶ್ರವಣ ಘಾತಕ ಲಘಿಮ ಯುಕ್ । ಚಟುಲ ಗಾತ್ರಾ
ಘೀಜನ ಹರಣ । ಪಟು ರಘುದ್ವಹ ಪಿಶಿತ ಭೋಜಕ ಘೂಕಖದ್ಯೋತ ॥
ಕಠಿಣ ಘೋಟಟ ಮಾನ ಖಳ ಸಂ । ಕಟ ನಿವಾರಕ ಘೋರ ನೊಧಕರಾ ।
ನಟಕಾಘೌಘ ವಿದಾರ ಘಂಟಾಚಾಪ ದೀರ್ಘ ನಮೋ ॥ ೨೦ ॥ ಚಕ್ಷು-
ಷಾಲಯ ಚಾರುಗಣಜಿತ್ । ಕುಕ್ಷೀ ಚೀರದ್ವಯ ಚತ್ರೇತರ । ರಕ್ಷ ಚೂಡಾ
ಚೇಷ್ಟ ಚೈದ್ಯಹರಾದ್ಯ ಚೋರಾರೇ ॥ ರಿಕ್ಷಜಾತಾ ವರ ಚೌರಾ ಶಿತಿ । ಲಕ್ಷ
ಪ್ರತಿಮಾಧ್ಯಕ್ಷ ಚಂದನ । ವೃಕ್ಷವನ ಸೃಗ್ಧರ ಋಚಃಸ್ವನ ಪ್ರೀಯ ಪುರುಷ
ನಮೋ ॥ ೨೧ ॥ ಛತ್ರ ಛಾಯೋಚ್ಛಿಪ ಜಗಚ್ಛಿ । ಚ್ಛತ್ಸಕ ಮಾರನೃಪ
ಛೇದಿನಿ । ವರ್ಛೈಕಚರ ನಮೋದ್ರೇಕ ಮಾಂದ್ಯ ಹರಾ[1] ॥ ಶತ್ರುಭಿತ್ತ-
ಚ್ಛೌರ್ಯ ಭೂಷಿತ । ಸತ್ರಭುಕ ಛಂದೋಮಯಾತ್ಮಕ । ಪುತ್ರ ಪೌತ್ರ
ಪ್ರಪೌತ್ರ ಶೋಭಿತ ಸಚ್ಛಃ ವರ್ಣ ನಮೋ ॥ ೨೨ ॥ ಜಯುತರಾನನ ಜಾಡ್ಯ
ಹರಜಿತ । ಭಯ ನಿಚಯ ಜೀಪೌಘ ಹರಕ್ಷಯ । ಜೀರ್ಯಜಾಸುರ[2] ಜೂಕ-
ನುತ ಸುರಜ್ಯೇಷ್ಠ ಜೈನದಿಹನ್ ॥ ಲಯಜಲಾಶ್ರಯ ಜ್ಯೋತಿರ್ಮಯ-
ತನೋ । ವ್ಯಯ ವೃಔಕಸ ವಂದ್ಯ ಜಂಬು ನಿ । ಲಯ ಕುವಲಯಾಯುಜ[3]

---

೧. ಶ್ರೀ ಗೊರಬಾಳರ ಪ್ರತಿಯಲ್ಲಿ ಈ ಮೂರು ಸಾಲು ಬೇರೆಯಾಗಿವೆ—

ಛತ್ರಯುಕ್ ಛಾಯುಷ್ನ ಛಿದ್ವರ ।
ಕ್ಷುತ್ತೃಷಾರ್ಘ ಛೇದ ವರ್ಜಿತ ।
ಸ್ವೇಚ್ಛೈಕಚರ ಇಚ್ಛೋದ್ರೇಕ ವಂಧ್ಯಹರ ॥

೨. ಜಿರ್ಯಜಾಸುರ – (ಜಯತ ಜುಂಬಕ)

೩. ಕುವಲಯಾಯುಜ – (ಕುವಲಯಾ ಅಜ)

ಆನಂದ ಬಲಗ ನಮೋ ॥ ೨೩ ॥ ಝುಡಿತಿ ಚರ ಝುಂಝೂ ಮರುಚ್ಚರ । ಉಡುಪಚರ ಝಿಲ್ಲಿಕ ವನೇಚರ । ಔಡಿಥಿಚರ ಝೀರಿಕ ಸುರ ಝುಂಟಾವಲಯೆ ಝೂಣಿಚರ ॥ ಒಡನೆ ಝೇಂಕರಿಸುತಲಿ ಝ್ಯೆಡಿಯು । ಧೃಡದಿ ಝೋಂಡಿ-ಯೋಳ್ಚರಿಸಿ ಝೌಂಕರಿ । ಸ್ಯೊಡಲಿನೊಳು ಝುಂಕಾರ ಪೂರ್ಣನೆ ಝುಷಪತಿಯೆ ನಮೋ ॥ ೨೪ ॥ ಪಟಲ ಹೈಮ ಕಟಾಹ ಭಂಜಕ । ನಿಟಿಲ ದೃಕ್ ಟೀಕಾರ್ಥ ಸುಪ್ರಿಯ । ಕಟು ಮತಿಘ್ನ ಭವೇಡ್ಯಾ ಟಂಕಾಸ್ವಿತಿ ಕರಾಬ್ಜೇಕಾ॥ ಜಠರ ನೃಪ ಸುಕುಠಾರ ಧರಸತ್ । ಕಠಿಣ ಕರ ಸುಕಠೋರ ಯೋಧರ । ಮಠ ವಿಕಾರ ಶಠೌಘ ಸಂಹರ ನೃಹರಿ ಭೃಗುಜ ನಮೋ ॥ ೨೫ ॥ ಕುಂಡಲೀಶ ಷಡಾಸ್ಯ ಸಸ್ತುತ । ಪಂಡಿತಾರ್ಚಿತ ಪಾಂಡರಂಜಕ । ಮಂಡಲೇಶ ಬಿಡೌಜಸುತ ನೃವಿಡಂಬನ ಚರಿತ್ರ ॥ ಪಂಢರಾಪುರ ರಾಜ ವಿಠಲಾ । ಖಂಡಮತಿ ಪಾಖಂಡ ದೂಷಕ । ಷಂಡಾಮರಕ ಪ್ರಭುಗ್ನ ಮುನಿ ಪುಂಡರೀಕ ವರದ ನಮೋ ॥ ೨೬ ॥ ಪ್ರಣತಪ್ರೀಯ ಪ್ರಣಾಯ ಪ್ರಿಯವಿಪ । ಪ್ರಣಿತಪ್ರಿಯ ವಾಣೀಧವ ಪ್ರಿಯ । ಅಣುಮಹತ್ ರಮಾದೇವಿ ಪ್ರಾಣ ದೇವರು ಗಣೇಶಪ್ರಿಯ ॥ ಕ್ಷಣ ಕ್ಷಣೈಕ್ಯ। ಸುವ್ಯಕ್ತ ಧಾರಣ । ನೃಣ ಗಣೌತ್ಪಾಟಣ ರಣೌಘಾಂ । ಗಣ ಭಯೋಚ್ಚಾಟಣ ಗುಣಾಂಕ ಶರಣ್ಯಸುಖದ ನಮೋ ॥ ೨೭ ॥ ಸತ್ಯವ್ರತ ಸತ್ವಾತ್ಮಕಾಗಮಾ ಧ್ಯ ತತ್ವೇಶ ಸುರರು ತಿಲಮಾತ್ರಾರ್ಪಕೇಪ್ಸದ । ಮಿಥ್ಯ ದೂಷಕ ತೀರ್ಥಶ್ರವ ತುರ್ಯಾತ್ಮಾತೂರ್ಣ ಪ್ರಿಯ ॥ ನಿತ್ಯ ತೇಜನ ತೈತ್ತರಿಯ ಶ್ರುತಿ । ಸ್ತುತ್ಯ ತೋಯಾಯನ ಧೃತೌಷಧ । ಪಥ್ಯತಾಂತ್ರಿಕ ಪರಮ ಚೇತಃ ಪರಮ ಕಾಲ ನಮೋ ॥ ೨೮ ॥ ಪ್ರಥಮ ಪುರುಷ ಪೃಥಾತ್ಮಜಾ ನ್ಯಗ । ಮಥಿತ ವೀರ್ಯ ರಥೀಂದ್ರ ಪರಿಚರ । ಪೃಥುವಿ ಪೂಜಿತ ಸ್ಥೂಲ ಕೃತ್ಯಾಯುಥೇಚ್ಛ ಸ್ಥೈರ್ಯ-ಮತೇ ॥ ಪಥಿಕ ಸದನ ಯಥೋಕ್ತ ಪಲದ ವಿ । ಪಥರಥೌಘಪ ಸುರಥ ಚರಣ ಕು । ಪಥಗ ದೂರಕಾ ಬ್ರಹ್ಮಸ್ತಂಭಾಂತಸ್ಥ ಸ್ವಸ್ಥಃ ನಮೋ ॥ ೨೯ ॥ ದಹರ ವ್ಯೋಮಗ ದಾತೃ ದಾಂತ ಹೃದ್ । ಗುಹ ಸದನ[1] ಕರ್ತ ತುಹಿನ ಬಿಂಬಗ । ಆಹೋಘ ದೀರ್ಘ[2] ಮಯೂಖ ದುರ್ಗಾವ್ಯಾ ಕೃತಾಂಬರಗಾ ॥ ಸ್ವಹಿಗ ದೂರಗ ದೇವ ದೈತ್ಯರಗ । ದೋಹನ ಕಾರ್ಯಗ ದೌತ್ಯ ಕರ್ಮಗ । ದ್ರುಹಿಣ ದೇಹ್ಯಗ ದಂಡ ಕಾರಗ ದರ್ಪಕಸಹ ನಮೋ ॥ ೩೦ ॥ ಧರ್ಮ

---

೧. ಸದನ— (ಗದಿನ) ೨. ಆಹೋಘದೀರ್ಘ— (ಅಹಿಪದೀಪ್ತ)

ನಿಚಯರೂಪಧಾತುಸಮುಹಪ । ಕರ್ಮಾಧಿಷಣಪ ಧೀರ ಪ್ರಜ್ಞಪ । ನರ್ಮ ವಾಗ್ಮಿಪಧುನಿಕದಂಬಪ ಧೂರ್ಜಟಾಂಕಿತಪ ॥ ಚರ್ಮಖಡ್ಗಪ ಧೇನುವಿಪ್ರಪ। ವರ್ಮಧೈರ್ಯಾಂಕಿತಪಾದೋಕ್ಷಜ । ನಿರ್ಮಲಾತ್ಮಕ ಧೌಮ್ಯಗರ್ಗಪ ಧ್ವನಿಪ ಜನಪ ನಮೋ ॥ ೩೧ ॥ ನಗವಿಧೃತಕರ ನಾಗಗರ್ವಹ । ನ್ನಿಗಮರಪು ನಾಶಕ ನೀತಪ್ರಭು । ಸುಗಣಸೇವ್ಯ ನುತಜನಮಂದಾರ ನೂತನಾಬ್ಜಾಂಘ್ರೀ ॥ ಯುಗ ಯುಗಾಂತರ ನೇಮ ನೈಷ್ಟಿಕ । ಸುಗುಣನೋಧದೆ ಸೌಗ[೩] ನಂದಕ । ವಿಗತಸ್ನೇಹವಿನಷ್ಟ ಜಗದೋದ್ಧರಣಶೀಲ ನಮೋ ॥ ೩೨ ॥ ಪವನಮತಿ ಪರಪಾಕಭಿತ್ಥಂ[೪] । ಸ್ತವನನಿರತಪಿನಾಕಿ ಮೋಹನ । ಸುವಧು[೫] ಪೀಯೂಷ ಧರ ಸುಪುಷ್ಪವಿಹಾಸ ಪೂರ್ಣಪ್ರಭಾ ॥ ಕವಿವರದ ಪೇಶಲ ಜಟಿಲ ಪೈ । ಲವಿಸುತ ಸುಕ[೬] ವಿಪ್ರೋಷಪೌರಾ । ಣ ವಿರಚಕ ಪಂಚರಾತ್ರ ಭಾರತ ಸೂತ್ರ ಕರ್ತ ನಮೋ ॥ ೩೩ ॥ ಫಲಿತಸದ್ರುಸಫಾಲಲೇಖಕ । ಲಲಿತ ಸ್ಫೀತಾತ್ಮಕ ಸ್ಫುಟಥವ್ವ । ಜ್ವಲ ಮರುತ್ಪಯಃಪೇನಭುಕು ಪತೆ[೭] ವಿಸ್ಫೋಟ ತಕಟಹಾ ॥ ಬಲಬಲದ ಬಾಣಘ್ನ ಬಿಲಗಿರಿ । ನಿಲಯ ಮುನಿಹೃನ್ನಿಲಯ ಬುಧಮಂ । ಡಲ ವಿರಾಜಿತ ಬೋಧಯುತಕರ ಬಂಧ ಮೋಕ್ಷ ನಮೋ ॥ ೩೪ ॥ ಭದ್ರುಸದ ಭಾವುಕ[೧] ಬಿಷಗ್ವರ । ರುದ್ರ ಭೀಕರ ಭುಕ್ತಿದಾ ದಾ[೨] । ರಿದ್ರ್ಯ ದೂರಕ ಭೂರಿಭೂತಿದ ಭೇದವಾದೀಶಾ ॥ ಹೃದ್ರುಜಹನ್ ಭೈಷ್ಮೀಶ ಭೋಜೇಶಾ[೩] । ಗದ್ರಿಕುಲಿಶ ಕುಶಸ್ಥಳೋಕ ಸೋ । ಪದ್ರ ವಾರ್ಧಕ ಭೌಮ ವರಪ್ರದ ಭಂಗರಹಿತ[೪] ನಮೋ ॥೩೫॥ ಮಕರಧ್ವಜಜಿತ ತಮಾಸ ಖಾಮಿತ । ಭುಕುಲ ಜೀವನ ಮಾನ ಮುರಲೀಧ । ರಕರ ಮೂಲಕವೀಂದ್ರ ಮೋಧ್ಯ ಚರಿತ್ರ ಮೈಥಳವಾ ॥ ಸುಕರ ಮೋಹರ ಮೌನಿ ಪೂಜಕ । [೫]ಚಕಿತಕರ ನುಜೇಂದ್ರ ಕರುಣಾಂ । ಬಕ ಬಕಾಂತರ ಮಂಜುಹಾಸ ಮಹಾಧಿರಾಜ

---

೩. ಸೌಗ— (ಸಾಗ) ೬. ಸುಕ— (ಶುಕ)
೪. ಬಿತ್ಥ— (ಬಿಂಚ) ೭. ಪತೆ— (ಕ್ಷತ)
೫. ಸುವಧು— (ಸುವಧೋ)

೧. ಭಾವುಕ— (ಭಾವುರ) ೨. ಭುಕ್ತಿದಾ— (ಭುಕ್ತಿದನೆ)
೩. ಭೋಜೇಶಾ— (ಕಂಸ) ೪. ರಹಿತ— (ಭಸಿತ)
೫. ಚಕಿತ— (ಚರಿತ)

ನಮೋ || ೩೬ || ಯಜ್ಞಭಿಕ್ಷಕ ಯಜ್ಞರತ ಇಂ| ದ್ರಾಜ್ಞಾ ದೂಷಕ ಈಷಣಾಧ್ವರ್ಯತ[೬] | ಸುಜ್ಞರಾಡ್ಯುಗ ಮೂಗ ಸಂಭವ ಯೂಥಪೋತ್ತಂಸ || ಆಜ್ಞಭಿದ್ಯೇಕೇಶ ಮೌರಿಗ[೭] | ಣಜ್ಞ ಯೌವನ ಪುಂಸಯಂತ್ರಾ | ರ್ಥಜ್ಞ ಪೋಷಕ ಕಿಂಕರೋಧೃತ ಕಾಮು[೮] ಕಾಷ್ಟ ನಮೋ || ೩೭ || ರಸಿಕ ರಾಜಿಪ ರಾಜ್ಯಚಕ್ರಪ | ವಸು ಪರಿಕ್ಷಪ ಕುಲ ಪರೀಕ್ಷಿಪ | ಪರರ ಪಾಂಥಪ ರುಚಿ ಗುಣೌಘಪ ರೂಪ ಬಹುರೂಪಾ || ಅಸುಪ ರೀತಿೋದ್ಭವ ಪರ್ಯೆಗ[೯] ಪ[೧೦] | ರಸ ಪರೋಕ್ಷೌಪ್ಯ ನಗಪಪಾ[೧೧] | ಕುಸುಮಬಾಣಪರಂಗಾ ಕ್ಷೇತ್ರಪ ರಹಸ್ಯ ಪಾಲ ನಮೋ || ೩೮ || ಲವಜನಕ ಲಾಘವ ಕರಾಬ್ಜ ಲಿ | ಪ್ತ- ವಿಮಲ ಶ್ರೀಚಂದನಾಂಗ ಲೀ | ಲಾ ವಿನೋದಕ ವನಚರ ಪಾವನ ಲುಬ್ಧ ವಧು ಫಲವಿಭೋಕ್ತಾ[೧] || ನುಲಾಭ ಜೋಧಕ ಭವಜಪಾಕ್ಷರ | ಅತೀಶ ಮೋಹಮದ ವಿರಹಿತ ಲೋಭ | ಘ್ನ ಲೌಕಿಕ ಪ್ರವಹೇತ ಲಂಕೌಕ ಸಾರ್ಧಕ ಲುಬ್ಧ ತುಷ್ಟ ನಮೋ || ೩೯ || ವಕ್ತ್ರವರ ವಾಲ್ಮೀಕಿ ಕೃತೀಶ ವಿ | ವಿಕ್ತ ಮತಿ[೨] ಪರರೀಶ ಗತಿಪ್ರದ | ವ್ಯಕ್ತಸುಚರಿತ ಪೂರ್ಧ್ವ ಪಟಪ್ರಸ್ಥಾಪ ವೇದ್ಯ ನಮೋ[೩] || ರಿಕ್ತಭಯ ವೈದೇಹಿ ಮನೋಹರ | ತ್ಯಕ್ತ ಪ್ರಾಕೃತಪೊಂ ಪೌಷಡಾಕ್ಷ್ಯಾ | ದುಕ್ತಿ ವಾಚಕ ವಂದ್ಯವಂದಿತ ವಹಕ ವಾಹಕ ನಮೋ ||೪೦|| ಶಮಯುತಾಗ್ರಣಿ ಶಾಮಶಿವಕರ | ಗಮನಶೀಘ್ರಗ ಶುದ್ಧವಿದ್ಯೋ | ದ್ಯಮ ಶುಚಿವ್ರತ ಶೂರ್ಪನಖಿ ಮದಹರ್ತ ಶೇಷಸಹ || ಯಮ ದಯಾಂಬುಧೆ ಶೈಲ ಗ್ರಹ ಸಂ | ಯಮಿ ಗಣಾರ್ಚಿತ ಶೋಕತಾಪಪ್ರ | ಶಮನ ಕೌಟಾರಯುತ ಮಹಾಪ್ರಭೋ ಶಾಂತಶಸ್ತ ನಮೋ || ೪೧ || ಷಡ್ವಿಭೂತೆ ನಿಷಾದ ಭಯ ಹರ | ಷಡ್ವಧೂಧವ ಋಷಿವಧೂಸಖ | ಶಾಡ್ವಲಚರ ಇಷಿಕ ಇಷುಕಾಂಡ ಸವಿಹಾರಾ || ಷಡ್ವಿಕಾರಾತೀತ ವಿಜಿತಾ | ನಡ್ವ ಷೇಚಿತ ಸೌರಭೇಯ ಭೂ | ವಿಡ್ವರಘ್ನ ವೃಕ್ಷೌಘ್ನ ಸ್ವರ್ಣ ನಿಷಂಗ ಚಾಪ ನಮೋ ||೪೨|| ಸರಸಿಜಾನನ

---

೬. ಈಷಣಾ— (ಈರ್ಷ್ಯಾಷಣಾ) ೭. ಮೌರಿ— (ಮೌಸಿ)

೮. ಕಾಮು— (ಕಾಮಿ) ೯. ಪರ್ಯೆಗ— (ಪರೇಶ)

೧೦. ಪರಸ— (ಪಾರಸ) ೧೧. ನಗಪಪಾ— (ನತಪಪಾ)

೧. ವಧುಭೋಕ್ತಾ–(ವಧುಫಲಭೋಕ್ತಾ). ೨. ಪತಿ–(ಮತಿ).

೩. ನಮೋ–(ತನು).

ಸಾಧ್ಯ ಸಿದ್ಧನಿ! ಕರ ಕರಾರ್ಚಕ ಶಿಕ್ಷಾರಕ್ಷಕ । ಸುರಹೃನ್ಮಂದಿರ ಸೂರಿಹೃದ್ಗೃಹ ಸೇವ್ಯ ಸುರಮೌಳಿ ॥ ನಿರಜ ಸೈಂಧವ ಶಾಸ್ತ್ರ ಸ್ತೋಮಾ । ಭರಣ ತೋಷಕ ಸಾವ್ಯ ರತ್ನಾ । ಕರ ನಿರಂಜನ ಸಂಜಯೋತ್ಸವ ಸಹಜಶೂರ ನಮೋ ॥೪೩॥ ಹಲಿಸಹಗ ಹಾರ್ದಿಕ ಮನೋಗತ । ಫಲ ಹಿರಣ್ಮಯವಸನ ಹೀರಾ । ವಲಯ ಹಿತಭುಗ್‌ಬಲದ ಹೂಣ ಪವಿತ್ರ ಹೇತ್ವಾರ್ಥಾ ॥ ಜಲಧಿ ಪುರಪತಿ ಹೈಮರಾಶಿದ । ಬಲದ ಹೋಮದ ಹೋತ್ರ ಭಾಗದ । ಸುಲಲಿತೋದನ ಪರಮಹಂಸ ಸತ್‌ಕುಲ ಹರುಷ ನಮೋ ॥ ೪೪ ॥ ಪಳಲವಾಂತ ಕಳಾಢ್ಯ ಯಜ್ಞಾ । ವಳಿ ಕೃತಾದರ ನಿರ್ವಳೀಕ[೧] ನಿ । ಖಿಳ ಕೃಪಾಳು ವರೇಣ್ಯ ಜೀವ ಜೀಳೂಕ ತೃಪ್ತಿಕರ ॥ ಸ್ಥಳ ಕಳೇವರ ಭರಿತ ಬ್ರಹ್ಮ ವಿ । ಸ್ಪುಳ ಕಲ್ಪೈಕ್ಯ ತಳೋರ್ಧ್ವ ಮದ ವಿ ! ವ್ಹಳ ಜಳೌಘನೆ ನಿಷ್ಕಳಂಕ ಕಳಾ ಪ್ರ-ಪೂರ್ಣ[೨] ನಮೋ ॥ ೪೫ ॥ ಕ್ಷತವಿದೂರ[೩] ಕ್ಷಾರಾಭಿ ಬಂಧತ । ಕ್ಷಿತಿ ಭರಹರ ಕ್ಷೀರನಿಧಿ ಗ್ರಹ । ಅತುಳ ಗ್ರಹ ಕ್ಷುದ್ರಾರಿ ಕ್ಷೂರಾಯುಧ[೪] ಕ್ಷೇವೈಶ್ವರ್ಯ[೫] ॥ ಗತಿ ಗಶೀ ದೀಪ್ತೈಕ್ಯ ಕ್ಷೋಣಿ । ಪತಿ ಪತಿ ಕ್ಷೌಮರಥ ಕ್ಷಾಂತಿ ಭ । ರಿತ ನೃಗೋ-ದ್ಧರ ಕ್ಷತ್ರ ವಲ್ಲಭ ಕ್ಷತ್ರಿ ವೇಷ ನಮೋ ॥ ೪೬ ॥ ಏಕರಾಡ್ ವಿಶ್ವೇಕಕಾರಕ । ಏಕ ವ್ಯಾಪಕ ಏಕ ಸ್ಥಾಪಕ । ಏಕ ಭೋಜಕ ಏಕ ಯೋಜಕ ಏಕತೋ ಕಾತ್ಮ ॥ ಏಕಸೃಜ ಭುವನೈಕ ವರ್ಧಕ । ಏಕ ಮಾರಕ ಏಕ ತಾರಕ । ಏಕ ಯಾಚಕ ಏಕ ಸೂಚಕ ಏಕ ಪತ್ರ ನಮೋ ॥ ೪೭ ॥ ದ್ವಯ ಕ್ರಿಯೇಶ್ವರ ದ್ವಯ ಪಥೇಶ್ವರ । ದ್ವಯ ಸುವಿಸ್ತರ ದ್ವಯವಿಗೋಚರ । ದ್ವಯ ನಿವಾರಕ ದ್ವಯ ಪ್ರದಾರಕ ದ್ವಯ ಸಮಯ ಪೂರ್ಣ ॥ ದ್ವಯ ಪ್ರಮಾಪಕ ದ್ವಯ ನಿಯಾಮಕ । ದ್ವಯ ನಿರಂತರ ದ್ವಯ ದ್ವಯೇತರ । ದ್ವಯ ಸುಬೋಧಕ ದ್ವಯ ಪ್ರಸಾದಕ[೧] ದ್ವಯ ಭಯಘ್ನ ನಮೋ ॥ ೪೮ ॥ ತ್ರಿಯುಗ ತ್ರಿವಿಗ್ರಹ[೨] ತ್ರಿಪದ ಕಾಲ । ತ್ರಯುಗ[೩] ತ್ರಿದಿವಪ ತ್ರಿಪಥಗಾಪಿತ ತ್ರಿ । ನಯ ನಾರಿಹನ್[೪] ತ್ರಿಪುರ ಮೋಹಕ ತ್ರಯ ತ್ರಿಂಶತ್ ಸುರಪ ॥ ತ್ರಿಯುಗುದಿತ ತ್ರಿಗುಣೇಶ ಸಾಗರ । ತ್ರಿಯಪ

---

೧. ನಿರ್ವ್ಯಳೀಕ—[ನಿರ್ವಳೀಕ] ೨. ಪ್ರಪೂರ್ಣ—[ಪ್ರವೀಣ] ೩. ವಿದರ—[ರಹಿತ] ೪. ಕ್ಷೂರಾಯುಧ—[ಕ್ಷೂರಾಯುಧನೆ] ೫. ಕ್ಷೇಮೈಶೋ—[ಕ್ಷೇಮೇಶ]

೧. ಪ್ರಸಾಧಕ—[ಪ್ರಸ್ಥಾಪಕ] ೨. ತ್ರಿವಿಗ್ರಹ—[ತ್ರಯಸುವಿಗ್ರಹ]

೩. ತ್ರಿಯುಗ—[ತ್ರಿಯುಗ] ೪. ನಾರಿಹನ್—[ನಾರಿಹ]

ಪಂಚಕ ತ್ರಿವಿಧ ಭಾಷ್ಯ ನಿ | ಚಯ ಕಚಕ ತ್ರಿದಶಾರ್ಚ ತ್ರಿಜಗದ್ಧರಣ ಮಾರ್ಗ ನಮೋ || ೪೯ || ಚತುರ್ವಿಧಾತ್ಮಾ ಚತುರ್ಭುಜಾಂಚಿತ | ಚತುರ್ಮುಖಾ-ಧಿಪ ಚತುರ್ವಿಧಾರ್ಥದ | ಚತುರ್ವರ್ಣಾಶ್ರಯ ಚತುರ್ಮುಕ್ತಿ ಚತುಷ್ಟ-ಯೇಶ್ವರ[೫] ತಾ || ಚತುಃಸಮುದ್ರಗ ಚತುರ ತರ ಮತಿ | ಚತುರ್ವಿಧಾಯತ ಚತುರ್ಬಲಾಂಬುಧಿ | ಚತುರ ವೇದಾರ್ಥಿತಚರಣ ಚತುಶ್ಶಾಸ್ತ್ರ ಪೂಜ್ಯ ನಮೋ || ೫೦ || ಪಂಚಮುಖ ಮುಖಪಂಚ ಮುಖನುತ | ಪಂಚಜನ ರಿಪು ಪಂಚ ಮೋಕ್ಷದ | ಪಂಚಪಾಂಡವ ಪ್ರಾಣವರ ಪಂಚಾಕೃತವ್ರಾತ || ಪಂಚಶರಪಿತ ಪಂಚವ್ಯೂಹ ಸು | ಪಂಚಭಿದಮತ ಪಂಚಪರ್ವಹ | ಪಂಚ ಕಾಲಜ್ಞಜ್ಞ ಸಂಭೃತ ಪಂಚಬಾಣ ನಮೋ || ೫೧ || ಷಟ್ಸಹೋದರ ಷಟ-ರಣಚರ | ಷಟ್ಸಪತ್ನಹನ್ ಷಡೂರ್ಮಿಹರ | ಷಟ್ಶಕ್ತ್ಯಾತ್ಮಕ ಷಡ್ಗುಣೇ-ತರ ಷಡ್ರುತ ಪ್ರವಹ || ಷಟ್ಕೋಶಭಿದ ಷಟ್ಪರೋಕ್ಷದ | ಷಟ್ಕ್ರಿಯುಗ ಷಟ್ಶಾಸ್ತ್ರ ಪ್ರಿಯ | ತಮಃಷಟ್ಕ ಸಹಗ ನಮೋ || ೫೨ || ........... || ೫೩ ||[೬] ಅಷ್ಟಕಾರಣ ಶ್ಲಿಷ್ಟಮಹಿಷೆಯ | ರಷ್ಟಕಾಶ್ರಯ ಅಷ್ಟಮದಹರ | ಅಷ್ಟ ಕಾಷ್ಟಿಗ ಅಷ್ಟ ಭೂತಿದ ವ್ಯಷ್ಟ ಸೃತ್ಯಹ || ಅಷ್ಟ ದಂಶ ಕ್ಷೋಣಿ ಪ್ರಜಹರ | ಅಷ್ಟನಾಗಪ ಅಷ್ಟಭುಜಧರ | ಅಷ್ಟ ಆಯುಧ ಸಂಭೃತಾಷ್ಟೌಷಧ ತ್ರಿಭಾಂಗ ನಮೋ || ೫೪ || ನವಸುರತ್ನಾಭರಣಯುಕ್ತ್ರಿ | ರ್ನವಕಪ್ರಿಯ ನವ ದ್ವಾರಪುರ ಪ್ರಭೆಂ | ನವಶಯುಕ್ತ್ಯಾತ್ಮಕ ನವಗ್ರಹ ನವದೃಯಾಗದ್ರುಣ || ನವರಸೇಶ್ವರ ನವಪ್ರಜೇಶಪ | ನವಸಿಧೀಶ ನವಾರ್ಥದೆ ದಾ | ನವರಿಪುವೆ ನವಕೋಟ್ಯಮರರಿಂ ನಮಿತ ಚರಣ ನಮೋ || ೫೫ || ದಶಶತಾನನ ದಶ ಶತಾಂಬಕ | ದಶಶತಸುತೋರ್ದಂಡ ದರಖಳ | ದಶದಶಾಭಿದ ದಶಶತಾಭಿದ ಖಗಾಮರಪ || ದಶವರೂಥಜ ದಶಮುಖಘ್ನ ತ್ರಿ | ದಶಭಯಾಂತಕ ದಶಕ ಕುಭ ಹಸತ್ | ದಶನ ದಶಮತಿಭಾಷ್ಯಖುತ ದಶ ನೀಶ ದ್ರಕ್ಷ ನಮೋ ||೫೬|| ಶತ ಸುಖಾರ್ಥಿತ ಶತಾಬ್ಧಶಯನ ಸು | ಶತಮುಖಾರ್ಚಿತ ಶತಗೋಪಿಪತೆ | ಶತಸೋಮಪ ನೃಪಶತಕಸ್ಮಾಪಕ ಶತಶತಾಂಶಧರಾ || ಶತಕುಂಜಹನ್ ಶತಕುಲೋದ್ಧರ | ಶತಾಯುಃಪ್ರದ ಶತಾಪರಾಧಿಪ | ಶತಸಹಸ್ರಾರ್ಕಾಭಿ ಶತಪತ್ರಾಕ್ಷ ಸುಖದ ನಮೋ || ೫೭ || ಕ್ಷಿತಿಪ್ಲವೋದ್ಧರ ಕ್ಷಿತಿಭೃತೋದ್ಧರ |

---

೫. ಈಶ್ವರತಾ— [ಈಶ್ವರತೇ] ೬. ೫೩ನೆಯ ಪದ್ಯವು ದೊರೆತಿಲ್ಲ.

ಕ್ಷಿತಿತಳೋದ್ಧರ ಕ್ಷಿತಿಚಲನಕರ । ಕ್ಷಿತಿತ್ರಿಪದಧರ ಕ್ಷಿತಿಪಕ್ಷಯಕರ ಕ್ಷಿತಿಕನ್ಯಾಂಸಕರ ॥ ಕ್ಷಿತಿ ಜನಾಕರ ಕ್ಷಿತಿಖಳ ಮೋಹಕ । ಕ್ಷಿತಿ ಭರಾರ್ದಕ ಕ್ಷಿತಿಪಾಲನಕರ । ಕ್ಷಿತಿ ವಲಯಚರ ಕ್ಷಿತಿಜನೇತರ ಕ್ಷಿತಿಸುರೇಶ ನಮೋ ॥೫೮॥

ಅಂಬುಗಮನ ಪಯೋಂಬುಮಥನ ಲ । ಯಾಂಬುತಳಗಾರುಣಾಂಬು[೧] ಸಟ ಬಾ । ಹ್ಯಾಂಬುಪ್ರವಾಹಕ[೨] । ಅಂಬುಶೋಷಕ ಅಂಬುಧಿಮದಘ್ನ ॥ ಅಂಬುಗ್ರಹ ಮಹಾಂಬುಧೆ ಘ[೩] । ರ್ಮಾಂಬು ಶ್ರೀಮತ ಅಂಬುಜೇಶ ಸು । ಧಾಂಬುಧಿ ಸಮಾನೋದರಾಂಬುದಗಾತ್ರ ಕಪಿತ ನಮೋ ॥ ೫೯ ॥ ಅಗ್ನಿನಿಭ ಅಬ್ಧ್ಯಗ್ನಿ ಸಹಚರ । ಅಗ್ನಿಮಯ ಪ್ರಳಯಾಗ್ನಿ ಲೋಚನ[೪] । ಅಗ್ನಿಕಾರ್ಯಜ್ಞಾಗ್ನಿಪೂಜಿತ ಅಗ್ನಿಹೋತ್ರಯುತಾ ॥ ಅಗ್ನಿರುಧ ಅನ್ನಾಗ್ನಿ-ಕೋಪನ[೫] । ಅಗ್ನಿಸ್ಥಾಪಕ ಅಗ್ನಿವ್ಯಾಪಕ । ಅಗ್ನಿವರ್ಧಕ ಅಗ್ನಿದೀಪಕ ಅಗ್ನಿವರ್ಣ ನಮೋ ॥ ೬೦ ॥ ವಾತಜನ ಚಕ್ರ[೬] ವಾತಸಮಭ್ರಮ । ವಾತಪಾಗ್ರಜನಾಸಿಕಜ ಲಯ । ವಾತಸಮಾಕ್ರಾಶಾಂಕ[೭] ವಾತ ಭ್ರಾತೃ ಹಿತಕರಣಾ ॥ ವಾತಸಖಗತವಾತ ಭವನುತ[೮] । ವಾತಸುತಮತ[೯] ವಾತರಶನ ಸು । ವಾತಸಮ ಹರಿಗಮನ ಸೂತ್ರ ಸುವಾತ ಜನಕ ನಮೋ ॥ ೬೧ ॥ ಅಂಬರಮಣಜಾರ್ಚಿತ[೧೦] ನಗಾಂಬರ । ಅಂಬರ ಕ್ರೀಡಾಂಬರಾಳಕ । ಸಂಭಜಿತ ಸ್ವಾಂಬರಭರಿತಪದ ಅಂಬಾರೇಣುಕಹನ್ ॥ ಅಂಬರಗವಂಶೇಂದ್ರ ಗೋವ । ಧ್ವಾಂಬರಾಪ[೧೧] ಹರಾಂಬರಾಂಬರ । ಅಂಬರಗಹಯಗಾಂಬರ ಪಂಪಾಂಬರ ಸುನಾಭಿ ನಮೋ ॥ ೬೨ ॥ ಶಬ್ದಬೋಧಕ ಶಬ್ದಕಾರಕ । ಶಬ್ದ ಘರ್ಘರ ಶಬ್ದಹುಂಕರ । ಶಬ್ದಪಾರಗ ಶಬ್ದವೀರಗಭೀರ ಶಬ್ದಾಂಕಾ ॥ ಶಬ್ದಶೋಧಕ ಶಬ್ದದೂಷಕ । ಶಬ್ದಸ್ಥಾಪಕ ಶಬ್ದವಿಸ್ತೃತ । ಶಬ್ದಬ್ರಹ್ಮಜ್ಞೇಶ ಶಬ್ದಾತೀತ ಶಬ್ದ ನಮೋ ॥ ೬೩ ॥

---

೧. ತಳಗಾರು—(ತಳಗರಾ). ೨. ಪ್ರವಾಹಕ—(ವಾಹಕ). ೩. ಘರ್ಮಾಂಬು—(ಧರ್ಮಾಂಬು). ೪. ಲೋಚನ—(ಮೋಚನ). ೫. ಅಗ್ನಿಕೋಪನ—(ಅಗ್ನಿಕೋಪಮಾ). ೬. ಜನಚಕ್ರ—(ಜನಕನೆ). ೭. ವಾತಸಮ—(ವಾತಸಮಯ). ೮. ವಾತಭವನುತ—(ವಾತಭವಮತ). ೯. ವಾತಸುತಮತ—(ವಾತಸುತನುತ). ೧೦. ಅಂಬರಮಣಿ—(ಅಂಬವಾರ್ಣಾರಿ). ೧೧. ಅಂಬರಾಪ—(ಅಂಬರೂಪ).

ವೃಷಭಗೇಷ್ಟ[೧] ಮಿಥುನ ಪರ್ವಕ । ವಿಷಮ ಕರ್ಕಶ ವೃತ್ಯ್ಯಕರಿಹರಿ । ವಿಷರದನ ಕನ್ಯಾಪತಿ ಸಖ ವೃಶ್ಚಿಕಾ ಭಾಂಗಾ[೨] । ವಿಷಪಧನಹರ ಮಕರ ಕುಂಡಲ[೩] । ವಿಷಕುಂಭಸ್ತನಪಾನತತ್ಪರ । ವಿಷಯಸುಖಮಯಮೀನ ಮೇಷಾ ರೂಢ ವಿಷಯ ನಮೋ ॥ ೬೪ ॥ ಅಶ್ವರೂಪ ಮಹಾಭರಣಿಸಖ । ವಿಶ್ವಕೃತ್ತಿ ಕಾಯುಂಗಿ[೪] ವರರೋಹಿ । ಣೀಶ್ವರೋದ್ಭವ ಮೃಗಮದಾಂಕಾರಿದ್ರ ವಿಣ[೫] ಹರಣಾ ॥ ನಿಸ್ವಜನ ಪುನರ್ವಸುದರ್ರೋಗರ್ರೋ[೬] । ಹೀಶ್ವರಾಸನ ಪಿತೃಚಯಾರ್ಚಿತ । ಸ್ವಸ್ವ ಭಾಗ್ಯಸುಪೂರ್ಣಾರ್ವಮೃತಮಯೋತ್ತರ[೭] ಸುಹಸ್ತ ನಮೋ ॥ ೬೫ ॥ ಚಿತ್ರರಥ ಸ್ವಾತಿಶಯದೂರ ಮರುತ್ತಲೇಶಾ[೮]ನುರಾಧ ಕೋದ್ಧರ । ಗೋತ್ರಿ ಸುಖಕರ ಮೂಲರಾಕ್ಷಸವಂದ್ಯ ಜಲರೂಪ ॥ ಶತ್ರು ಶ್ರವಣಾಹಿತ ಧನಿಷ್ಠ ನ । ಕ್ಷತ್ರ ಶತಪತಿಕುಲಜ ಮಧ್ಯ ಪೂ । ರ್ವೊತ್ರ ಭಾದ್ರ ಪದೇಶ ರೇವತಿ ರಮಣ ಅನುಜ ನಮೋ ॥ ೬೬ ॥ ಕತರಕರ್ಚಿತ ಕಿತವ ಹರ ಸತ್ಯ । ವ್ರತಪ ಕ್ರೀಡಾಪದಕುಧರಕೂ । ಜಿತ ನಿಗಮಕೇಡ್ಯ ಗೋಖರ ಮುಖ ಕೌಶಲಜವಗವೂ ॥ ಶ್ರುತಿಹರಾಹರ ಕಂಠರೇಖಾಂ । ಕಿತ ಕಶ್ಯಪ ಸುತ ಕರುಣಭಾಸಕ । ಶತ ಸುಖೋದ್ಧರ ಸಿತತರೋದರ ಶಫರಿರೂಪ ನಮೋ ॥ ೬೭ ॥ ಕಮಠಕಾಲಯ ಕಿಲ್ಬಿಷೋದರ । ಪಮಲಕೀಲಾ ಲೇಷ್ಟ ಕುಲಗಿರಿ । ಭ್ರಮಣಕರ ಕೂಪದಕಮೇತರ ಕೇಶ್ವರೇಷ್ಟಕರ ॥ ಅಮಿತ ಕ್ಷೈತವಾನಿಷ್ಟ ಕೋಮಲ । ವಿಮಲ ಜಠರ ಕಠಿಣ ವಪುಃ ಕೌ । ರ್ಮ ಮಹ-ತ್ಸತ್ರ್ಕೃತಿ ಪ್ರಿಯ ಕಂಠಲಂಬ ಕಚ್ಛಪಸಾತ್ಮ ನಮೋ ॥ ೬೮ ॥ ಕನಸ ಭವ ಕಾಪುರುಷಮಥನ ಕಿ । ಟಿಸಟ ಕೀರ್ತಿತಯಜ್ಞ ಕುಶಮಯೆ । ತನು ಶ್ರೀ ಕೂಧನಕೃಪಾಶೌಂಡ ಕೈಶೋರ ಕುಜವರದ ॥ ಘನು ಸಮುಶ್ವನ ರೋಲ ಘರ್ಘರ । ಮನು ಸನಕನುತ ಕೌತುಕಾಟಣ । ಕನಕಗಿರಿಚರ ಕಂಜಭವ ಮತ ಕಷ್ಟಹರಣ ನಮೋ ॥ ೬೯ ॥ ಮಧ್ವವಲ್ಲಭ ಮಧ್ವತೀರ್ಥಗ । ಮಧ್ವಮತಪರ ಮಧ್ವಪತೆ ಮುನಿ । ಮಧ್ವರಮಣ ಶ್ರೀಮಧ್ವಯತಿನುತ

---

೧. ಗೇಷಟ— [ಗಿಜ] ೨. ವೃಶ್ಚಿಕಾಭಾಂಗಾ— [ವೃಶ್ಚಿಕಾ ಭಂಗಾ] ೩. ಮಕರ ಕುಂಡಲಿ— [ಸೋಮಕರ ಮಕರಿ] ೪. ಕೃತ್ತಿಕಾಯುಂಗಿ— [ಕೃತ್ತಿಕಾರ್ಯಾಂಗ] ೫. ಅರಿದ್ರವಿಣ— [ಅರಿದ್ರವಣ] ೬. ರೋ— [ರೋಗಣ] ೭. ಸ್ವಪೂರ್ಣಾರ್ವಮೃತ ಮಯೋತ್ತರ—[ಸುಪೂರ್ಣ ಅಮೃತೋತ್ತರ] ೮. ಮರುತ್ತಲೇಶಾ—[ಮರುತ್ತವೇಶಾ]

ಮಧ್ವಪುಷ್ಕರಪಾ ॥ ಮಧ್ವಪೋಷಕ ಮಧ್ವಭಾಷಕ । ಮಧ್ವತೋಷಕ ಮಧ್ವ ರಿಪು ಹರ । ಮಧ್ವಕಾವದ ಮಧ್ವ ಹೃದ್ಗುಹ ಮಧ್ವವಿಭವ ನಮೋ ॥ ೭೦ ॥ ಪ್ರಸನ್ನ ಭವನ ಪ್ರಸನ್ನ ಭಾಷಣ । ಪ್ರಸನ್ನ ಕಾರ್ಯ ಪ್ರಸನ್ನ ಗುಣನಿಧೆ । ಪ್ರಸನ್ನ ನಾಮದ ಪ್ರಸನ್ನ ತೇಜದ ಪ್ರಸನ್ನತರ ಮೂರ್ತೆ ॥ ಪ್ರಸನ್ನ ಪುರುಷ ಪ್ರಸನ್ನಸೋಂಕಿತ । ಪ್ರಸನ್ನ ಕಥನ ಪ್ರಸನ್ನ ಭೂಷಣ । ಪ್ರಸನ್ನ ಚರಿತ ಶ್ರೀ ಪ್ರಸನ್ನ ವೇಂಕಟ ಪ್ರಸನ್ನ ಕೃಷ್ಣ ನಮೋ ನಮೋ ॥ ೭೧ ॥

— ಶ್ರೀಗುರು ಮಧ್ವೇಶಾರ್ಪಣಮಸ್ತು —

೧೯೪

## ಉಗಾ ಭೋಗಗಳು

ಸಲೆ ಸಲ್ಲಾ ನವಸಭೆ ಸಲ್ಲಾ । ಬಲಿಮದಹೃತ ನಿನ್ನೊಲಮಿಯರೋಳ್ಳೊಳ ಸಲೆ ಸಲ್ಲಾ ॥ ಹೊಂಬಾಳಿಂದೊಡಲಿಂಬುಗೊಡಲು ಒಲು । ಸಂಭ್ರಮವಕ್ಕದೆ ಲಕುಮೀಶಾ ॥ ನಂಬಿಗೆ ಇಲ್ಲದಗಿಂಬಿಲ್ಲೆಂದಿಗೆ । ಡಂಬರ ವ್ರತ ವೃಥ ಲಕುಮೀಶಾ ॥ ಕುಂಭಿಣಿಗುಬ್ಬಸನೆಂಬರು ಹರಿಪಾ । ದಾಂಬುಜ ವಿಮುಖಿಗೆ ಲಕುಮೀಶಾ ॥ ಶಂಭುಪ್ರಸನ್ವೆಂಕಟಾಂಬುಧಿಶಾಯಿ ನಿ । ನ್ನಂಬಲವಿಲ್ಲದ ಕುನರರನ ॥ ೧ ॥

## ನವಭಕ್ತಿ

ಹರಿಯ ಒಂಭತ್ತು ಭಕುತಿ ಬಲ್ಲ ಧೀರಾ । ಮರಳಿ ಸಂಸೃತಿಯಲ್ಲಿ ಹುಟ್ಟಿ ಬಾರ । ದುರಿತ ದುಷ್ಕೃತಿಗಳ ಕಂಡು ಶೇರ । ಹಿರಿಯರೊಲ್ಬಿರಿನುಡಿ ಜಿಹ್ವೆಗೆ ತಾರ । ಪ್ರಸನ್ನ ವೆಂಕಟಗಿರಿಯ ಉದಾರನ । ಚರಣಾಬ್ಜನಿಷ್ಠಿ ಅಂಗಡಿ ಇಟ್ಟು ತೋರ ॥ ೨ ॥ ಹರಿಕಥಾ ಶ್ರವಣಕ್ಕೆ ಮನವಿಟ್ಟ ಪ್ರೌಢ । ಅರವತ್ತು ಘಳಿಗೆಯ ವ್ಯರ್ಥ ಹೋಗಗೊಡ ॥ ಪರಮ ಪದವಿಗೆ ಯೋಗ್ಯನವನೇ ಗಡ । ನರಕದ ಬಟ್ಟೆಯ ದೂರದಲ್ಯೊ ನೋಡ । ಪ್ರಸನ್ನ ವೆಂಕಟಪತಿಯಂಘ್ರಿ ಗಾಥ ತರದಲಪ್ಪುತ ವ್ಯೆಯ್ಯ ಮರೆದು ಮಾತಾಡ ॥ ೩ ॥ ಹರಿನಾಮ

ಕೀರ್ತನೆಯ ಭಕುತಿ ತುಂಬಿ ಪೇಳ್ವ | ಸರಸ ಭಾವದಲಿ ಕಣ್ಣೊರತಿಯನು ತಾಳ್ವ | ಹರುಷಾಮೃತಾಬ್ಧಿಯಲ್ಲಿ ಮುಳುಗಿ ಮುಳುಗೀ ಏಳ್ವ | ದುರಿತ ಗಜದ ಮಂಡಿಯನು ಹೊಡೆದು ಶೀಳ್ವ | ಹರಿಯಂತೆ ಕೂಗಿ ಸಜ್ಜನರೊಳಗೆ ಬಾಳ್ವ | ಪರಸನ್ನ ವೆಂಕಟ ಭಟಗೆಮನೊಲಿವ || ೪ || ಹರಿಸ್ಮರಣೆಗೆ ವಿಸ್ಮೃತಿಯನವ ಜರಿದ | ಚಿರಕಾಲದಘವನೊಮ್ಮಿಂದೊಮ್ಮಲೇ ತರಿದ | ಪರಮ ಭಾಗವತರ ಸಮ್ಮೇಳನವ ಬೆರದ | ನೆರೆ ಹಿತಕರಿಗೆಲ್ಲ ಮುಕುತೀಗೆ ಕರೆದ | ವರ ಬಿಂಬ ಕಾಂಬುವ ಕಂಗಳ ತೆರದ | ಪರಸನ್ನ ವೆಂಕಟೇಶನ ಹೊಂದಿ ಮೆರದ || ೫ || ಹರಿಪಾದ ಸೇವನ ಧ್ಯಾನ ಬಲ್ಲಿದನ್ನ | ವರ ಪುಟವಿಟ್ಟ ಚಿನ್ನದಿ ಮೊಗ ಬಣ್ಣ | ದುರಿಚ್ಛೆಯಿಂದ ದುರ್ವಿಷಯಕೆ ಎತ್ತ ಕಣ್ಣ | ಹರಿ ಗುರುಗಳಲ್ಲದೆ ಶರಣೆನ್ನ | ಪರಸನ್ನ ವೆಂಕಟಪತಿಯ ಪಾವನ್ನ | ಚರಣಾಬ್ಜ ರಸಮೀಂಟಿ ಮೊಲೆವಾಲನುಣ್ಣ || ೬ || ಹರಿಯಾರ್ಚನೆಯ ಭಕುತಿಯ ಪ್ರವೀಣ | ತರತರದಿ ಬರುವೆಡರನು ಒಮ್ಮೆ ಕಾಣ | ಹರಿಗೆ ದೇಹೇಂದ್ರಿಯನರ್ಪಿಸಿ ಪ್ರಾಣ | ಹೃತ್ಪುರದಲ್ಲಿ ಮಾಡಿದನು ತನ್ನ ತಾಣ | ಪರಸನ್ನ-ವೆಂಕಟ ಪತಿಯ ಪೂಜಾ ತ್ರಾಣ| ವರಿತವ ಕಾಯದೊಳಿದ್ದು ನಿರ್ಗುಣ || ೭ || ಹರಿಭಕ್ತಿಲ್ಯಷ್ಟಾಂಗ ಪುಟವಿಟ್ಟು ನಿಚ್ಚಾ | ಉರು ಪಾಪಾಟವಿಗೆ ಘಮ್ಮನೆ ಇಟ್ಟ ಕಿಚ್ಚಾ | ಸುರಲೋಕ ಮುಂತಾದ ಶಿರಿಗೆ ಅವ ಮೆಚ್ಚ | ನರರ ಸಂಪದವೆಲ್ಲಾ ಸ್ಥಿರವೆಂದು ನೆಚ್ಚಾ | ಪರಸನ್ನ ವೆಂಕಟನ ನಂಬಿದ ಹುಚ್ಚಾ | ನಿರಯದಾರಿಗೆ ಎಂದೂ ಬೆದರನು ಬೆಚ್ಚಾ || ೮ || ಹರಿಯ ದಾಸರ ದಾಸ ದಾಸತ್ವ ಪಡೆದಾ | ಹರಿ ನಂಬದವನೆದೆಮೆಟ್ಟಿ ತಾ ನಡೆದಾ | ಹರಿಯ ಬಂಟರ ಬಾಕುಳಿಯ[1] ವೃತ್ತಿ ಹಿಡಿದಾ | ಪರಸನ್ನ ವೆಂಕಟರಮಣನ ಎಡದಾ | ಚರಣ ನಿರ್ಜರ ತರುಛಾಯವವಿಡಿದಾ || ೯ || ಹರಿಯಲ್ಲಿ ಭಕುತಿಯ ಗೆಳೆತನವಿಟ್ಟಾ | ತರುಣಿ ಸ್ವಪ್ರಜ ಸಂಪದಗಳ ಸ್ನೇಹ ಬಿಟ್ಟಾ | ಕರಮುತ್ರಯಂಗಳೆಲ್ಲವ ಹಿಂದಕಿಟ್ಟಾ | ತಿರುಗಿ ಬರುವ ಊರ ಬಟ್ಟೆಯ ಬಿಟ್ಟಾ | ಪರಸನ್ನ ವೆಂಕಟನಲಿ ಚಿತ್ತವಿಟ್ಟಾ | ನರಸಂಹನೊಲಿಸಿ ಲಿಂಗಾಂಗವ ಸುಟ್ಟಾ || ೧೦ || ಹರಿಗೆ ತನ್ನಾತ್ಮ ನಿವೇದನದಿಂದಾ | ಉರಿ ಜಲ ಮಣ್ಣು ಬಯಲು ಗಾಳಿ ಹೊಂದಾ || ಸ್ವರೂಪನೆ ಹರಿಯಂಘ್ರಿಗರ್ಪಿಸಿ ನಿಂದಾ | ಹರುಷವನುಂಬ ಉನ್ನಾಹದಿಂದಾ | ಪರಸನ್ನ ವೆಂಕಟಪತಿ ಭಕ್ತಿಯಿಂದಾ | ಸುರ ಋಷಿ ನರರಿ-

---

೧. ಅತ್ಯಾಳಿ.

ಗೆಲ್ಲಾ ನಿಜಾನಂದಾ ॥ ೧೧ ॥ ಹರಿಕಥಾಶ್ರವಣ ಹರಿನಾಮಸಂಕೀರ್ತನೆ । ಹರಿಸ್ಮರಣೆ ಹರಿಪಾದ ಸರ್ವದಾ ಸೇವನೆ । ಹರಿಪೂಜೆ ತನು ಮನ ದಾಸ್ಯ ಸಖತ್ವ । ಹರಿಗಾತ್ಮಾರ್ಪಣೆ ಮುಕುತಿಯು ಪಥತ್ವ । ಪರಸನ್ನ ವೆಂಕಟ ಪರ-ಬೊಮ್ಮ ಸಿದ್ಧ । ಗುರು ಮತ ಶ್ರುತಿ ಸ್ಮೃತಿಯೊಳಿದೇ ಸುಪ್ರಸಿದ್ಧ ॥ ೧೨ ॥

೧೯೫

## ನೀತಿ

ಕಗ್ಗೊರಡೆಳೆಗಾಳಿಗೆ ಚಲಿಸುವದೇ ದು । ರಾಗ್ರಹಿ ಹರಿಚರಿತಾಮೃತ ನಂಬುವನೇ । ಕಗ್ಗಲ್ಲು ಬೆಳದಿಂಗಳಿಗೆ ದ್ರವಿಸುವದೇ । ಸ್ವರ್ಗಾಪವರ್ಗ ದುರ್ಜನಕೆ ಸೊಗಸುವದೇ । ಸುಜ್ಞಾನದ ಸಾಮ್ರಾಜ್ಯದ ಬಕುತಿ ವೈ । ರಾಗ್ಯದ ಭಾಗ್ಯವು ದಶಮತಿ ಶಾಸ್ತ್ರದ । ಅಗ್ಗಳರ್ಗೆ ಸವಿಸುಗ್ಗಿಯು ಭವಸ್ವರ್ಗ । ಲಗ್ಗಿಗಾ-ರುಂಟೆ ಪ್ರಸನ್ನ ವೆಂಕಟ ಕೃಷ್ಣಾ ॥ ೧ ॥ ಮಲಯ ಗಿರಿಯಲಿಪ್ಪ ಬೊಬ್ಬುಳಿ[೧] ಬಾವನ್ನ[೨] ।;ಬಳಿಯಿದ್ದೇನದು ಬಾವನ್ನಹುದೇ। ಕಲಿಮನದವ ವೇದ ವೇದಾಂತ ನೋದಲು । ಇಳಿಯಲ್ಯವನು ವೈಷ್ಣವರ ಜೆರೆವನೆ । ಜಲನಿಧಿ ಶಯನ ಪ್ರಸನ್ನ ವೆಂಕಟ ಕೃಷ್ಣ । ಅಲವಬೋಧನವರಿಗೊಲಿವನು ಕಾಣಿರೋ ॥ ೨ ॥ ಮೊಗ ರೂಪಕೆಲ್ಲ ಹೊಗೆಸುತ್ತಿ ಎಗೆಗಟ್ಟನೊಬ್ಬ । ಝುಗಳಾಢ್ವ ಘಟಪಟ ಬಾಯಿಬಡಕ ನೊಬ್ಬ। ನಿಗಮಾರ್ಥವನು ಕೆಡಿಸುವ ಖಳನೊಬ್ಬ ತ್ರಿ । ಜಗದೊಳಗುಂಡುಟ್ಟು ಬಾಯ್ಗರ್ವದೊಬ್ಬರ । ವಿಗಡ ವಾದೀಗಜ ಮೃಗರಾಜಾ ಗುರು ಮಧ್ವ । ಸುಗುಣಾಬ್ಧಿ ಪ್ರಸನ್ನ ವೆಂಕಟಕೃಷ್ಣನ್ನ ತೋರಿದನಾಗಿ ॥ ೩ ॥

## ಸುಳಾದಿಗಳು

೧೯೬

### ಉಪದೇಶದ ಸುಳಾದಿ

#### ಧ್ರುವ ತಾಳ

ಹರಿ ತನ್ನ ಏಕಾಂತಿಗಳಿಗೆ ಕೊಡ ವೈಭವವ । ಶಿರಿ ಸಂಪದದ ಸೌಖ್ಯದ ಲಂಪಟವ । ಹರಿ ತನ್ನೇಕಾಂತಿಗಳಿಗೆ ಕೊಡ ಅಖಿಳದ । ಅರಸುತನದ ಸೌಭಾ

---

೧. ಜಾಲೆಯ ಮರ. ೨. ಗಂಧದ ಮರ.

ಗ್ಯದ ಬಯಕೆಯ । ಹರಿ ತನ್ನ ಕರುಣಾಂಬುಧಿ ತನ್ನ ಶರಣಜ । ನರ ಭಾರಕ ನೆಂಬೊ ಬಲು ಬಿರುದು ರಕ್ಷಕನಾಗಿ । ಅರಿ ಭಯದ ಬೆದರಿಕೆ ಮನೋವ್ಯಥಾ ವ್ಯಸನವು । ಬರುವವೆಂದರಿದು ಶ್ರೀಪ್ರಸನ್ವೆಂಕಟ ಕೃಷ್ಣಾ ॥ ೧ ॥

**ಮಟ್ಟ ತಾಳ**

ಮರಿಯೆ ಹರಿಗಭಿಮುಖರ ಭಾಗ್ಯವೇ ಭಾಗ್ಯ । ಹರಿಗೆ ವಿಮುಖರ ಭಾಗ್ಯ ದೌರ್ಭಾಗ್ಯ । ಹರಿಪ್ರೀಯ ಜನರಾವೃತ್ತಿ ನಿವೃತ್ತಿ । ಹರಿ ಪರವಲ್ಲದ ಯಜ್ಞಾ-ವಜ್ಞಾ । ಹರಿ ಮುಖ್ಯಾನೆಂಬೊ ನಿಗಮಾ ಸುಗಮಾ । ಹರಿಯಾದರಿಸದ ಆಗಮಾ ದುರಾಗಮಾ । ಶಿರಿ ಪ್ರಸನ್ವೆಂಕಟ ಕೃಷ್ಣ ಜೀವರಿಗೆ । ಸರಿಯೆಂದವನು ಇಹಪರಕೆ ಬಾಹಿರನು ॥ ೨ ॥

**ತ್ರಿಪಟತಾಳ**

ಹರಿಯಂಘ್ರಿ ಮೂಲದಾಸತ್ವವ ಹೊಂದಿ । ಪರಮ ಮಂಗಳ ನಾಮ ಸ್ಮರಣೆಯನ್ನು ಬಿಡದೆ । ಇರಲೆನ್ನ ಮನವು ಇರಲೆನ್ನ ತನುವು । ನಿರುಪಾಧಿಕ ಪ್ರಿಯ ನಿರ್ಮಳ ಶ್ರುತಿಗೇಯ । ನಿರುತ ಪ್ರಸನ್ನವೆಂಕಟ ಸೇವಿಯಲಿರಲಿ ॥ ೩ ॥

೧೯೭

## ಮೂಲ ರಾಮದೇವರ ಮಹಿಮೆಯ ಸುಳಾದಿ

**ಧ್ರುವತಾಳ**

ರಾಮ ರಘುಕುಲ ಸಾರ್ವಭೌಮ ಪೂರಣಕಾಮಾ । ಜಿಮೂತಾ ಶ್ರೀ ಮೂಲರಾಮಾ ॥ ಕೋಮಲ ಶರೀರ । ಸೀತಾಮುಖಾಂಬುಜ ಭ್ರಮರ । ಪ್ರೇಮಸಾಗರ ಭಕ್ತಜನ ಮನೋಹರಾ । ಸಾಮಜಾರಾತಿಹರ । ಸಾಮಗಾ ನಾದರ ನಿಸ್ಸೀಮ ಗುಣಗಂಭೀರಾ ಏಕವೀರಾ । ಸ್ವಾಮಿ ಮಠದರಸಾ । ಮುನಿಸ್ತೋಮ ಮಾನಸಾಹಂಸಾ । ನೀ ಮನ್ನಿಸು ಪ್ರಸನ್ವೆಂಕಟಾದ್ರೀಶ ರಘುರಾಮಾ ॥ ೧ ॥

### ಮಟ್ಟತಾಳ

ಪಿಂತೆ ಸಮಿೂರಜನಾ ಸೇವೆಗೆ ಮೆಚ್ಚಿ । ಅತ್ಯಂತ ಪ್ರಸನ್ನನಾಗೆ ವನ ಶುಭಕರ । ಸಂತತಿಗಭಯವನಿತ್ತಪೆನೆಂದೀಶ । ನಿಂತಿಹೆ ಪ್ರಸನ್ವೆಂಕಟಪತಿ ರಾಮಾ । ಕಂತುಜನಕ ನಿತ್ಯಾನಂದನನೆ ನೀ । ನಂತವರಿಯೆ ನಿಗಮಾಗಮ ಕಳವೇ ॥ ೨ ॥

### ತ್ರಿಶ್ರುಟತಾಳ

ನಿರುತ ವೈಕುಂಠ ಮಂದಿರವಿದ್ದು ಪರ್ಣಕು । ಟಿರವಾಶ್ರೈಸುವಾ ಘನತೆ ಎತ್ತಾ ॥ ವರಪೀತಾಂಬರದಾ ಮೋಹವಾ ಬಿಟ್ಟು ವಲ್ಕಲಾ । ಧರಿಸಿ ಕಾನನದಿ ಸಂಚರಿಪುವೆತ್ತಾ ॥ ನರಲೀಲೆಗಿದು ಶ್ಲಾಘ್ಯವೆಂದು ತೋರಿದೆ ಜಗ । ಧೊರಿಯೆ ಪ್ರಸನ್ವೆಂಕಟಾದ್ರಿ ರಘುರಾಮಾ ॥ ೩ ॥

### ಅಟ್ಟತಾಳ

ಹರವರದಲಿ ಬಲು ಮತ್ತಾದ ರಜನೀ । ಚರವರ ಲಂಕೇಯಲಿ ಬಲಿದು ಗರ್ವದೀ । ಸುರವರರನುರೆ ಬಾಧಿಸಲವರನು । ಪೊರೆವರು ದಾರಯ್ಯ ನೀನಲ್ಲದೆ । ಸ್ಥಿರವರ ದಾಯಕ ಪ್ರಸನ್ವೆಂಕಟ ಪ್ರಭುವೆ । ಗಿರಿವರ ನಿಲಯ ಕೌಸಲ್ಯೆಯ ಕಂದಾ ॥ ೪ ॥

### ಆದಿ ತಾಳ

ಅಕಳಂಕ ಸುರವೋಹಾಂತಕ ನಿಶ್ಶಂಕ । ಮುಕುಟ ಕುಂಡಲ ಕೌಸ್ತುಭ ಕೇಯೂರ ವಲಯಾ । ಮುದ್ರಾಂಕಿತ ಕೋದಂಡ ಕಾರ್ಮುಕ ಪಾಣಿ । ಅಕಳಂಕ ಸುಖ ತೀರ್ಥ ವಂದಿತ ಪಾದಾ । ಕಮುದಿಪಗಧಿಸುತ ಮುಖ ಪಾಲಕ । ಪ್ರಸನ್ವೆಂಕಟಾಧಿಪ ಅಕಳಂಕ ॥ ೫ ॥

### ಜತೆ

ಅಂದು ನರಹರಿಯತಿಗೆ ಅಂದದಲ್ಲೊಲಿದಲ್ಲಿ । ಬಂದು ನೀ ನಿಂತೆ ನಿಜ-ರಮಣಿ ಯೊಡನೆ ॥ ಎಂದೆಂದು ಸತ್ಯಾಭಿನವ ತೀರ್ಥ ಗುರು । ಹೃದಯ ಮಂದಿರನೆ ಪ್ರಸನ್ವೆಂಕಟ ವರದಾ । ರಾಮಾ ॥ ೬ ॥

೧೯೮

## ಹರಿಯ ಮೇಲಿನ ಸುಳಾದಿ

### ಧ್ರುವ ತಾಳ

ಹರಿ ನಿನ್ನ ಕಥಾಮೃತ ವರುಷವು। ಚಿರ ಕಾಲದ ಪುಣ್ಯಾಂಕುರ ಗಳೊರ್ಧಿವು ॥ ಹರಿ ನಿನ್ನ ನಾಮ ರಸಾಯನ ಭವರೋಗ। ಪರಿ ಹರ ಕಾರಣ ವಲ್ಲದೌಷಧ ಉಂಟೆ। ಹರಿ ನಿನ್ನ ಧ್ಯಾನ ಧಾರಣ ಬಿಂಬಾ ದರುಶನ। ಕಾರಣ ವಲ್ಲದನ್ಯ ಸಾಧನ ಜೀವರಿಗುಂಟೆ। ಹರಿ ನೀ ವ್ಯಕುತನಾದರೆ ಪಾತ್ರನೆನಿಪೆನು। ಕರುಣಿಸೊ ಕರುಣಾಬ್ಧಿ ಪ್ರಸನ್ನ ವೆಂಕಟ ಕೃಷ್ಣಾ ॥ ೧ ॥

### ಮಟ್ಟ-ತಾಳ

ನಿನ್ನ ಸುಚರಿತೆ ಕೇಳಿ ಧನ್ಯಾರು ಒರೆದರು। ನಿನ್ನ ಕಾಣಲೋಸುಗಾರಣ್ಯವ ಸೇರಿದರು। ನಿನ್ನ ಮಹಿಮೆಯೆಂತೊ ನಿನ್ನ ಮೋಹವೆಂತೊ। ನಿನ್ನ ಬಿಡಲಾರೆ ಪ್ರಸನ್ನ ವೆಂಕಟಕೃಷ್ಣ ॥ ೨ ॥

### ತ್ರಿ ಪುಟ-ತಾಳ

ಪ್ರಕೃತಿಯಿಂ ಬದ್ಧ ನಾ। ಪ್ರಕೃತಿಯಾಳುವೆ ನೀನು। ಪುರುಷಾರಾಧೀನ ನಾನು। ಪುರುಷರ ಪ್ರಭು ನೀನು। ಸಕಲ ಸ್ವಾತಂತ್ರ ಸ। ದ್ವ್ಯಕುತರಾಧೀನನೇ। ನಿಖಿಳ ಸಂದೇಹ ಧ್ವಾಂತಽಧಿಕ ಪ್ರಸನ್ವೆಂಕಟೇಶ ॥ ೩ ॥

### ಅಟ್ಟ-ತಾಳ

ಶ್ರೀನಾಥ ನಿನ್ನ ಮರೆನೇನಾಗಿ ಎಂಭ। ತ್ತು ನಾಲ್ಕು ಲಕ್ಷ ಗರ್ಭದ ದುರ್ಗದಿ ಶಿಲ್ಕಿ। ಯೋನಿ ಯಂತ್ರದಿ ಕೆಟ್ಟು ನೊಂದೇ। ಹೀನ ವಿಷಯಭೋಗ ಸಾಕೆನ್ನಲೊಲ್ಲದೆ। ಆ ನಾರಿ ಸಾರೆ ಮನ ಮಾರಬಾಧೆಗೆ। ದೀನನಾಥ ಪಸನ್ನ ವೆಂಕಟ ಕೃಷ್ಣ ॥ ೪ ॥

ಆದಿ-ತಾಳ

ಹರಿ ಹರಿ ಹರಿ ಹರಿ ಹರಿ ಹರಿ । ಹರಿಯೆಂಬೆರಡಕ್ಕರವೆನ್ನ ನಾಲಗಿ-ಯೊಳಾದ್ಯಂತ । ತಿರುತಿರುಗೆನಿಸು ಶ್ರೀ ಹರಿಯಾನಂದದಿಂ । ತಿರುತಿರುಗಿ ಬರುವೆ ಅರುಹಂ ಮರದೆ । ಪರಸನ್ನ ವೆಂಕಟ ಪರಮ ದಯಾನಿಧೆ ॥ ೫ ॥

ಜತೆ

ನಾನಾ ಯುಗಯುಗದಲ್ಲಿ ಹೀಗೆ ಪ್ರಾಯಶ್ಚಿತ್ತ । ನೀನೆ ನೀನೆ ನೀನೆ ಪ್ರಸನ್ನ ವೆಂಕಟ ಕೃಷ್ಣ ॥ ೬ ॥

೧೯೯

## ಹೊಸತಾಗಿ ದೊರೆತ ಪದಗಳು

ರಾಗ—ಶಂಕರಾಭರಣ ತಾಳ—ಝಂಪಿ

ಹರಿಯನ್ನಬಾರದೆ ಜಿಂಹ್ವೆ ವಾರಂ ವಾರಂ ॥ ಪಲ್ಲ ॥ ಪರಗತಿ ಮಾರ್ಗವು ದುರಿತವನಾಗ್ನಿಯು । ಪರಿಪರಿ ಭವರೋಗಕೌಷಧವಾಗಿಹ ॥ ಅನು ಪಲ್ಲ ॥ ಉರಿವ ಕಾಳಕೂಟ ಕಂಠದಿ ಧಹಿಸಲು । ಹರಿನಾಮ ಹರನ ಹಲ್ಲಣ ಕಾಯ್ದಿತು। ಕರಿ ಉರಗದ ವಿಷ ಗಿರಿ ಶಸ್ತ್ರಭಯದಿಂದ । ಹರಿನಾಮ ಬಾಲಕನ ಕಾಯ್ದಿತು । ಶರಧಿಲಿ ನೆಕ್ಕರ ಚರಣವ ಬಿಗಿ ಕಟ್ಟಿ । ಹರಿನಾಮಾ ಕರಿಯನು ಕಾಯ್ದಿತು । ಸುರರುಷಿ ಮುಖದಿಂದ ಬರಲಾಗಿ ಹರಿನಾಮ । ನಿರಯ ನಿವಾಸರ ಕಾಯ್ದಿತು ॥ ೧ ॥ ಹಿರಿಯರಾ ನಿಕ್ಕರ ನುಡಿಯಿಂದಾಡವಿಲಿರೆ । ಹರಿನಾಮಾ ಧ್ರುವನನ್ನು ಕಾಯ್ದಿತು । ಕುರು ಕಂಟಕರು ಅಭಿಮಾನವ ಕೊಳುತಿರೆ । ಹರಿನಾಮ ಸತಿ ಮಾನ ಕಾಯ್ದಿತು । ಮರುಳೊಮ್ಮೆ ದುರ್ವಾಸ ದ್ರೌಪದಿ ಗುಣ ಬೇಡೆ । ಹರಿ-ನಾಮ ಇರುಳಿಲಿ ಕಾಯ್ದಿತು ॥ ಗುರುಪುತ್ರಾನುರಿ ಬಾಣಾ ಉರವಣಿಸಿ ಬರೆ । ಹರಿನಾಮ ಪಾಂಡವರ ಕಾಯ್ದಿತು ॥ ೨ ॥ ವರ ಬಲದಿಂದಲ್ಲಿ ಅಸುರಾರು ನೋಯಿಸಾಲು । ಹರಿನಾಮಾ ಸುರರನು ಕಾಯ್ದಿತು । ಚಿಂಪಾಪ ಭವಯಾತ್ರೆ ಘಟಿಸಾಲು ತುದಿಯಲಿ । ಹರಿನಾಮ ಭಟರನು ಕಾಯ್ದಿತು । ಶರಣರ ಮಹಿಮೆ ಯಂತಿರಲಿ ಇಹಬಿ ಕೊನೆ। ಮರಣಾದಿ ಹರಿ ನಾಮ ನನ್ನ ಕಾಯ್ದಿತು ॥

ಗುರು ಮಧ್ವವರದಾ ಪ್ರಸನ್ವೆಂಕಟೇಶಾ ಶ್ರೀ । ಹರಿ ನಾಮ ಗತಿ ಎನ್ನೀ ಕಾಯ್ವಿತು ॥ ೩ ॥

೨೦೦*

ರಾಗ— ಯಮುನ ತಾಳ— ಆದಿ

ಹೆಣಗಿದರಾಗದು ಒಣ ತರ್ಕದಲಿ । ದಣಿದರೆ ಕೂಡದು ಭಕುತಿ । ವನಜಾಕ್ಷನ ಕೃಪೆ ಮನಸಾಕ್ಷ್ನಾದರೆ। ತನ್ನಿಂತಾನಾಗುವದು ಮುಕುತಿ ॥ ಪಲ್ಲ ॥ ಸೂಕ್ಷ್ಮವು ತತ್ವದಿ ದಕ್ಷನೆ । ದಿಕ್ಷಿತನಾನಿಸದ್ದೇನು॥ ಅಕ್ಷರ ಬರದಿಹ ಕುಕ್ಷಿಯು ವೃಥ ಗುರು । ಶಿಕ್ಷಿಲ್ಲಿದ ಜನುಮೇನು ॥ ಬಿಕ್ಷುಕ ಧಾನ್ಯಾದ ಲಕ್ಷಿಯಲಿ ಪದು । ಮೂರ್ಕ್ಷನ ಹೊಗಳಿದರೇನು ॥ ಕುಕ್ಷಿಯ ಲಾಭವು ಅಕ್ಷಯು ತೋಷದ । ಮೋಕ್ಷೋಪಾಯವಿದೇನು ಬರಿದೆ ॥ ೧ ॥ ದ್ರುವ್ಯಾದಿ ವ್ರಯ ಹವ್ಯಾದಿ ಕ್ರಮು॥ ಅವ್ಯಯ ಜೀವ ಸ್ವಭಾವಾಖ್ಯಾ ॥ ಕಾವ್ಯ ರಚನೆ ಶಬ್ದ ವಾಕರಣದ । ಹವ್ಯಾ-ಸವು ಇಹ ಸೌಖ್ಯ ॥ ಅವ್ಯಾಕೃತನಾಮಾ ವ್ಯವ ಹರಿಲ್ಲದ್ಯ। ನವ್ಯ ಕಥಾ ಜನ ಸಖ್ಯಾ ॥ ದಿವ್ಯ ಮೂರುತಿ ವೇದವ್ಯಾಸಜ ಭವ । ಸೇವ್ಯನ ನಿಷ್ಠೆಯೆ ಮುಖ್ಯ ॥ ೨ ॥ ಕಡು ಆದರದೊಳು । ಕಡಲೊಡಿಯುನ ಪದ । ವಿಡಿಯದವನ ಶ್ರುತಿ ಶಾಸ್ತ್ರ ॥ ನಡು ಹೊಳೆ ದಾಟುತ ತಡೆಯುಲಿ ನಾವೆಯು । ಬಡುಮೇಲಾದಂತೆ ವ್ಯರ್ಥ ॥ ಧೃಡ ಪ್ರಸನ್ವೆಂಕಟ ಒಡಿಯುನಾಚ್ಛಿನ್ನ ದಯ । ಪಡೆದನು ಗುರು ಸಖ ತೀರ್ಥಾ ॥ ನುಡಿಗಳ ಮಾಲೆಯ । ತುಡುಗರಾ ತಮಸಕೆ ಬಿಡಿದಟ್ಟುವನು ಸಮರ್ಥಾ ॥ ೩ ॥

೧೯೧

## ಮಂಗಲಾಚರಣೆ

ರಾಗ—ಪಾಡಿ ತಾಳ—ಆದಿ

ಆದಿ ನಾಥಗೆ ಜಯ ಮಂಗಳಾ ॥ ಶ್ರೀಧರ ಮೂರ್ತಿಗೆ ಶುಭ-ಮಂಗಳಾ ॥ ಪಲ್ಲ ॥ ಧರಿಸಿ ನಾವೆಯ ಸತ್ಯವ್ರತನ ಪಾವನ ಮಾಡಿ ।

* ಪದಸಂಖ್ಯೆ ೧೬೯ ಆದೊಡನೆ ತಪ್ಪಿ ೧೮೦ ಎಂದು ಬಿದ್ದಿದೆ. ಆದ್ದರಿಂದ ಈ ಪದಸಂಖ್ಯೆಯನ್ನು ೧೭೦ ಎಂದು ಓದಿಕೊಂಡು, ಮುಂದೆ ೧೭೧–೧೭೨... ಈ ಪ್ರಕಾರ ಬರುವದನ್ನು ಗಮನಿಸಬೇಕು.

ಚರಿಸಿದೋ ಮಂದರ ಗಿರಿಯ ಪೊತ್ತು || ಧರೆಯ ನೆಗಹಿ ಬಂಗಾರಗಣ್ಣಿನವನ | ಹರಿದು ದೈತ್ಯಜಗೊಲಿದು ಬಂದವಗೆ || ೧ || ಸುರಪನಂತಸ್ತಾಪ ತರಿದು ಧರಿತ್ರಿಯಾ | ಸುರರಿಗೆ ಸಕಳ ಪದವಿಯನಿತ್ತು || ಶರಧಿಯ ದಾಟಿ ದಶಶಿರನ ತಲೆ ಸವರಿ | ತರುಗಾಯಿದ ಗೋಪೇರ ಅರಸನಿಗೆ || ೨ || ಅಂತರಾಳ ಪಟ್ಟಣಕಾಪಾಯವಸು ಮಾಡಿ | ಅಂತಕ ಯವನರಾದವರಿಗೆ || ಚಿಂತಿಪ ದಾಸರ ಚಿಂತಾಮಣಿಗೆ ಸಿರಿ | ಕಾಂತ ಪ್ರಸನ್ವೆಂಕಟದಾತನಿಗೆ || ೩ ||

೧೯೨

ರಾಗ— ವರಾಳಿ　　　　　　　　ತಾಳ—ಝಂಪಾ

ಜಯ ಜಯ ಜಯ ಮಂಗಳಂ | ಶ್ರೀ ರಂಗಗೆ || ಪಲ್ಲ || ಮಂಗಳ ಮಹಿಮ ತ್ರಿವೆಂಗಳ ಮೂರ್ತಿಗೆ | ಮಂಗಳವ್ವೆಯ ವಕ್ಷಾಂಗದೊಳಿಟ್ಟಗೆ ||೧|| ಮಂಗಳಾನಂತಾ ಗುಣಂಗಳ ಪೂರ್ಣಗೆ | ಹಿಂಗಾದೆ ಭಕ್ತರಾ ಸಂಗದಲ್ಲಿ-ಹಗೆ || ೨ || ಮಂಗಳ ಐದೆಲೆ | ಗಂಗಳ ತಲ್ಪಗೆ ರಂಗ ಪ್ರಸನ್ವೆಂಕಟಗೆ ತಜ್ಞನಿಗೆ || ೩ ||

೧೯೩

ರಾಗ—ಶಂಕರಾಭರಣ　　　　　　　　ತಾಳ—ಝಂಪಕ

ಜಯ ಭೋ, ಜಯ ಭೋ, ಜಯ ವೇಂಕಟೇಶ ಪ್ರಭೋ || ಜಯ ಕರ್ತಾ, ಭಯ ಹರ್ತಾ, ಭಯದಾಯಕ, ಮೂರ್ತೆ || ಪಲ್ಲ|| ಫಣಿಗಿರಿವರ ಫಣಮಂದಿರ, ಪ್ರಣತ ಮನೋಹರ | ಘನ ಸದ್ಗುಣಗಣಪೂರ್ಣ, ಘನ ಶಾಮಲವರ್ಣ || ಮನಮಾನಸ ಮುನಿತಾಪಸ, ಮನೋಮಾನಸ ಹಂಸ | ದನುಸುತ ಹರ, ಧನು ಸಂಹರ, ದಿನಮಣೀಶ ರುಚಿರ || ೧ || ವನಜಾಕ್ಷಾ ವನೀಜಾಂತಕ ವನಜಾಸನಜನಕ | ಕನಕಾಕ್ಷಹ ಕನಕಾಲಯ ಕನಕಸ್ತ್ರೀ ಪ್ರೀಯಾ | ವನಭ್ರಮಣಾವನಿರಮಣಾ ವಿನತಾತ್ಮಜ ಗಮನಾ | ಅನಿಮಿತ್ತಜ ಅನುಸೂಯಜ ಅನಿಮಿಷ ಇಂದ್ರನುಜಾ || ೨ || ಅರಿದರಧರ, ಅರಿಪರಿಹರ, ಅರುಣಾಂಬರಧರ | ಚಿರಮಣಿ ರುಚಿರಾಭರಣಸು ಚರಸುರತರು ವೀರ ||

ಸುರಪರಮಾಪ್ತನೇ ಸಾಸಿರ ಕ್ರೀಡಾಶ್ಚರ್ಯಾಗಾರಾ। ಕಲಿ ಕಲುಷರ ಕರುಣಾಕರ ಪ್ರಸನ್ವೆಂಕಟೇಶ್ವರ || ೩ ||

೧೯೪

ರಾಗ—ಭೈರವಿ ತಾಳ—ರೂಪ

ಜಯ ಮಂಗಳಂ ಮಹಾ ಶುಭಮಂಗಳಂ । ಮಂಗಳಂ ಮದನ ಜನಕಂಗೆ ನಿತ್ಯಾ || ಪಲ್ಲ || ಶಂಖಾಸುರನ ಶೀಳಿ ಶ್ರುತಿಯ ತಂದವನಿಗೆ। ಬಿಂಕದಿಂ ಮಂದರಕೆ ಬೆನ್ನಾಂತಗೆ ಪಂಕಜಾಸನಗೊಲಿದು ಪ್ರತ್ಯಕ್ಷನಾದವಗೆ । ಶಂಕೆಯನು ಬಿಡಿಸಿ ಶಿಶುವನ ಹೊರೆದಗೆ || ೧ || ವಿತರಣಕೆ ಬಂದು ಬಲಿ ವಿಭವನಪ-ಹರಿಸಿದಗೆ । ಪತಿತ ಕ್ಷತ್ರಿಯರ ಸಂಹರಿಸಿದವಗೆ । ಸತಿಯ ಕದ್ದವನ ದಶಶಿರ ಶತಖಂಡಿಸಿದಗೆ । ಪಿತ ಮಾತೆ ಬಂಧನವ ಪರಿಹರಕಗೆ || ೨ || ಮುಪ್ಪುರದ ನಾರಿಯರ ಮನವ ಗೆದ್ದವಗೆ । ತಪ್ಪದೆ ಕಲಿಬಲವ ತರಿದಾತಗೆ || ಸರ್ಪಗಿರಿ-ಯಲಿ ನಿಂತು ನಿತ್ಯ ಸುಖದಾತನಿಗೆ । ಶ್ರೀ ಪ್ರಸನ್ವೆಂಕಟೊಡೆಯನೆನಿಪಗೆ || ೩ ||

೧೯೫

ರಾಗ—ಭೈರವಿ ತಾಳ—ಆದಿ

ಜಯ ಜಯ, ಜಯ ಜಯ || ದಯಾನಿಧೆ ಭಯನಿವಾರಕ ಭಕ್ತ ನಿ । ಚಯ ನಿತ್ಯ ಸೇವ್ಯನೆ ಜಯ ಜಯ || ಪಲ್ಲ || ದ್ರುಹಿಣ ಸಮಿರ ಗರು । ಡಹಿ ನಾಥ ಮೃಡೇಂದ್ರ। ಸಹನುತಪದ ಸರೋರುಹ ನಿತ್ಯಾ ಜಯಾ || ೧ || ಮದನಜನಕ ಸಿಂಧು । ಸದನ ದಾನವಜಿತ | ಕದನ ಮಾನವ ಮೃಗ । ವದನ ಹರೆ ಜಯ || ೨ || ದಶಾಸನ ಹರಸುರ ಪೋಷಣ ನೀಲ ಸತತ । ಪ್ರಸ-ನ್ವೆಂಕಟ ಗಿರಿ । ವಾಸ ನಮೋ ತೇ ಜಯ || ೩ ||

೧೯೬

ರಾಗ—ಮಾಂಡ ತಾಳ—ಆದಿ

ನಿರಾಜನವನೆತ್ತಿರೋ ತಿಮ್ಮಯ್ಯಗೆ || ವಾರಿಜೋದ್ಭವೇರ ಕಾಮರ-ಯ್ಯಗೆ || ಪಲ್ಲ || ಆನಕಾದುಂದುಭಿ ದ್ವಾರದಿ ಬಂದ ಧೇನು ಕಾವರ ಪಳ್ಳಿಲಿ

ತಾ ನಿಂದ ‖ ನಾನಾ ಕೃತ್ರಿಮುಗೈದಾಳರಿಗೆ । ಪಾನಕೆ ಗೋರಸ ಅಪಹಾರಿಗೆ ‖ ೧ ‖ ಆವು ಕಾವ ದಾವಾಗ್ನಿಯಾ ನುಂಗಿ । ಗೋವಕ್ಕಳಾ ಸಖರ ಸುಸಂಗೀ ‖ ಪಾವನು ಕಾಲಿನಿಂದ ತುಳಿದಗೆ । ಭಾವಕಿಯರ ಭಾವಕೊಲಿದಾಗೆ ‖ ೨ ‖ ಕೋಪವಿಲ್ಲದನ ಕೂಡಿ ಹೋಗೀ ‖ ಪಾಪವೆಲ್ಲಳಿದು ಮಾವನನೀಗೀ ‖ ತಾಪವಾರಿಸಿದಾ ತಂದೆ ತಾಯಿಗೆ । ಭೂಪ ಉಗ್ರಸೇನನ ಆಶ್ರಯಗೆ ‖ ೩ ‖ ಶ್ರೀರುಕ್ಮಿಣೀ ಸತ್ಯಭಾಮೆಯರಾಳೀ । ನಾರಕಾಸುರನಾ ತಲೆಯಾಡಿ ಹೋಳೀ ‖ ಭೂರಿ ಕನ್ಯೇರಾ ಕೈವಿಡಿದಗೆ । ದ್ವಾರಕಾ ನಗರದರಸನಾದಗೆ ‖ ೪ ‖ ಕುಂತಿ ಪುತ್ರರಾ ಸುಖ ಬೆಳಿಸೀ । ಕಾಂತೆ ಪಾಂಚಾಲಿ ಲಜ್ಜಾ ಉಳಿಸೀ ‖ ಭ್ರಾಂತಾ ಪಾಪಿ ಕೌರವಾ ನಾಶಗೆ । ಕಾಂತಾ ಪ್ರಸನ್ವೆಂಕಟಾದ್ರೀಶಗೆ ‖ ೫ ‖

೧೯೭

**ರಾಗ—ಮಾರುಧನಿ** **ತಾಳ—ಆದಿ**

ಮಂಗಳ ಅಂಜನ ಗಿರಿ ಪತಿಗೆ ಶುಭ । ಮಂಗಳವೆನ್ನಿ ಸಿರಿಪತಿಗೆ ‖ ಪಲ್ಲ ‖ ಮಂಗಳ ಬಾಯೊಳು ಮೊತ್ತು ಕಟ್ಟಿದಗೆ । ಮಂಗಳಾವಯವ ಮುಟ್ಟಿದಗೆ ಮಂಗಳ ಕೋರೆಲಿ ಪ್ರಿಯಳಾ ಬೆಟ್ಟಿದಗೆ । ಮಂಗಳನಖದ್ಯುಸು ಕುಟ್ಟಿದಗೆ ‖ ೧ ‖ ಮಂಗಳೆಯೊತ್ತಿ ಬಿಂಕವ ಶಳಿದಗೆ । ಮಂಗಳ ಭೂಪರನಳಿದಗೆ । ಮಂಗಳಗೋಸುಗ ಖಳರ ಹನನಗೆ । ಮಂಗಳ ಅಂಗೇಯರಾಂಬರ ಕಳೆದಗೆ ‖ ೨ ‖ ಮಂಗಳಾಂಗಕೆ ಉಡಿಗೆಯನೊಲ್ಲದಗೆ । ಮಂಗಳ ಶಿಲ್ಕುವ ಸೊಲ್ಲದಗೆ । ಮಂಗಳ ಪ್ರಸನ್ವೆಂಕಟೇಶ ಬಲ್ಲಿದೆಗೆ । ಮಂಗಳಮಯ ಕೈವಲ್ಯದಗೆ ‖ ೩ ‖

೧೯೮

**ರಾಗ—ಬಿಹರಿ** **ತಾಳ—ಝಂಪಿ**

ಮಂಗಳಂ ಮಕರ ಕುಂಡಲ ಮಂಡಿತಾದವಗೆ । ಮಂಗಳಂ ಮಾರಪಿತ ಮಾರಮಣಗೆ ‖ ಮಂಗಳಂ ಮಿತ್ರಕೋಟಿ ಮಹಾಸಂಕಾಶಗೆ । ಮಂಗಳಂ ಪನ್ನಗಾಚಲ ನಿಲಯಗೆ ಜಯ । ಮಂಗಳಂ ಮತ್ತೆ ಶುಭ ಮಂಗಳಂ ‖ ಪಲ್ಲ ‖

ಕಣ್ಣು ನೋಡದಿ ಚಲುವ ಕಮಠ ರೂಪಾದವಗೆ । ಹೆಣ್ಣುಗಳ್ಳಹರ ಹಿರಣ್ಯಕ ಮರ್ದಗೆ ॥ ಚನ್ನವಟು ಭಾರ್ಗಾಂಧಚರಹರ ಗೋವ್ರಜಚರಗೆ । ಕನ್ನೆಯರ ವ್ರತಗೇಡಿ ಕಲಿಮಥನಗೆ ॥೧॥ ನೀರಚರ, ನಗಧರ, ಕನಕನೇತ್ರನೊರಸಿದಗೆ । ಕ್ರೂರ ವದನಾಂಕಿತ, ಕುಬಜ ವಿಪ್ರಗೆ ॥ ವೀರ ಕುನೃಪಾರಿ, ರಘು, ವಿಜಯ ಸಖನಾದವಗೆ । ಚಾರು ಮೋಹನ ಚಟುಲ ಹಯರೂಢಗೆ ॥ ೨ ॥ ಆಗ ಮೋದ್ಧರ, ಕಚ್ಛಪ, ಅವನಿಧರ, ಹರಿಮೊಗಗೆ । ತ್ಯಾಗ ಬೇಡಿದ ತಾಯಿ ತಲೆ ಗಡಿದಗೆ ॥ ಯಾಗ ಪಾಲಾಹಿ ಮದಧ್ವಂಸ ಯೋಗೇಶ ಬೋದ್ಧ । ನೀಗೆ ನಾನಾವತಾರಿ ಪ್ರಸನ್ನ ವೆಂಕಟಗೆ ॥ ೩ ॥

೧೯೯

**ರಾಗ—ಸಾಹಡಿ** **ತಾಳ—ಝಂಪಾ**

ಮಂಗಳ ಮಂದಿರಗೆ । ಮಂಗಳ ಮುರಾರಿಗೆ । ಮಂಗಳ ತಿಮ್ಮಯ್ಯಗೆ । ಜಯ ಮಂಗಳಾ ॥ ಪಲ್ಲ ॥ ನೀಲಘನಕಾಯಗೆ । ಶ್ರೀಲಕುಮಿ ಸಹಾಯಗೆ ॥ ವ್ಯಾಳನ ಶಾಯಿಗೆ । ಫಾಳ ನೇತ್ರ ಧ್ಯೇಯಗೆ ॥ ೧ ॥ ದೀನ ಪರಿ ಶುದ್ಧಂಗೆ । ದಾನವರ ನೊದ್ವಂಗೆ ॥ ಆನಂದಾನಿರುದ್ಧಂಗೆ । ಮಾನವ ಮೃಗೇಂದ್ರಗೆ ॥ ೨ ॥ ಶೇಷಗಿರಿ ವಾಸಗೆ । ದಾಸ ಭಯ ನಾಶಗೆ ॥ ತೋಷ ಪೂರ್ಣ ಹಾಸಗೆ । ಪ್ರಸನ್ವೇಂಕಟೇಶಗೆ ॥ ೩ ॥

೨೦೦

**ರಾಗ—ಆನಂದಭೈರವಿ** **ತಾಳ—ಅಟ್ಟ**

ಮಂಗಳ ಮಹಿಮಗೆ ನೀರಾಜನಯ। ನ್ನಂಗಳ ಬಹು ಸಸರಿಸಿ ಭೃಂಗಾಳ ಕಂಗಳೆಯರು ಸ್ಮಿತವದನಂಗಳೆಯರು ॥ ಸ್ಮಿತವದನಂಗಳೆಯರು ಶಿರಿ ತಿರು । ವೆಂಗಳಪತಿಗಾರುತಿಯ ಬೆಳಗಿರೆ ॥ ಪಲ್ಲ ॥ ಅಕ್ರಮದಲಿ ಶೃತಿಕದ್ದೊಯ್ದವ । ನಾಕ್ರಂದಿಸಿ ಸೀಳಿದ ಶುಭಮ । ಚ್ಛಾಕೃತಗೆ ಜಗತ್ತುಗಳ ಗರ್ಭಿತಗೆ ॥ ಜಗತ್ತು ಗಳ ಗರ್ಭಿತಗೆ ವ್ಯಾಕೃತ ಗಾರುತಿಯಾ ॥ ೧ ॥ ಇಂದರನೈಶ್ವರ್ಯವು ಮಕರದ ಘಾಗಿರೇ ಗಿರಿಭೃತ ಕಂಧರಗೇ । ಕಚ್ಛಪ ಸಂಹರಗೇ । ಕರುಣಾ ಸುಂದರಗಾ ರುತೀಯಾ ॥ ೨ ॥ ಪೊಂಗಣ್ಣದ ದಿತಿಜನು ಕ್ಷಿತಿಯಾ । ಹಿಂಗದೆ ಒಯ್ದೋ

ಡಲು ಕೋಪದಿ। ಭಂಗಿತಗೆ ವಸುಮತಿ ಸಂಗಿತಗೆ ॥ ವಸುಮತಿ ಸಂಗಿತಗೆ ದಿವಿಜರ ಭಂಗಿತಗಾರುತಿಯಾ ॥ ೩ ॥ ದಾನವಗಂಜದೆ ಶಿಶುವರ ಹರಿ। ನೀನೆ ಗತಿಯೆನೆ ಕಾಯ್ವ ಸುಜಾಣನಿಗೆ। ನಿಜ ಜನ ಸದ್ಭಕ್ತರ ಪ್ರಾಣನಿಗೆ ॥ ಸದ್ಭಕ್ತರ ಪ್ರಾಣನಿಗೆ ನರ ಪಂಚಾನನಗಾರುತಿಯಾ ॥ ೪ ॥ ಧರ್ಮದಿ ಕೊಬ್ಬಿದ ಬಲಿರಾಜನ ವರ್ಮದಿ ಜಡಿದ ವಿಚಿತ್ರಾ। ಕರ್ಮನಿಗೆ ಧೃತಮೃಗ ಚರ್ಮನಿಗೆ। ಧೃತಮೃಗ ಚರ್ಮನಿಗೆ ಅಣು-ವಟು ಕರ್ಮನಿಗಾರುತಿಯಾ ॥ ೫ ॥ ವೀರ ಕ್ಷತ್ರಿಯರ ಕುಲ ಸಂ। ಹಾರ ರೇಣುಕ ಕಂಠ ವಿದಾರ। ಭೂಸುರರಿಗೆ ವಿತರಣ ಶೂರಗೆ। ಭೂಸುರರಿಗೆ ವಿತರಣ ಶೂರ ಕುಠಾರಿಗಾರುತಿಯಾ ॥ ೬ ॥ ಮುನಿ ಮಖ ಪಾಲಕ ತ್ರ್ಯಂಬಕ। ಧನುಹರ ಸೀತಾವರ ದಶಮುಖ। ಹನನಪಗೆ ಮತ್ತವನನುಜಪಗೆ ॥ ಮತ್ತವನನುಜಪಗೆ ಅಂಜನಾತನುಜಪಗಾರುತಿಯ ॥ ೭ ॥ ಪೊಂಗೊಳಲನೂದುತ ಗೋಜಗಂಗಳೆಯರು ಮೋಹಿಪ ತಾವರೆ। ಗಂಗಳಗೇ ಸುಖದಾತ ರಂಗನಿಗೇ ॥ ಸುಖದಾತ ರಂಗಗೆ ಪಾಂಡವ ಸಂಗನಿಗಾರುತಿಯಾ ॥ ೮ ॥ ನೀಚರ ಬಲವಳಿಯಲು ಸತ್ವರ। ಖೇಚರ ನಾರಿಯರ ವ್ರತ ಹೃತ। ಆಚರಗೆ ಜಿತಬೌದ್ಧಾಚಾರಗೆ ॥ ಜಿತಬೌದ್ಧಾಚಾರಗೆ ನಿಗಮವಿಗೋಚರಗಾರುತಿಯಾ ॥ ೯ ॥ ಸಂಕರ ಕಲಿಯಂ ಮಥಿಸಲು ತಾ। ಬಿಂಕದಿ ಹಯವೇರಿದ ಸದ್ಧ। ಮರ್ಮಾಂಕುರಗೇ ವರ್ಧಿಪ ಸದ್ಗುಣ ಕಿಂಕರಗೇ ॥ ಸದ್ಗುಣಕಿಂಕರಗೆ ಪ್ರಸನ್ವೇಂಕಟರಾಯಗಾರುತಿಯಾ ॥ ೧೦ ॥

೨೦೭

**ರಾಗ—ಶಂಕರಾಭರಣ** **ತಾಳ—ಆದಿ**

ಲಾಲಿ ಮುಕುಂದ, ಲಾಲಿ ಗೋವಿಂದ। ಲಾಲೀ ಜೋಯಾ ಲಾಲೀ ॥ ಲಾಲಿ ಮೂರ್ತೈದಾಲಿಪ್ಪೆ। ಲಾಲಿಯರ ಪ್ರಭು ಲಾಲಿ ॥ ಪಲ್ಲ ॥ ಜಗ ಜಗುಳಿಸಿ ವಟಪತ್ರದಿ ಮಲಗಿದೆ। ಲಾಲಿ ಜೋಯಾ ಲಾಲಿ ॥ ಮಗುವಾಗಿ ವ್ರಜದೊಳು ತೊಟ್ಟಿಲೊಳೊಪ್ಪೀದೆ। ಲಾಲಿ ಜೋಯಾ ಲಾಲಿ ॥ ೧ ॥ ಸ್ವಗತ ಭೇದವರ್ಜ್ಯ ಪರಮಾತ್ಮ ಪರಬ್ರಹ್ಮ। ಲಾಲಿ ಜೋಯಾ ಲಾಲಿ ॥ ಜಗದ ಜೀವರ ಬಿಂಬಾ, ಮೂರ್ತಿ ತನಂತಾನೆ। ಲಾಲಿ ಜೋಯ್ಯಾ ಲಾಲಿ ॥ ೨ ॥ ಪಯೋನಿಧಿವಾಸ

ಪರೇಶ ಪರಿಪೂರ್ಣ । ಲಾಲಿ ವೈಯಾ ಲಾಲಿ ॥ ಶ್ರೀಯರಸ ವೈಕುಂಠ ವಲ್ಲಭ ಶ್ರೀಕೃಷ್ಣಾ । ಲಾಲಿ ವೈಯ್ಯಾ ಲಾಲಿ ॥ ೩ ॥ ಧರೆಯ ಪಾವನ ಮಾಡೆ, ಪಾಂಡವರಿಗಾಗಿ ಬಂದೆ । ಲಾಲಿ ವೈಯಾ ಲಾಲಿ ॥ ಸುರರ ಪುಣ್ಯದ ಬಳ್ಳಿ ಫಲಿಸಲಿಕ್ಕುದಿಸಿದೆ । ಲಾಲಿ ವೈಯಾ ಲಾಲಿ ॥ ೪ ॥ ಅಜಮೀಳ ಗಜ ಧ್ರುವ ಅಂಬರೀಷ ಪಾಲಾ । ಲಾಲಿ ವೈಯಾ ಲಾಲಿ ॥ ಸುಜೀವಿ ಪ್ರಲ್ಹಾದನ ಸಲಹೀದಾ ನರಹರಿ । ಲಾಲಿ ವೈಯಾ ಲಾಲಿ ॥ ೫ ॥ ಅಸಮ ಬಾಲಕ ಅವ್ಯಾಕೃತಾಂಗನೆ । ಲಾಲಿ ವೈಯಾ ಲಾಲಿ ॥ ವಿಷಮ ವಿದೂರ ಅಗಣಿತ ಸುಗಣಾರ್ಣವ । ಲಾಲಿ ವೈಯಾ ಲಾಲಿ ॥ ೬ ॥ ಸ್ಮೃತಿ ಗಿರಿಧರ ಶಿಶುವೃಗ ಜ್ಯೈಲಾಧರ । ಲಾಲಿ ವೈಯಾ ಲಾಲಿ ॥ ಕೃತ ಕೃಷ್ಣೆ ಧರ್ಮಪಾಲ ಪ್ರಸನ್ವೆಂಕ-ಟೇಶಾ । ಲಾಲಿ ವೈಯಾ ಲಾಲಿ ॥ ೭ ॥

## ೨೦೨

**ರಾಗ—ತೆಲಗ ಕಾಂಬೋದಿ** **ತಾಳ—ಎಕ್ಕ**

ಶ್ರೀಪತಿ ಪರಾಕು ಸ್ವಾಮಿ ಮ । ಹೀಪತಿ ಪರಾಕು ॥ ಪಲ್ಲ ॥ ಅಂಜನ ಗಿರಿ ತಟನಿಲಯ ಪರಾಕು । ಕಂಜನಯನ ಖಳ ಪ್ರಳಯ ಪರಾಕು । ಅಂಜಿನ ತನಯ ಸು ಸೇವ್ಯ ಪರಾಕು । ಮಂಜುಳ ಗಾತ್ರ ಮುಕುಂದ ಪರಾಕು ॥ ೧ ॥ ಕನಕೋದರನ ಮಡದನೆ ಪರಾಕು । ಸನಕಾದಿಕ ಋಷಿ ಪ್ರಿಯ ಪರಾಕು ॥ ಮಣಿಖಚಿತಾಭರಣ ತನು ಪರಾಕು । ವಿನಿರ್ಜಿತ ಮಾಯ ಕೋಟಿ ಪರಾಕು ॥ ೨ ॥ ಅನುಸೂಯಾತನು ರತ್ನ ಪರಾಕು । ಅನಪೇಕ್ಷಿತ ನಿರ್ಯತ್ನ ಪರಾಕು ॥ ಮನು ಕನ್ಯಾತ್ಮಜ ಕಪಿಲ ಪರಾಕು । ಚಿನುಮಯ ಚಿದ್ಗುಣ ವಿಪುಲ ಪರಾಕು ॥ ೩ ॥ ಗುಹ್ಯಾ ತ್ಗುಹ್ಯ ಸ್ವರೂಪ ಪರಾಕು । ಅಸಹ್ಯ ನಿರ್ಲೇಪ ಸುರೇಶ ಪರಾಕು ॥ ಸಿಂಹನರ ರೂಪ ಹರಿಯೇ ಪರಾಕು । ದಹ್ಯದ ನುಜ ಕುಲವೈರಿ ಪರಾಕು ॥ ೪ ॥ ಭಕ್ತಾಭೀಷ್ಟ ಪ್ರದಾತ ಪರಾಕು । ಮುಕ್ತಾ ಮುಕ್ತರಿಂ ಸೇವ್ಯ ಪರಾಕು ॥ ನಕ್ತಚರ ಕುಲನಾಶ ಪರಾಕು । ಭೋಕ್ತೃ ಪ್ರಸನ್ವೆಂಕಟೇಶ ಪರಾಕು ॥ ೫ ॥

೨೦೩

ರಾಗ—ಭೈರವಿ ತಾಳ—ಮಟ್ಟ

ಶ್ರೀ ಮಂಗಳ ದೇವಗೆ ಜಯ ಜಯ। ಶ್ರೀ ಮಾದುರ್ಗಾ ದೇವಗೆ ಜಯ। ಸ್ವಾಮಿಗೆ ಜಯ ಸ್ವಾಮಿಣಿಗೆ ಜಯ ಜಯವೆಂದು॥ ಜಯವೆಂದ್ಯ ಪಾಡಿ ಜಾನಕಿ। ರಾಮಗಾರುತಿಯಾ ಬೆಳಗಿರೆ ॥ಪಲ್ಲ॥ ಪದುಮಿನಿಯರು ಪತಿವ್ರತಾಮಣಿಯರು। ವಿಧು ಬಿಂಬದ ಮುಖಿಯರು ಸಖಿಯರು। ಪದುಮ ರಾಗದ ಹೇಮ ಹರಿವಾಣದಲಿ॥ ಹರಿವಾಣದಿ ಹರಿಮಣಿ ದೀಪದ, ಕದಡಿ-ನಾರುತಿಯಾ ॥೧॥ ಕುಂಡಲ ಮುಕುಟಾಂಕಿತ ಸನ್ಮುಖ। ಮಂಡಲ ಸೂಭಾವು ತೃತೆ। ಗಂಡದ ಪುಂಡರೀಕಾಭಾನಯನದ॥ ನಯನದ ಘನ ಶಾಮಲವರ ಕೋ। ದಂಡಗಾರುತಿಯಾ ॥೨॥ ವಿಲಸ್ಥಿತ ಮೃದು ಕೋಶದ ಸಾಶದ। ಸುಲಲಿತ ಸ್ಮಿತ ಹಾಸದ ನಾಸದ। ಸುಲಪಲ್ಲಿನ ಮಾಟ ದಯಾ ನೋಟದ॥ ದಯಾ ನೋಟದ ಮುನಿ ಹೃತ್ಪೀಠದ, ನಿಲಯಗಾರುತಿಯಾ ॥೩॥ ಇಂದಿರೆ ಸೀತಾರ್ಪಿತ ಮಾಲಾ। ಕಂಧರ ಭುವನಾಳಿಗೆ ಪ್ರತಿ। ಸುಂದರ ಸದ್ಗುಣ ಸಾಂದ್ರೋಪೇಂದ್ರಾರ್ಯೇಂದ್ರಾ॥ ಆರ್ಯೇಂದ್ರಾ ಲಕ್ಷ್ಮಣಾಗ್ರಜ ರಾಮಚಂದ್ರಗಾರುತಿಯ ॥೪॥ ಅಂಗದಮೇಲಂಗುಲಿ ಮುದ್ರಿಕೆ। ರಂಗು ಮುತ್ತಿನ ಮಾಣಿಕದ ಸರ। ಬಂಗಾರದ ವ್ಯಾಲೆ ವೈಜಯಂತೀ॥ ವೈಜಯಂತಿ ಪದಕವು ತುಲಸೀ, ಸಿಂಗರಗಾರುತಿಯ ॥೫॥ ಕುಂಕುಮ ಚಂದನವು ಶ್ರೀ ವ। ತ್ಸಾಂಕಿತ ಶುಭ ವಕ್ಷದಿ ತ್ರಿವ। ಳಿಂಕೋದರ ನಡುವೆ ವಡ್ಯಾಣ ಪೊಂಬಟ್ಟೆಯ॥ ಪೊಂಬಟ್ಟೆಯ ಬಿರುದಿನ ಜಂಕಕ್ಷ್ನಿ ನಿಃಶಂಕಗಾರುತಿಯ॥೬॥ಉಲಿವಂದುಗಿ ಗಾಲಿನ ಮೇಲಿನ। ಕಳ ಧೌತದ ಇತ್ತರ ದುತ್ತರಿ। ಥಳಥಳಿಪ ಬಾಲರವಿ ಕೋಟಿಗಳಾ॥ ಕೋಟಿಗಳ್ ಗೆಲುವ ರಘುಕುಲತಿಲಕಗಾರುತಿಯ ॥೭॥ ಖುಷಿ ಮುಖವನು ಈಕ್ಷಿಸಿ ರಕ್ಷಿಸಿ। ವಿಷಮಾಚರಿ ರಾಕ್ಷಸಿ ಶಿಕ್ಷಿಸಿ। ವಿಷಕಂಠನ ಧನುವಾ ಮುರಿ ಹೊಯಿದು॥ ಮುರಿಹೊಯಿದು ವೈದೇಹಿಗೆ ಘನ, ತುಷಿಸಿದಗಾರುತಿಯ ॥೮॥ ಖರ ದೂಷಣ ಭೀಷಣ ಸುರಮುನಿಯರ। ಸುರಮುನಿಯರ ಘೋಷಣ ಈಶನ ಹನುಮನ। ತ್ವರತೋಷಣ ಭೂಷಣ ಭೀಷಣ ವಾಲಿ ಬಲಿ ಶೋಷಣ॥ ಬಲಿ ಶೋಷಣ ಸೀತಾನ್ವೇಷಣ ಹರಿವರದಗಾರುತಿಯಾ ॥೯॥ ನಿಶ ಚರರ ದಾಹಕ ದೇಹಿ। ದಶಕಂಠಾವರಜ ವರದ ವಾ। ರ್ಧಿಶನುಚರ ಸುರಮೋಹರ

ಬಂಧನ ಪರಿಹಾರಕಾ | ಪರಿಹಾರಕ ದಶಶಿರ ಮಾರಕ, ದಾಶರಥಿಗಾರುತಿಯಾ || ೧೦ || ಹನುಮಂತನ ಕಂಠಸನ್ಮಣಿಗೆ ಪಣಿ ಗಣ್ಣಿನ ಶ್ರೀ ಜಪಮಣಿಗೆ, ನೆನೆವರ ಚಿಂತಾ । ಮಣಿ ಶೀಲಾ ಶಿರೋಮಣಿಗೆ || ಶಿರೋಮಣಿಗೆ ಪ್ರಸನ್ನ ವೆಂಕಟ ವನಜೋದ್ಭವಪಿತಗಾರುತಿಯ ಬೆಳಗಿರೆ || ೧೧ ||

೨೦೪

ರಾಗ—ತೋಡಿ ತಾಳ—ಆದಿ

ಶರಣು ಶುಭಾಮಲ ಕಾಯ, ಋಜುಗಣಾ । ಭರಣಾನಂದ ಮುನಿ ರಾಯಾ || ಹರಿಗುಣಗಣ ವಾರಿಧಿ ಮಗ್ನನೆ ಜಯ । ಪರಮ ಪದಜ್ಞನೆ ಜಯತು ಸದಾ ಜಯ || ಪಲ್ಲ || ಶುಕ್ಲರುಧಿರ ನಿರ್ಲಿಪ್ತ ಪರತತ್ವ। ಕ್ಲಿಪ್ತನೆ ತ್ರಿಜಗವ್ಯಾಪ್ತ || ಅಕ್ಲೇಶಾನ್ವಿತ ಮಾಯಮನಹರ । ಅಜ್ಞ ಜನೋದ್ಧರ, ಜಯತು ಸದಾಜಯ || ೧ || ಶಲ್ಯರಾಜನ ಭಟಹಾರಿ ಮಹಾವಾ । ತ್ಸಲ್ಯಾಂಕಿತ ಸುಖಕಾರೀ || ಬಾಲ್ಯತನದಿ ಜಗದ್ಗುರುವೆನಿಸಿದೆ ಕೈ । ವಲ್ಯ ದಾಯಕ ಪ್ರಭು, ಜಯತು ಸದಾ ಜಯಾ || ೨ || ಸೂತ್ರಾರ್ಥದ ಧೀ ಮಾತ್ರ ದೇಹಿ ವಿ । ಧಾತ್ಯ ಜನಕ ಪದ ಪ್ರೇಮಪಾತ್ರ || ಪೌತ್ರ ಪ್ರಸನ್ನವೆಂಕಟಪತಿ ಪೂರ್ಣ । ವೇತೃ ನಂಬಿದೆ ಜಯತು ಸದಾ ಜಯ || ೩ ||

(ಈ ಕೆಳಗಿನ ನಾಲ್ಕು ಪದಗಳು ಅಷ್ಟೊಂದು ಸರಿಯಾಗಿ ಕಾಣದ್ದರಿಂದ ಅವುಗಳನ್ನು ಬೇಕೆಂದು ಕಡೆಗೆ ಕೊಟ್ಟಿದ್ದಾಗಿದೆ.)

೨೦೫

ರಾಗ—ಬಹಿರಿ ತಾಳ—ಆದಿ

ಜಯ ಮಂಗಳಂ ಮಹಾ ಶುಭ ಮಂಗಳಂ । ಮಂಗಳಂ ಮಧುಹರಗೆ ಮಾವರಗೆ || ಪಲ್ಲ || ಶ್ರುತಿಹೃತ ವಿಹೃತನಾದಗೆ ಮಂಗಳ । ಕ್ಷತಿಭೃತ ವಿಹೃತ-ನಾದಗೆ ಮಂಗಳ || ಧೃತಿಜಿತ ವಿಜಿತ ಕುಪಿತಗೆ ಮಂಗಳ । ವಿತ್ತರಣಾರತಗೆ ಪತಿತನು ಕ್ಷತಕೃತಿಗೆ ಜಯ ಮಂಗಳ || ೧ || ಕೃತಕ್ಷತಹಿಸತಿನುತಗೆ ಮಂಗಳ | ಪತಿವ್ರತ ಮೋಹಿತ ತುರಗಾಯುತ ವ್ಯಾಕೃತಗೆ ಮಂಗಳ । ತತು-ವವೃತ ಸತ್ಯವ್ರತಗೆ ಮಂಗಳ | ಮಥನಾವೃತಾದಿತಿಜಾತಗೆ ಜಯ ಮಂಗಳ

|| ೨ || ಕಥಾಮೃತ ಸುಮತಿಗೆ ಮಂಗಳ। ಕೃಪಾಮೃತ ದೈತ್ಯಜಗೆ ಜಯ ಮಂಗಳ || ೩ || ಭ್ರಾತ ಪಿತ ಸ್ತ್ರೀ ಸತಿವ್ರಾತಕೆ। ಭೂತ ಪತಿಗೆ ಜಾತ ಧರ್ಮಕೆ। ಹಿತಾಮೃತ್ತಿತಾಮೃತೋಪೇತಗೆ ಮಂಗಳ| ಮೂರ್ತಿಮಲನಿಗೆ, ಅನಿಮಿಷಾ ಮಾನಿಗೆ ಜಯ ಮಂಗಳ || ೪ || ಕನಕ ಕನಕಾಕ್ಷ ಕಶ್ಯಪು। ವಿನ ನಿಘಘ್ನ ಅಕ್ಷತನುಗೆ ಜನನಿ ಜಘ್ನಗೆ ಮಂಗಳ। ಆನನ-ದಶದಾನವ ಮಾನುನಿ ಹನನಶೀಲ| ಮೋನಾನ್ವಿತಗೆ। ಜ್ಞಾನಜನೇಶ ಪ್ರಸನ್ವೆಂಕಟ ಅನಾಥ ನಾಥಗೆ ಜಯ ಮಂಗಳ || ೫ ||

೨೦೬

ರಾಗ—ಬಹಳಿ ತಾಳ—ಆದಿ

ಸುಲಭವಲ್ಲಾ ಹರಿಭಕುತಿ ಗುರುಕೃಪೆ ಇಲ್ಲದಿಲ್ಲಾ || ಪಲ್ಲ || ಸಿದ್ಧಿ ಸೊಲ್ಲುವ-ಗುರುಗಾಳುಂಟು ಧರಿಯೊಳಲ್ಲಿಗಲ್ಲಿ। ಅವರೆಲ್ಲಾ ಹಿತಕಾರಿಗಳೆಂದೀ-ಗಲ್ಲಾ ಸಲ್ಲಾ। ಕೈವಲ್ಯದ ಮಾರ್ಗವ ಬಲ್ಲಾ। ಬಲ್ಲಿದ ಭಾರತಿನಲ್ಲಾಗೆ ಸಲ್ಲಾಲಿ ಜನ್ಮಾಂತದಲ್ಲಿದಿರಿಲ್ಲಾ || ೧ || ಭವಸಾಗರಾ ವೈರಾಗ್ಯದಾ| ನಾವೆಲಿ ನೀಗಿ ಸಾಗೀ ಜ್ಞಾನಾಗರದಾಗಮವಾ ಕೇಳಿ || ವೇಗಾದೀಗಾ ನಿರಿ-ಯಾಗಾರಾ ತಪ್ಪಿಸದೆ ಶ್ರೀರಂಗ ಬ್ಯಾಗೊದಗಿ। ಸೂಜ್ಞನಾಗಿರದೆವಗೆ ವ್ಯಾಗೆ ಲೋಗರ ರೋಗರಾಕಾಗೀ ರಹಿತ ಧರ್ಮರಾಗೀರೆ ತಾಗುದು ರೋಗಾ || ೨ || ನಾ ನನ್ನದು ಸಂಪಾದೆಂಬಾಭಿಮಾನ ನಿನ್ನ ಚಿನ್ನ। ನೀ ನಿನ್ನದು ಕೃಷ್ಣನೆಂಬಾ ಮತಿವಂತನೆ ಧನ್ಯಾ| ಬಹುದು ಪುಣ್ಯಶ್ಲೋಕನೆ ಭವವಾಯಿತನ್ಯೊನ್ಯಾ ನನ। ಗಿನ್ಯಾತರ ನೆಚ್ಚಿಕೆಣ್ಣಾ ಪ್ರಸನ್ವೆಂಕಟ ರನ್ನಾನ ಪುಣ್ಯದ್ವಾರನ್ನುತ್ತಾ ಸಣ್ಣಾ ಮರಿಗನ್ಯದೇನಣ್ಣಾ || ೩ ||

೨೦೭

ರಾಗ—ಕನಕ ಕಾಂಬೋದಿ ತಾಳ—ಅಟ್ಟ

ಶೇಷಾದ್ರಿ ತಟವಾಸ ಸುರೇಶ ಕಾಯೋ। ನಿನ್ನ ದಾಸಾನುದಾಸ ನಾ ತಾ। ರಿಸೋ ಶೇಷಾದ್ರಿ ತಟವಾಸ ಸುರೇಶ ಕಾಯೋ || ಪಲ್ಲ || ಈ ಬೆಂದ ಭವಾಂಧಕಾರೆಂದಾಹದಿಂದೆ ನಾ || ಮಂದ ಕಂದ ನೊಂದೆನೋ ತಂದೆ। ಹೊಂದಿಸು ಗತಿ ಶೇಷಾದ್ರಿತಟವಾಸಾ || ೧ || ಎನ್ನೊಡೆಯಾ ಕೈ ವಿಡಿಯೊ। ವೈದಡಹೋ ಪು || ತ್ರುಡಿಗಡಿಗೆಡರನು ಬಡಿಯೋ ಮೃಡನುತ || ಅಡಿಯಲ್ಲಿಡು

ಶೇಷಾದ್ರಿತಟವಾಸ || ೨ || ಶ್ರೀ ನಲ್ಲಾ ನೀನಲ್ಲದಾರಿಲ್ಲಾಶ್ರಯಿಲ್ಲಯ್ಯ || ಬಲ್ಲಾವಿಲ್ಲೆನಗೆಲ್ಲ ಪ್ರಸನ್ವೇಂಕಟವಲ್ಲಭ ಶೇಷಾದ್ರಿತಟವಾಸಾ || ೩ ||

೨೮೮

**ರಾಗ—ಘಂಟಾರವ** **ತಾಳ—ಆದಿ**

ನಂದ ವ್ರಜದ ಪೂರ್ವ ಪುಣ್ಯವೇನೊ । ನಂದಾನ ಕಿಶೋರನಾನಂದ-ವೇನೋ || ಪಲ್ಲ || ಧನ್ಯ ಧನ್ಯ ನಂದ ಗೋಕುಲಾ || ಅನುಪಲ್ಲ || ಗೋವಳೆಯರ ವ್ಯಾಳದಲ್ಲಿ ನಿಂತನಿವ ರಂಗಾ । ಕೋಹೋ ಕೋಹೋ ಹವಳಿ ಹಂಡ ಕಾಳಿ ಬಾ । ಕೋಹೋ ಕೋಹೋ ಧವಳಿ ಚಿಂಚಿ ಕಪಿಲೆ ಬಾ । ಕೋಹೋ ಕೋಹೋ ಗೌರೀಶ ಮೇಲಿ ನೀಲಿ ಬಾ ಎಂದು ಕರೆವ | ವಿವರೀಸಿ ಕರದು ತೃಣದ ಕವಳನೀಡೆ ಬಾ । ಅವಕಿನ್ನಾವ ಸಂಚಿತೋ ಪಾವನೆಂತೋ ಪುಲ್ಲಿನಾ ಧ್ಯನ ಧನ್ಯ ಗೋಕುಲಾ || ೧ || ಅಮ್ಮ ಯಶೋದೆ ಕಟ್ಟಿದ್ದು ನಿರ್ಮಳ ಕಲ್ಲಿಯು ಬುತ್ತಿ । ಡೋಹಕ್ಕಡೊ ತಮ್ಮ ಬನ್ನಿರಣ್ಣಾ ಬನ್ನಿ । ಡೋಹಕ್ಕಡೊ ನಯಬುತ್ತಿ ನಯ ಬುತ್ತಿ । ಡೋಹಕ್ಕಡೋ ನವ್ಮ ನಿಮ್ಮುಪ್ಪಿನಕಾಯಿ ಡೋಹಕ್ಕಾಡಿ ತಿನ್ನಿ । ಖುಮ್ಮಗಿಹುದೆಂದು ಕೊಡದಲೆ ಶೆಳೆದು ಮೆಲುವಾ ಉ । ತ್ರಮ್ಮರಾ ಜೀವರ ಧರ್ಮದೋದನಂತುಂಟೋ || ೨ || ತುರುವಾ ಮೇಯಿಸಿ ವ್ರಜಕೆ ಮರಳಿಸಿ ಗೋಪಾಲರೇಯಾ । ತರುಬಿ ಹೈ ಹೈರಣ್ಣಾ ತಡಹಿರೆನ್ನುತಾ । ತರುಬಿ ಹೈ ಹೈ ಯೆಂಬ ಸ್ವರದಿ ವೇಣು ಊದುತಾ । ಭರದಿ ಚಂಡು ಚಿಣ್ಣೆಯಾ । ಕರದ ದಂಡಿಗೇರುವಾ | ತರಳರೇನು ಭಾಗ್ಯರೊ । ಧರಣಿ ಯಾವ ಮಾನ್ಯಳೊ || ೩ || ಮಾಧವ ಮಂಜುಳ ಶಬ್ದ ಊದುವ ಸುವರ್ಣ ವೇಣು । ನಾದ ಸ್ವಾದ ಲುಬ್ಧವಾದ ಗೋವತ್ಸವು । ನಾವ ಸ್ವಾದ ಲುಬ್ಧವಾದವೆಲ್ಲ ವೃಷವು || ಆದರೀಪ ಮಾನಿನೇಯರಾಗಾಧ ತಪವಲ್ಲವೇ । ಪಾದಪ ಪಶುಗಳೆಲ್ಲ ಆ ದೇವಕ್ಕಳಲ್ಲವೇ || ೪ || ಒಪ್ಪವಾ ಗೋಧೂಳಿ ವ್ಯೆಯೊಳಪ್ಪದೊಡಿಗೆ ಚಲ್ವ । ಅಪ್ಪ ಶಾಮಲಾಮಲಾಂಗಗೆ ತುಪ್ಪಾರತಿತ್ತಿದರೂ || ಅಪ್ಪ ಶಾಮಲಾ ಮಲಾಂಗೆ ತುಪ್ಪೀರೀವ ಕರುಗಳ | ತಪ್ಪದೆ ದರ್ಪದಲಿ ರಂಬಿಸಿ । ಕ್ಷಿಪ್ರ ಹಾಲ ಕರೆದು ನಂದ ಗೋಪಾಂಗನೆಗೀವ ನ । ವ್ಮಪ್ಪ ಪ್ರಸನ್ನ ವೆಂಕಟಾಧಿಪ್ಪನೆಂದು ಕಾಂಬೆನಾ || ೫ ||

|| ಶ್ರೀ ಮಧ್ವೇಶಾರ್ಪಣಮಸ್ತು ||



ಬದಾಮಿಯಲ್ಲಿಯ ಶ್ರೀಪ್ರಸನ್ನ ವೆಂಕಟರ ಕಟ್ಟೆ

# ಪರಿಶಿಷ್ಟ ೧

## ಬಾಗಿಲಕೋಟೆಯಲ್ಲಿಯ ಶ್ರೀಪ್ರಸನ್ನ ವೆಂಕಟದಾಸರ ಮನೆ

ಬಾಗಿಲುಕೋಟೆಯಲ್ಲಿ ಘಟಪ್ರಭೆಯ ನದಿಯಿಂದ ಊರ ಕಡೆಗೆ ಬರುವ ದೊಡ್ಡ ಬೀದಿಯಲ್ಲಿ ( ಎಪ್ಪತ್ತ್ರೋಣಿಯಲ್ಲಿ ) ಒಂದು ಒಂದೂವರೆ ಫರ್ಲಾಂಗಿನ ಮೇಲೆ ಶ್ರೀಪ್ರಸನ್ನ ವೆಂಕಟದಾಸರ ಮನೆಯು ಬಲಗಡೆಗೆ ಬರುವದು. ಈ ಮನೆಯು ಪೂರ್ವಾಭಿಮುಖವಾಗಿದ್ದು, ಮುಂದಿನ ಗೋಡೆಯು ಬಿದ್ದುಹೋಗಿದೆ. ಈಗ ಆ ಸ್ಥಳದಲ್ಲಿ ಹೊಸ ಗೋಡೆಯನ್ನು ಕಟ್ಟಿದ್ದಾರೆ. ಈ ಮನೆಯು ಭದ್ರವಾಗಿದ್ದು ಮೊದಲಿನ ಪದ್ಧತಿಯ ಪ್ರಕಾರ ಕಿರಿದಾಗಿದೆ. ಗೋಡೆಗಳು ಅಗಲವಾಗಿವೆ. ಮನೆಯ ಮುಂದೆ ಅಂಗಳವಿದೆ. ಈ ಮನೆಯಲ್ಲಿ ಪಡಸಾಲೆ, ನಡುಮನೆ, ಅಡಿಗೆಯ ಮನೆ, ದೇವರ ಮನೆಗಳು ಇವೆ.

# ಪರಿಶಿಷ್ಟ ೨

## ಬಾದಾಮಿಯಲ್ಲಿಯ ಮನೆಗಳು

ಶ್ರೀಪ್ರಸನ್ನ ವೆಂಕಟದಾಸರು ಬಾಗಿಲಕೋಟೆಯವರಿದ್ದು ಬದಾಮಿಯಲ್ಲಿ ಎರಡು ಮನೆಗಳನ್ನು ಕಟ್ಟಿಸಿದರು. ಇದಕ್ಕೆ ಕಾರಣಗಳಿಲ್ಲದಿಲ್ಲ. ಬದಾಮಿಯು ದಕ್ಷಿಣ ಕಾಶಿ ಎನಿಸಿಕೊಂಡಿದೆ. ಇಲ್ಲಿ ' ಅಗಸ್ತ್ಯ ತೀರ್ಥ 'ವೆಂಬ ಹೊಂಡವಿದೆ. ಮಹಾಕೋಟೇಶ್ವರನ ಗುಡಿ ಇದೆ. ಮತ್ತು ' ಪಾಪನಾಶಿನಿ ' ಎಂಬ ಪುಷ್ಕರಣಿಯೂ ಇದೆ. ' ಹಂಪಿಯ ವರ್ಣನೆ ' ಎಂಬ ಪುಸ್ತಕದಲ್ಲಿ ಬದಾಮಿಯ ವರ್ಣನೆಯೂ ಇದೆ. ಅದರಲ್ಲಿ ಕೋಟಿ ಲಿಂಗದ ಮಹಾತ್ಮ್ಯವನ್ನು ಹೇಳಿದೆ. ಈ ಮಹಾತ್ಮ್ಯೆಯು ಐಹೊಳೆಯಲ್ಲಿರುವ ರಾಮಲಿಂಗನ ಗುಡಿಯ ಮೂಲಕ ಅಲ್ಲಿಯ ವರೆಗೆ ಎಂದು ಹೇಳಿದೆ. ಉತ್ತರ ಕಾಶಿಗಿಂತ ದಕ್ಷಿಣ ಕಾಶಿಯು ಒಂದು ಗುಂಜಿ ತೂಕ ಹೆಚ್ಚೆಂದು ಹೇಳುವದಕ್ಕಾಗಿಯೇ ಹಂಪೆಯಲ್ಲಿರುವ ಗುಂಜಿ ಮಾಧವನು ಶಂಕರನ ಮೇಲೆ ಬಲಗೈಯ್ಯನ್ನಿಟ್ಟು ಎಡಗೈಯ್ಯಲ್ಲಿ ಗುಂಜಿಯನ್ನು

ಹಿಡಿದು ನಿಂತಿದ್ದಾನೆ. ಏಕೆಂದರೆ ಉತ್ತರದಲ್ಲಿ ಏಳು ಲಿಂಗಗಳು ಕಡಿಮೆಯಿದ್ದು, ದಕ್ಷಿಣದಲ್ಲಿ ಒಂದೇ ಒಂದು ಲಿಂಗವು ಮಾತ್ರ ಕಡಿಮೆ ಇದೆ. ಮೇಲಿನ ಎಲ್ಲ ಕಾರಣಗಳಿಂದ ಬಾದಾಮಿಯ ಮಹಾತ್ಮ್ಯೆಯನ್ನು ಅರಿತು, ಮೇಲಿಂದ ಮೇಲೆ ದಾಸರು ಬಾದಾಮಿಗೆ ಬರುತ್ತಿದ್ದಿರಬಹುದು. ಆದ್ದರಿಂದಲೇ ಅಲ್ಲಿರಲು ಆಶ್ರಮ ಬೇಕೆಂದು ದಾಸರು ಮನೆಯನ್ನು ಮಾಡಿಕೊಂಡಿರಬಹುದು. ಒಂದು ಮನೆಯು ಪ್ರಸನ್ನ ವೆಂಕಟರ ಕಟ್ಟೆಯಿಂದ ಪೂರ್ವಕ್ಕೆ ೪ ಫೂಟು ದೂರದಲ್ಲಿದ್ದು ಇನ್ನೊಂದು ಮನೆಯು ಕಟ್ಟೆಯಿಂದ ೨೦೦ ಫೂಟು ದೂರದಲ್ಲಿದೆ. ಈಗ ಈ ಎರಡೂ ಮನೆಗಳೂ ಹೊಸದಾಗಿ ಕಟ್ಟಲ್ಪಟ್ಟಿವೆ.

# ಪರಿಶಿಷ್ಟ ೩

## ಬದಾಮಿಯಲ್ಲಿಯ ಶ್ರೀಪ್ರಸನ್ನ ವೆಂಕಟದಾಸ ಕಟ್ಟೆ ಹಾಗೂ ಅದರ ಹತ್ತಿರವಿದ್ದ ಮನೆ.

ಬದಾಮಿಯಲ್ಲಿ ಶ್ರೀಪ್ರಸನ್ನ ವೆಂಕಟರ ಕಟ್ಟೆ ಇದೆ. ಇದರ ಎಡಕ್ಕೆ ದಾಸರ ಮನೆ ಇದೆ. ಇದು ಬದಾಮಿಯಲ್ಲಿರುವ ಹೊಂಡದ ಹತ್ತಿರವಿದೆ. ಈ ಕಟ್ಟೆಯು ಹಾಗೂ ಮನೆಯ ಮುಂದಿನ ದಾರಿಯು ಮೇಣಬಸ್ತಿಗಳನ್ನು ನೋಡಲು ಹೋಗುವಾಗ ನಮ್ಮನ್ನು ಕೋಟೆಯ ಬಾಗಿಲಿಗೆ ಕರೆದೊಯ್ಯುವದು.

# ಪರಿಶಿಷ್ಟ ೪

## ದೇವರ ಮಾಡ

ಬಾಗಲಕೋಟೆಯಲ್ಲಿರುವ ದಾಸರ ಮನೆಯ ಪಡಸಾಲೆಯಿಂದ ಒಳಗೆ ಹೋದರೆ, ನಡುಮನೆ ಬರುವದು. ನಡುಮನೆಯಿಂದ ಒಳಗೆ ಹೋದರೆ, ದೇವರ ಮನೆ ಬರುವದು. ಈ ದೇವರ ಮನೆಯಲ್ಲಿ ಪಶ್ಚಿಮಾಭಿಮುಖವಾಗಿ ಆಗ್ನೇಯ ಮೂಲೆಯಲ್ಲಿ ಈ ದೇವರ ಮಾಡವಿದೆ. ಅರ್ಚಕನು ಪೂರ್ವಾಭಿಮುಖವಾಗ ಕುಳಿತುಕೊಂಡೇ ಪೂಜೆ ಮಾಡಲು ಬರುವಷ್ಟು ಎತ್ತರದಲ್ಲಿ ಈ ಮಾಡವಿದೆ. ಈ ಮಾಡದಲ್ಲಿ ಮಂಟಪವಿದ್ದು, ಅದರಲ್ಲಿ ಮೇಲ್ಭಾಗದಲ್ಲಿ ಶ್ರೀದೇವಿ, ಭೂದೇವಿ

ಸಮೇತನಾದ ವೆಂಕಟೇಶ ದೇವರ ಮೂರ್ತಿಯಿದೆ. ನಡುವೆ ಶಾಲಿಗ್ರಾಮ ಗಳ ಡಬ್ಬಿಯೂ ಅವರ ಕೆಳಗೆ ದಾಸರ ಆರಾಧ್ಯ ಮೂರ್ತಿಯಾದ ಬಾಲಕೃಷ್ಣನ ಮೂರ್ತಿಯೂ ಇವೆ. ದೇವರ ಎಡಭಾಗಕ್ಕೆ ಗೋಪಾಳಬುಟ್ಟಿ ಇದೆ. ದೇವರ ಎದುರಿಗೆ ಶಂಖವಿದೆ.

## ಪರಿಶಿಷ್ಟ ೫

### ಬದಾಮಿಯಲ್ಲಿ ಪ್ರಸನ್ನ ವೆಂಕಟರ ಕಟ್ಟೆ

ಶ್ರೀಪ್ರಸನ್ನ ವೆಂಕಟದಾಸರ ಕಟ್ಟೆಯು ಹೊಂಡದ ಹತ್ತಿರವಿರುವ ದಾಸರ ಮನೆಯ ಎಡಭಾಗದಲ್ಲಿದೆ. ಈಗ ಈ ಕಟ್ಟೆಯಲ್ಲಿ ಅರಳಿಯ ಮರವಿಲ್ಲ, ಬೇವಿನ ಮರ ಮಾತ್ರವಿದೆ. ಈ ಕಟ್ಟೆಯ ಗೋಡೆಯ ಮೇಲೆ ೦॥ಓಂ॥ ಶ್ರೀಪ್ರಸನ್ನ ವೆಂಕಟ ದಾಸ ರಾಜೋ ವಿಜಯತೇ ॥ ಓಂ ॥೦ ಎಂಬ ಅಕ್ಷರಗಳನ್ನು ದೇವನಾಗರಿ ಲಿಪಿ ಯಲ್ಲಿ ಕೆತ್ತಿದ್ದಾರೆ.

## ಪರಿಶಿಷ್ಟ ೬

### ಶ್ರೀಪ್ರಸನ್ನ ವೆಂಕಟದಾಸರ ತಂಬೂರಿ ಮತ್ತು ಬಡಿಗೆ

ಬಾಗಲಕೋಟೆಯಲ್ಲಿಯ ದಾಸರ ದೇವರ ಮನೆಯ ವಾಯುವ್ಯ ಮೂಲೆ ಯಲ್ಲಿ ತಂಬೂರಿಯು ಇದೆ. ಅದು ಲಕಲಕ ಹೊಳೆಯುತ್ತಿದೆ. ಅದರ ಮೇಲೆ ಮೂರು ಬೆಳ್ಳಿಯ ನಾಮಗಳಿದ್ದು ಅವುಗಳ ಎರಡೂ ಬದಿಯಲ್ಲಿ "ಪ್ರಸನ್ನ ವೆಂಕಟ" ಎಂದು ದೇವನಾಗರಿ ಲಿಪಿಯಲ್ಲಿ ಬೆಳ್ಳಿಯ ಅಕ್ಷರಗಳು ಕೆತ್ತಲ್ಪಟ್ಟಿವೆ. ಈಶಾನ್ಯ ಮೂಲೆಯಲ್ಲಿ, ಬೆಳ್ಳಿಯ ಕಟ್ಟು ಹಾಕಿದ ದಾಸರ ಬಡಿಗೆಯು ಇದೆ.

## ಪರಿಶಿಷ್ಟ ೭

### ಶ್ರೀಪ್ರಸನ್ನ ವೆಂಕಟದಾಸರಿಗೆ ದೊರೆತ ೧೨ ಹೊನ್ನಿನ ವರ್ಷಾಶನ

(ಪರಿಶಿಷ್ಟ ೭, ೮, ೯, ೧೦, ೧೧, ೧೨, ೧೩, ೧೪ಗಳ ಮೂಲ ಮರಾಠಿಯಲ್ಲಿದೆ. ಆದ್ದರಿಂದ ಅವುಗಳ ಕನ್ನಡ ಅನುವಾದ ಕೊಟ್ಟಿದೆ.)

ಶ್ರೀಸುಬರಾಜೆ ( ಘೋರಪಡೆಯ ಮನೆತನದ ಕುಲದೇವರು )

ರಾಜಶ್ರೀ ಭೀಮಾಜಿ ನಾರಾಯಣ ಸುಭೇದಾರ ಮತ್ತು ರಾಮಾಜಿ ಅನಂತ ಹೇಜೀಬ ( ವಕೀಲ ) ಪ್ರಾಂತ ಬಂಕಾಪೂರ ಗೋಸಾವಿ ಇವರಿಗೆ—

ಅಖಂಡಿತ ಅಲಂಕೃತ ರಾಜಮಾನ್ಯ ಸ್ನೇಹಾಂಕಿತ ಹಿಂದುರಾವ ಘೋರ ಪಡೆ ಮಮಲಕತ ಮದಾರ (ರಾಜ್ಯಾಧಾರ) ಇವರ ಪ್ರಣಾಮಗಳು. ಸುಹೂರ ಸನ್ ಅಬ್ಬೈನ (೪೦), ಮಯಾ ಅಲಫ (೧೧೦೦)ರಲ್ಲಿ ರಾಜಶ್ರೀ ವೆಂಕಪ್ಪಯ್ಯಾ ಕಾಖಂಡಿಕಿ ಕಾಶ್ಯಪ ಗೋತ್ರ ಆಶ್ವಲಾಯನಸೂತ್ರ ಋಕ್ ಶಾಖಾಧ್ಯಾಯಿ ವಾಸ್ತವ್ಯ ಬಾಗಡಕೋಟ (ಬಾಗಲಕೋಟೆ) ಇವರಿಗೆ ವರ್ಷಾಶನ ಹನ್ನೆರಡು (೧೨) ಹೊನ್ನು ಪ್ರಾಂತ ಬಂಕಾಪೂರ ಖಜಾನೆಯಿಂದ ಕೊಟ್ಟಿರುತ್ತದೆ. ಕಾರಣ ನೀವು ಪ್ರತಿ ವರ್ಷ ಹೊಸ ಸನದನ್ನು ಬೇಡದೆ ಈ ಹಣವನ್ನು ಅವರ ವಂಶಕ್ಕೆ ಮುಟಿಸತಕ್ಕದ್ದು. ಇದರ ನಕಲು ತೆಗೆದುಕೊಂಡು ಮೂಲ ಕಾಗದವನ್ನು ದಾಸರ ಕಡೆಗೆ ಕೊಡಬೇಕು. ತಿಳಿಯಬೇಕು. ಛ ೧೫ ಜಿಲ್ಹೆಜ ಶಕೆ ೧೬೬೧ ಸಿದ್ಧಾರ್ಥಿನಾಮ ಸಂವತ್ಸರ, ತಾರೀಖು ೩ ಮಾರ್ಚ ೧೭೪೦ ಇಸ್ವಿ ಶಕೆ ೧೬೬೧ ಫಾಲ್ಗುಣ ವದ್ಯ ೧. ದಿನ ಬರೆದುಕೊಟ್ಟದ್ದು. ಇದು ಮುಟ್ಟಿದ ತಾರೀಖು ಛ ರಬಿಲಾವಲ ಸನ್ ಮಜ ಕೂರ-ಶಕೆ ೧೬೬೨ ಜೇಷ್ಠ ಶುದ್ಧ ೫. ತಾರೀಖು ೧೯ ಮೇ ೧೭೪೦ನೇ ಇಸ್ವಿ.

## ಪರಿಶಿಷ್ಟ ೮

### ಶ್ರೀಪ್ರಸನ್ನ ವೆಂಕಟರಿಗೆ ಮೊದಲಿಗೆ ದೊರೆತ ೩ ರೂಪಾಯಿ ವರ್ಷಾಶನ

ಶ್ರೀಗುರವೇನಮಃ

ವೆಂಕಪಾ ಅಯ್ಯಾ, ವೇದಶಾಸ್ತ್ರ ಸಂಪನ್ನ ರಾಜಮಾನ್ಯರಾಜಶ್ರೀ ಅಣ್ಣೆಯಾ ಅಚಾರ್ಯ ಬಿನ್ ಶೇಷಾಚಾರ್ಯ ಕಾಖಂಡಿಕಿ ಬಾಗಲಕೋಟೆ ಸ್ವಾಮಿಯವರ ಸನ್ನಿಧಿಯಲ್ಲಿ–

ಸ್ನೇಹಾಂಕಿತ ಗೋಸಲ ಸಿಂಗಾಪಾ ಒಡೆಯರು ರಾಜೆ ಯಲಗುರದಪಾ ನಾಯೀಕ ಭೈವಿ ಗೋಪಾಳ ಭುಜಂಗ ದೇಸಾಯಿ ಕಿಲ್ಲೆ ಬದಾಮಿ ಪರಗಣೆ ನಿಡಗುಂದಾ ಮತ್ತು ನಾಡಪಟ್ಟಣ ಸೇಟಿ ಪರಗಣೆ ಯಲಬುರಗಾ ಮತ್ತು ಚೌಧರಿ ಮಾಮಲೆ ಬಾಗಲಕೋಟೆ ಇವರ ವಿಜ್ಞಾಪನೆ— ಸುಹೂರ ಸನ್ ಸೀತ ಮಯಾ ತೈನ ಅಲಫ, ನಮ್ಮ ಹಿರಿಯರು ನಿಮ್ಮ ಮುತ್ತಯ್ಯರಾದ ವೇದ ಶಾಸ್ತ್ರ ಸಂಪನ್ನ........ಸ್ವಾಮಿಯವರಿಗೆ ದರವರುಷ ಮೂರು ರೂಪಾಯಿಯಂತೆ ಕೊಟ್ಟದ್ದು ಶ್ರೀಮಂತರ ಆಳಿಕೆಯಲ್ಲಿ ಖಜಿನದಾರನು ಎರಡು ರೂಪಾಯಿ ಕೊಡುತ್ತ ಬಂದನು. ಆದರೆ ನೀವು “ ಮೊದಲು ಮೂರು ರೂಪಾಯಿ ಕೊಡು

ತ್ತಿದ್ದರು. ಮತ್ತು ಆ ಪ್ರಕಾರ ದಾಖಲೆಯು ಇದೆ ” ಎಂದು ತಿಳುಹಿದ್ದರಿಂದ ಮತ್ತೆ ನಿಮಗೆ ಮೂರು ರೂಪಾಯಿ ಕೊಟ್ಟಿದೆ. ಎಂದು ಕಾಗದ ಬರೆದು ಕೊಟ್ಟಿದೆ. ಸಂಸ್ಥಾನವು ಊರ್ಜಿತ ಸ್ಥಿತಿಗೆ ಬರಬೇಕೆಂದು ತಾವು ಆಶೀರ್ವದಿಸಬೇಕು. ಹೆಚ್ಚಿಗೆ ಏನು ಬರೆಯುವದು. ಶಕೆ ೧೭೨೭ ಕ್ರೋಧನ ಸಂವತ್ಸರ ಸನ್ ೧೨೧೫ ಫಸಲಿ. ಛ ೧೦ ಶೌವಾಲ ( ಇದನ್ನು ಬರೆದ ತಾರೀಖು ಪೌಷ ಶುದ್ಧ ೧೧— ಇ. ಸ. ೧೮೦೬ ಜಾನೇವಾರಿ ೧. )

# ಪರಿಶಿಷ್ಟ ೯

## ವರ್ಷಾಶನಗಳು

ಶ್ರೀಪ್ರಸನ್ನ ವೆಂಕಟದಾಸರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯ, ರಾಮಾಚಾರ್ಯ ಮತ್ತು ಬಾಳಾಚಾರ್ಯ ಈ ಮೂವರು ಹಿಂದಿನಿಂದ ಬಂದ ವರ್ಷಾಶನಗಳನ್ನು ತಮ್ಮತಮ್ಮೊಳಗೆ ಪಾಲುಮಾಡಿಕೊಂಡವುಗಳ ಪಟ್ಟಿ.

**ವರ್ಷಾಶನದ ತಪಶೀಲು –**

| | | | |
|---|---|---|---|
| ೩೩—೩—೦ | ಕಸಬೆ ಬಾಗಲಕೋಟ | ೦–೧೪—೦ | ಶಿರೂರ |
| ೩–೧೨—೦ | ಹುಬ್ಬಳ್ಳಿ | ೦–೧೩—೯ | ಪರಬನಿ |
| ೩–೧೨—೦ | ತಡಸ | ೦—೬—೦ | ನೀರಲಕೇರಿ |
| ೨—೮—೦ | ಮಿಶ್ರಿಕೋಟಿ | ೦—೮—೦ | ಬ್ಯಾಣ್ಣೂರ |
| ೦–೧೫—೦ | ಕಲಘಟಗಿ | ೦—೬—೦ | ಹ್ಯರಕಲ್ಲ |
| | | ೨—೧೧—೦ | ಮಾರನಬಸರಿ |
| ೪೪—೨—೦ | | ೫–೧೦—೯ | |
| ೫–೧೦—೯ | | | |

ಒಟ್ಟು ೪೯–೧೨—೯

| ಅಣ್ಣಯ್ಯಾಚಾರ್ಯ | ರಾಮಾಚಾರ್ಯ | ಬಾಳಾಚಾರ್ಯ |
|---|---|---|
| ೧೧- ೧-೦ ಬಾಗಲಕೋಟ | ೧೧- ೧-೦ ಪೋಥಾ | ೧೧- ೧-೦ ಪೋಥಾ |
| ೨- ೮-೦ ಮಿಸರಿಕೋಟ | ೩-೧೨-೦ ಹುಬ್ಬಳ್ಳಿ | ೮-೧೫-೦ ಕಲಘಟಗಿ |
| ಸಾದಿಲವಾರ | ೩-೧೨-೦ ತಡಸ | ಸಾದಿಲವಾರ |
| ೦-೧೪-೩ ಮಾರನಬಸರಿ | ಸಾದಿಲವಾರ | ೮-೧೪-೦ ಶಿರೂರ |
| ೦-೧೩-೯ ಪರೋತಿ | ೦-೧೪-೩ ಮಾರನಬಸರಿ | ೮-೧೯-೬ ಮಾರನಬಸರಿ |
| ೦- ೬-೯ ಕಿರುಕಳ | ೦- ೬-೯ ಕಿರುಕಳ | ೦- ೬-೬ ಕಿರುಕಳ |
| ೧೫-೧೧-೯ | ೧೯-೧೪-೦ | ೧೪- ೩-೦ |
| | ೧೫-೧೧-೯ | |
| | ೧೪- ೩-೦ | |
| | ೪೯-೧೨-೦ | |

ಈ ತಪಶೀಲಿನಿಂದ ಶ್ರೀಪ್ರಸನ್ನ ವೆಂಕಟದಾಸರಿಗೆ ಕಿರುಕಳ ಹಾಗೂ ಸಾದಿಲವಾರ ಮತ್ತು ಎಷ್ಟೆಷ್ಟು ದೊರೆಯುತ್ತಿತ್ತೆಂಬುವದು ತಿಳಿಯುವದು.

# ಪರಿಶಿಷ್ಟ ೧೦

## ಪ್ರಸನ್ನ ವೆಂಕಟದಾಸರಿಗೆ ದೊರೆತ ಮುಚಗಂಡಿ ಹೊಲದ ದಾನಪತ್ರ

ಶ್ರೀವೆಂಕಟೇಶ ಪ್ರಸನ್ನ

ಶ್ರೀಮಂತ ಮೊಕದಮ ಮತ್ತು ಕುಲಕರ್ಣಿ ಮೌಜೆ ಮುಚಖಡಿ (ಮುಚಗಂಡಿ) ಇವರಿಗೆ--

ನಾನಾ ಮೇಲಗಿರಿ ದೇಸಾಯಿ ಸರದೇಸಾಯಿ ಮಾಮಲ ಬಾಗಡಿಕೋಟ (ಬಾಗಲಕೋಟೆ) ಸೂರ ಸನ್ ಸಲಾಸ ಅಶರೀನ (೨೪) ಮಿಯಾ ಆಲಫ (೧೧೦೦) (ಅಂದರೆ ಸೂರಸನ್ ೧೧೨೪), ಬರೆಯುವದೇನೆಂದರೆ—ವೇದಶಾಸ್ತ್ರ ಸಂಪನ್ನ ರಾಜಶ್ರೀ ವೆಂಕಪಯ್ಯಾ ಕಾಕೀಖಂಡೀಕೀ (ಕಾಖಂಡಕಿ) ಇವರಿಗೆ—ಮೌಜೆ ಮುಚಗಂಡಿ ಊರ ಮುಂದಿನ ಹಾಳು ಹೊಲ ನಾಲ್ಕು ಗಿದ್ದಸ ಧಾನ್ಯ

ಹಾಕುವಷ್ಟು ಹೊಲವನ್ನು ಇನಾಮು ಕೊಟ್ಟಿದೆ. ಈ ಹೊಲಕ್ಕೆ ಜೂಡಿ ಪಟ್ಟಿ ಮತ್ತು ಹುಗ್ಗಿ ಮುಂತಾದ್ದನ್ನು ತೆಗೆದುಕೊಳ್ಳತಕ್ಕದ್ದಲ್ಲ. ಎಲ್ಲವನ್ನೂ ಸೂಟ ಮಾಡಿ ಹೊಲವನ್ನು ಇನಾಮು ಕೊಟ್ಟಿದೆ. ಇದರ ನಕಲು ತೆಗೆದು ಕೊಂಡು ಮೂಲ ಪ್ರತಿಯನ್ನು ( ದಾಸರಿಗೆ ) ಕೊಡಬೇಕು. ಇದರಲ್ಲಿ ಏನೂ ಶಂಕೆಯನ್ನು ತೆಗೆದುಕೊಳ್ಳದೆ ಹೊಲವನ್ನು ಕೊಡತಕ್ಕದ್ದು. ಛ ೨೧ ಮಾಹೆ ರಜಬ. ( ಬರೆದು ಕೊಟ್ಟ ತಾರೀಖು ೧೬ ಎಪ್ರಿಲ್ ೧೭೨೩. ಶಕೆ ೧೬೪೫ ಚೈತ್ರ ವದ್ಯ ೭. )

## ಪರಿಶಿಷ್ಟ ೧೧

### ಶ್ರೀಪ್ರಸನ್ನ ವೆಂಕಟದಾಸರಿಗೆ ದೊರೆತ ತುರ್ಚಿಗೇರಿ ( ತುಳಸಿಗೇರಿ ) ಹೊಲದ ದಾನಪತ್ರ

ಶ್ರೀ

ಎಂಡಿಗೇರಿ — ತೀರ್ಥಸ್ವರೂಪ ವೇದಶಾಸ್ತ್ರ ಸಂಪನ್ನ ರಾಜಮಾನ್ಯ ರಾಜೇಶ್ರೀ ವೆಂಕಪ್ಪೈಯಾ ಕಾಖಂಡೀಕೀ ಸ್ವಾಮಿ ಇವರ ಚರಣಾರವಿಂದದಲ್ಲಿ ( ವಿಜ್ಞಾಪನೆ )

ಸೇವಕನಾದ ಮತ್ತು ಧರ್ಮಪಾಲಕನಾದ ಇಮ್ಮಡಿ ಹಣಮಿನಾಯಕನ ಬಿನ್ನಹವೇನಂದರೆ— ನಮ್ಮ ಕಡೆಯಿಂದ ತಮ್ಮ ಸೇವೆಯಾಗಬೇಕೆಂದು ತುರ್ಚಿ ಗೇರಿ ( ತುಳಸೀಗೇರಿ )ಯಲ್ಲಿ ಎರಡು ಮಾರು ಇದ್ದ ನಮ್ಮ ಇನಾಮು ಹೊಲ ವನ್ನು ತಮಗೆ ಇನಾಮು ಹಾಕಿ ಕೊಟ್ಟಿದೆ. ಸೂರ್ಯ ಚಂದ್ರರು ಇರುವ ವರೆಗೆ ತಮ್ಮ ವಂಶಸ್ಥರ ಕಡೆಗೆ ಇದು ಇರತಕ್ಕದ್ದು. ತಾವು ಸ್ನಾನ, ಸಂಧ್ಯಾವಂದನೆ, ವೈಶ್ವದೇವಗಳನ್ನು ಮಾಡಿ ಊಟ ಮಾಡುತ್ತ ನಮಗೆ ಆಶೀರ್ವಾದ ಮಾಡುತ್ತ ಮತ್ತು ನಮ್ಮ ಸುಖವನ್ನು ಬಯಸುತ್ತ ಇರತಕ್ಕದ್ದು. ಇದಕ್ಕೆ ಯಾರೂ ಎರಡು ಬಗೆಯಲಾರರು. ಎಂದು ಬರಕೊಟ್ಟ ದಾನಪತ್ರ ಸಹಿ. ಸಲಾಸ ಅಶರೀನ ( ೨೪ ) ಮಯಾ ಅಲಫ ( ೧೧೦೦ ) ಅಂದರೆ ಇ. ಸ. ೧೭೨೩ ಶೋಭನ ಕೃತ ನಾಮ ಸಂವತ್ಸರ ಛ ೨೦ (ತಾರೀಖು ೧೫) ಮಾಹೆ ರಜಬ (ಮಾಹೆ ಎಪ್ರಿಲ್)

( ಅಂದ ಬಳಿಕ ಈ ದಾನಪತ್ರ ಬರೆದ ತಾರೀಖು ೧೫ ಮಾಹೆ ಎಪ್ರಿಲ್ ಸನ್ ೧೭೨೩ ಎಂದಾಯಿತು. )

## ಪರಿಶಿಷ್ಟ ೧೨

### ಶ್ರೀಬಾಳಾಚಾರ್ಯರಿಗೆ ದೊರೆತ ರಾಮುಕುಂಟಿ ಹೊಲದ ದಾನಪತ್ರ

ಶ್ರೀ

ಸ್ವಸ್ತಿ ಶ್ರೀ ಶಾಲಿವಾಹನ ಶಕೆ ಯುವನಾಮ ಸಂವತ್ಸರದಲ್ಲಿ ವೇದಶಾಸ್ತ್ರ ಸಂಪನ್ನ ರಾಜಶ್ರೀ ಋಕ್ ಶಾಖಾಧ್ಯಾಯಿ ಕಾಶ್ಯಪ ಗೋತ್ರೋದ್ಭವ ಕಾಖಂಡಿಕಿ ಬಾಳಾಚಾರ್ಯರಿಗೆ—

ಪ್ರತಿ ಅಚನೂರ ಕೃಷ್ಣನು ಬರೆದುಕೊಟ್ಟ ದಾನಪತ್ರ........ ನಮ್ಮ ಹಿರಿಯರು ಯಾತ್ರಾ ಮಾಡಿದ ಸಮಯದಲ್ಲಿ ಭೂದಾನ ಸಂಕಲ್ಪ ಮಾಡಿದ್ದರು. ತತ್ ಪ್ರಯುಕ್ತ ನಮ್ಮ ಇನಾಮ ಭೂಮಿ ರಾಮುಕುಂಟಿ ಹೊಲವನ್ನು ಕೃಷ್ಣಾರ್ಪಣ ಪೂರ್ವಕ ನಿಮಗೆ ಕೊಟ್ಟಿದ್ದೇವೆ. ಇದನ್ನು ನೀವು ವಂಶಪರಂಪರ ಆಚಂದ್ರಾರ್ಕ ಸ ಖದಿಂದ ಅನುಭೋಗಿಸಿಕೊಂಡು ಇರುವುದು. ಇದಕ್ಕೆ ನಮ್ಮ ವಂಶದಲ್ಲಿ ಯಾರಾದರೂ ಅನ್ಯಥಾ ಮಾಡಿದರೆ ಮಾತ್ರ ಪಿತೃದ್ರೋಹ ಮಾಡಿದಂತೆ. ನಾನು ತ್ರಿಕರಣಪೂರ್ವಕ ದಾನಪತ್ರ ಬರೆದು ಕೊಟ್ಟಿದ್ದೇನೆ. ಸ್ವಹಸ್ತಾಕ್ಷರದಿಂದ್ರ ಬರೆದದ್ದು. ಫಾಲ್ಗುಣ ವದ್ಯ ಸಪ್ತಮಿ ಬುಧವಾರ ಬರೆದು ಕೊಟ್ಟ ಪತ ಶಕೆ ೧೭೩೭.

## ಪರಿಶಿಷ್ಟ ೧೩

### ವರ್ಷಾಶನ ಪುಸ್ತಕಗಳ ಪಟ್ಟಿ

ಶ್ರೀ ಲಕ್ಷ್ಮಿ ವೆಂಕಟೇಶ ಪ್ರಸನ್ನ

ಬಾಲನ ಪಾಲಿಗೆ ಬಂದದ್ದು. ದೇವರು ಪುಸ್ತಕ ವ್ಹಲಾ ಮನಿ ವರ್ಷಾಶನದ ಯಾದಿ— ತುರ್ಚಿಗೇರಿ ವ್ಹಲಾ, ಮುಚಖಿಂಡಿ ವ್ಹಲಾ ವರ್ಷಾಶನ–

ಬ್ಯಾಹಟ್ಟಿ ವರಹ ೧೨, ಶಿರೂರ ರೂಪಾಯಿ ೨, ಸವುತಪರವತಿ ರೂಪಾಯಿ ೧, ಮಾರನಬಸರಿ ರೂಪಾಯಿ ೧, ಬಂಕಾಪುರದ ವರಹ ೧, ಕಲಘಟಿಗಿ ವರಹ ೧, ಬಾಗಲಕೋಟಿ ಕಸಬೆಯಿಂದ ರೂಪಾಯಿ ೧೦.

ಸಾಲ :— ವ್ಯಂಕಪ್ಪ ಕೋಮಟೀ ೬, ಬಾಲದಾಸ ೫, ಥಾಗಶೆಟ್ಟಿ ಸಂಗಪ್ಪ ೪, ಅಮರಶೆಟ್ಟಿ ಕರಿಬಸಪ್ಪ ೧೩, ಗೋಲಪ್ಪ ಬ್ಯಾಳಿ ೫, ಗದಿಗ್ಯಪ್ಪ ೨, ಗುಂಡಾಚಾರ್ಯ ೧, ಸುಂದರಿ ೪೪, ಅದ್ರುಶಪ್ಪ ೨೫.

ಪುಸ್ತಕ :— ೧ ಪ್ರಥಮಸ್ಕಂದ ಭಾಗವತ ಟಿಪಂ, ೧ ಮಹಾಭಾರತ ತಾತ್ಪರ್ಯ ನಿರ್ಣಯ ಟೀಕಾ, ೧ ಬ್ರಹ್ಮಸೂತ್ರ ಭಾಷ್ಯ, ೧ ಐದು ಪ್ರಕರಣ, ೧ ತತ್ವೋದ್ಯೋತ ಟೀಕಾ, ೧ ಆಥರ್ವಣ ಟೀಕಾ, ೧ ಅಮರ ತ್ರಿಕಾಂಡಾ, ೧ ಎಲ್ಲ ಉಪನಿಷದ್ಭಾಷ್ಯ, ೧ ಭಾಗವತ ಚತುರ್ಥಸ್ಕಂದ, ೧ ಷಷ್ಟಸ್ಕಂದ, ೧ ತರ್ಕಭಾಷಾ ತರ್ಕಸಂಗ್ರಹ, ೧ ದೀಪಿಕಾ ಕೌಮುದಿ, ಪಂ, ದ್ವಾದಶ ಸ್ತೋತ್ರ ಟೀಕಾ ಕಿರುಕಳ ಕೂಡಿ ೨೦೦೦ ಗೀತಾ ಪ್ರತಿ.

ತಂಬಿಗಿ ತಪೇಲಿ ಯಾದಿ :— ೧ ಮೂರು ಪಾವಿನ ತಪೇಲಿ ತಾ (ತಾಮ್ರ), ೧ ಕೊಡ ತಾ., ೧ ದೊಡ್ಡ ಪರಾತ ತಾ., ೧ ಬಿಂದಗಿ ತಾಂ., ೧ ಕಾಚಿಟ್ಟಿ ತಪೇಲಿ, ೧ ಹಿತ್ತಾಳಿ ತಾಬಾಣ, ೧ ಕಬ್ಬಿಣ ಸವಟು, ೧ ಅರಕಾ (ಎರಕಿನ) ಚಿಟ್ಟಿ ತಪೇಲಿ, ೧ ಬಳಕಿ ತಂಬಿಗಿ, ೧ ಹಿತ್ತಾಳಿ ಬೋಗೋಣಿ, ೧ ಕಬ್ಬಿಣ ಹಂಚು, ೧ ಮತ್ತೊಂದು ಎರಕಿನ ಚಿ.

# ಪರಿಶಿಷ್ಟ ೧೪

## ಶ್ರೀಪ್ರಸನ್ನ ವೆಂಕಟದಾಸರ ವಂಶಾವಳಿ

ಶ್ರೀನಿವಾಸಾಚಾರ್ಯ ಬಿನ್ ಅಣ್ಣಯಾಚಾರ್ಯ ಕಾಖಂಡಿಕಿ ಇವರ ಮನೆತನದ ( ವಂಶ ) ವೃಕ್ಷ. ತಾ. ಬಾಗಲಕೋಟ ಸನ್ ೧೮೭೧ ಇಸ್ವಿ.



# ಪ್ರಸನ್ನ ವೆಂಕಟರ ಅನುವಂಶಿಕರು

ಅಣ್ಣಯ್ಯಾಚಾರ್ಯರು:--ದಾಸರ ವಂಶದಲ್ಲಿ ಅವರ ತರುವಾಯ ಹೆಚ್ಚಾಗಿ ಪ್ರಸಿದ್ಧಿಗೆ ಬಂದವರೆಂದರೆ ಅಣ್ಣಯ್ಯಾಚಾರ್ಯರು. ಶ್ರೀಪ್ರಸನ್ನ ವೆಂಕಟದಾಸರಿಗೆ ವೆಂಕಟ ಕೃಷ್ಣಾಚಾರ್ಯರೆಂಬ ಮಕ್ಕಳಿದ್ದು, ಅವರು ದಾಸರಂತೆ ವೇದಶಾಸ್ತ್ರ ಸಂಪನ್ನರಾಗಿದ್ದರು. ವೆಂಕಟಕೃಷ್ಣಾಚಾರ್ಯರಿಗೂ ಅಚನೂರ ಕೃಷ್ಣನಿಂದ ರಾಮಕುಂಟೆ ಎಂಬ ಹೊಲವು ದಾನವಾಗಿ ದೊರಕಿದೆ. ಇವರೇನು ಅಷ್ಟು ಪ್ರಸಿದ್ಧಿಗೆ ಬಂದವರಲ್ಲ. ಇನ್ನು ವೆಂಕಟಕೃಷ್ಣಾಚಾರ್ಯರಿಗೆ ಶೇಷಾಚಾರ್ಯನೆಂಬ ಒಬ್ಬ ಮಗನಿದ್ದು, ಈತನ ಬಗ್ಗೆ ಏನೂ ತಿಳಿಯುವದಿಲ್ಲ. ದಾಸರಿಗೆ ಮೂವರು ಮರಿಮಕ್ಕಳು. ಅಣ್ಣಯ್ಯಾಚಾರ್ಯ, ರಾಮಾಚಾರ್ಯ ಮತ್ತು ಬಾಳಾಚಾರ್ಯ. ರಾಮಾಚಾರ್ಯ ಮತ್ತು ಬಾಳಾಚಾರ್ಯರು ಪ್ರಸಿದ್ಧ ಪುರುಷರಲ್ಲ. ಆದರೆ ಅಣ್ಣಯ್ಯಾಚಾರ್ಯರು ಮಾತ್ರ ಕರ್ನಾಟಕದಲ್ಲಿ ಹೆಸರಾದವರು. ಇವರ ಬಗ್ಗೆ ಕೆಳಗಿನ ಸಂಗತಿಯು ತಿಳಿದು ಬಂದಿದೆ.

ಮಂಗಳವೇಢೆ ವಿಠ್ಠಲರಾಯರೆಂಬ ಬ್ರಿಟಿಷ ಸರಕಾರದ ಡೆಪ್ಯುಟಿ ಕಲೆಕ್ಟರರು ಬಾಗೇವಾಡಿಯಲ್ಲಿದ್ದಾಗ ಬರೆದಿಟ್ಟ ಸಂಗತಿಯಿಂದ ತಿಳಿದು ಬರುವದೇನಂದರೆ-- ಒಂದು ದಿನ ವಿಠ್ಠಲರಾಯರ ಸ್ವಪ್ನದಲ್ಲಿ "ನಿನ್ನ ಬಳಿಗೆ ದೂರ್ವಾಸರು ಬರುವರು. ಅವರನ್ನು ಸತ್ಕರಿಸು, ಅವರಿಂದ ಜ್ಞಾನವನ್ನು ಪಡೆ" ಎಂದು ಅವರಿಗೆ ಸೂಚನೆಯಾಯಿತು. ಇದರ ಮೇಲೆ ವಿಠ್ಠಲರಾಯರು ವಿಶ್ವಾಸವಿಡಲಿಲ್ಲ. ಮೂರನೆಯ ದಿನ ರಾತ್ರಿ ಮತ್ತೆ ಸ್ವಪ್ನದಲ್ಲಿ "ಬಂಗವರನ್ನೇ ದೂರ್ವಾಸರೆಂದು ತಿಳಿ, ಆದರಿಸು" ಎಂಬ ಮಾತನ್ನು ವಿಠ್ಠಲರಾಯರು ಮತ್ತೆ ಕೇಳಿದರು. ಮರುದಿನ ರಾಯರು ಸೂಚನೆಯಂತೆ ಪಕ್ವಾನ್ನಗಳನ್ನು ಮಾಡಿ ದಾರೀ ಕಾಯುತ್ತ ಕುಳಿತರು. ದೂರ್ವಾಸ ವೇಷಧಾರಿಯಾದ ಅಣ್ಣಯ್ಯಾಚಾರ್ಯರು ಬಂದರು. ರಾಯರು ಅವರನ್ನು ಆದರದಿಂದ ಬರಮಾಡಿಕೊಂಡರು. ಊಟ ಉಪಚಾರವಾದ ನಂತರ ರಾಯರು ಅವರಿಗೆ "ತಾವು ದೂರ್ವಾಸರಲ್ಲವೆ?" ಎಂದು ಕೇಳಿದರು. ಆಗ ಅಣ್ಣಯ್ಯಾಚಾರ್ಯರು "ನಮ್ಮ ಸ್ವರೂಪ ವ್ಯಕ್ತವಾಯಿತು. ಇನ್ನು ಈ

ದೇಹದಲ್ಲಿ ಸಾವು ಇರುವದಿಲ್ಲೆಂದು ಹೇಳಿದರಂತೆ. ಈ ಪ್ರಕಾರ ಇವರ ಮಹತಿಯು ಕಂಡುಬರುವದು. ಪ್ರಸನ್ನ ವೆಂಕಟರಿಗೆ ಒಂದು ವರ್ಷಾಶನದಲ್ಲಿ ೩ ರೂಪಾಯಿಗಳು ದೊರೆತಿದ್ಧು ಅವುಗಳಲ್ಲಿಯ ಎರಡು ರೂಪಾಯಿ ಅಣ್ಣಯ್ಯಾಚಾರ್ಯರಿಗೆ ದೊರೆಯಹತ್ತಿದವು. ಮುಂದೆ ೩ ರೂಪಾಯಿಯಿಂದ ೨ ರೂಪಾಯಿಗೆ ಯಾವಾಗ್ಗೆ ಬಂದಿತೋ ತಿಳಿಯುವದಿಲ್ಲ. ಆದರೆ ಅಣ್ಣಯ್ಯಾಚಾರ್ಯರು ತಮ್ಮ ಪ್ರಯತ್ನದಿಂದ ೩ ರೂಪಾಯಿಗಳನ್ನು ಮತ್ತೆ ಆರಂಭ ಮಾಡಿಸಿದರು. ಇವರು ದಾನಶೂರರೂ ಇದ್ದರು. ಒಂದು ಹೊಲವನ್ನು ಇವರು ದಾನ ಮಾಡಿದ್ದಾರೆ. ಇವರ ತಮ್ಮಂದಿರಾದ ಬಾಳಾಚಾರ್ಯರೂ ಅದಕ್ಕೆ ಒಪ್ಪಿಗೆ ಕೊಟ್ಟಿದ್ದಾರೆ. ಒಟ್ಟಾರೆ ನೋಡಿದರೆ ಪುರಂದರದಾಸರ ನಾಲ್ವರು ಮಕ್ಕಳಂತೆ ಪ್ರಸನ್ನ ವೆಂಕಟರ ಮರಿ ಮಕ್ಕಳೂ ವಂಶಸ್ಥರೂ ಹೆಸರಾದವರೂ ಆಗಿದ್ದಾರೆ.

---

# ಆಧಾರ ಗ್ರಂಥಗಳು


**ಕನ್ನಡ** **ಲೇಖಕರು**

೧. ಕರ್ನಾಟಕ ಭಕ್ತಿವಿಜಯ ಭಾಗ ೧-೨ ಬೇಲೂರ ಕೇಶವದಾಸರು
೨. ಹರಿದಾಸರ ಸಾಹಿತ್ಯ ,, ,,
೩. ಹರಿಭಕ್ತಿಸುಧೆ ಶ್ರೀ. ರಂಗರಾವ ದಿವಾಕರ, M. A., LL. B.
೪. ನಾರದ ಭಕ್ತಿಸೂತ್ರಗಳು ,, ,,
೫. ಸಾಹಿತ್ಯ ಸಂಶೋಧನೆ ಪ್ರೊ. ದ. ರಾ. ಬೇಂದ್ರೆ, M.A.
೬. ಕರ್ನಾಟಕದ ಧರ್ಮಗಳು ಡಾ. ಶಿ. ಚ. ನಂದೀಮಠ, M.A.Ph.D.
೭. ಕನ್ನಡ ಸಂಸ್ಕೃತಿ ಡಾ. ಎ. ಪಿ. ಕರಮರಕರ
೮. ಕವಿ ಕನಕದಾಸರು ಶ್ರೀ. ಶೇಷಾಚಾರ್ಯ ಕಟ್ಟಿ
೯. ಕರ್ನಾಟಕ ಸಂಗೀತಶಾಸ್ತ್ರ ವಿಮರ್ಶೆ
ಆಸ್ಥಾನ ವಿದ್ವಾನ್ ಶ್ರೀ. ಕೃಷ್ಣಾಚಾರ್ಯ ಹುಲಗೂರ
೧೦. ಶ್ರೀಕೃಷ್ಣ ಜಯಂತಿ ಕಥಾ ಮನೋಹರ ವಿಠಲ
೧೧. ಪುರಂದರದಾಸರು ಮತ್ತು ಅವರ ಕೀರ್ತನೆಗಳು
ಶ್ರೀ. ಜಿ. ವರದರಾಜರಾವ, M.A.
೧೨. ವಿಜಯನಗರ ಸಾಮ್ರಾಜ್ಯ
ಶ್ರೀ. ಪಾಂ. ಭೀ. ದೇಸಾಯಿ, B. A. ( Hons. )
೧೩. ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ
ಸಂಪುಟ ೧,೨,೩ (ಸುಬೋಧ ಪ್ರಕಟನಾಲಯ)
೧೪. ದಾಸರ ಪದಗಳ ಸಂಗ್ರಹ (ಪ್ರಕಾಶಕ—ಆಬಾಜಿ ರಾಮಚಂದ್ರ ಸಾವಂತ)
೧೫. ಪ್ರಸನ್ನ ವೆಂಕಟರ ಭಾಗವತ ಶ್ರೀ. ಕೌಜಲಗಿ ಬಂಡೇರಾಯರು
೧೬. ಶ್ರೀಕೃಷ್ಣ ಬಾಲಲೀಲೆ ಶ್ರೀಮದ್ವಾದಿರಾಜತೀರ್ಥರು
೧೭. ಸತ್ಕಥಾ ಶ್ರೀ. ಕಮಲಾಪೂರ ಭೀಮರಾಯರು
೧೮. ಪ್ರಸನ್ನ ವೆಂಕಟರ ಕೀರ್ತನೆಗಳು ಶ್ರೀ. ಕೌಜಲಗಿ ಬಂಡೇರಾಯರು
೧೯. ದಾಸರ ಪದಗಳ ಸಂಗ್ರಹ ಭಾಗ ೧-೨
೨೦. ಕರ್ನಾಟಕ ಸಾಹಿತ್ಯಪತ್ರಿಕೆಗಳು

ಇಂಗ್ಲಿಷ — by

1. Mystic Teachings of Haridasas of Karnatak — Dr. Karmarkar & Sjt. N. Kalamadani
2. Heritaga of Karnatak — Prof. R. S. Mugali
3. Vaishnavism, Saivism & Minor Religious Systems — Shri R. G. Bhandarkar
4. Three Acharyas — G. Nateshan & Co.
5. Chaitanya—His life & Teaching — Sir J. Sarkar
6. Early History of the Vaishnava Sect — Dr. Hemchandra Ray Chaudhari M. A., Ph. D., Dr. H. R. C.
7. History of Fine Art in India & Cylon — V. Smith
8. Hymns of Alwars — J. S. M. Hooper
9. Vaishnava Reforms — T. Rajagopalachar
10. J. R. A. S. Oct. 1920 — Sir George Grierson
11. Cultural Heritage of India Vol. II — Ramakrishna Centenary Committee
12. Eary History of Vaishnava Faith & Movement in Bengal — S. K. DE.
13. Mysticism in Maharashtra — Sjt. R. D. Ranade, M. A.
14. Humble Memorial of Major Sardar Narasingrao alias Babasahib Gharpade
15. Dharma Tatwa Number — Kalyan Publications Gorokhapur

ಮರಾಠಿ

೧. ಹಿಸ್ಟರಿ ಆಫ್ ಮಾಡರ್ನ ಇಂಡಿಯಾ ಭಾಗ ೨ ಮರಾಠಾ ಕಾಲ — ಜಿ. ಎಸ್. ಸರದೇಸಾಯಿ
೨. ಮಧ್ಯಯುಗೀನ ಚರಿತ್ರಕೋಶ — ಸಿ. ವಿ. ಚಿತ್ರಾವ
೩. ಪೇಶವಾಯಿ ಬಖರ ಭಾಗ ೧–೨

**ಲೇಖಕರು**

೪. ಸಾನ್ವಯ ಸಾರ್ಥ ಶ್ರೀಮದ್ಭಾಗವತಸ್ಕಂದ ೧೦ ವಾ ಪೂರ್ವಾರ್ಧ
ಪ್ರಕಾಶಕ ದಾಮೋದರ ಸಾವಳಾರಾಮ ಮತ್ತು ಮಂಡಳಿ
೫. ಮನಹರ ಸಂಗೀತ ರತ್ನಾವಳಿ — ಮನಹರ ಬರ್ವೆ
೬. ಸಂಗೀತಾಚೆ ಆತ್ಮಚರಿತ್ರ — ಗಣೇಶ ಹರಿ ರಾನಡೆ, B.Sc.
೭. ಶ್ರೀಮದ್ಭಾಗವತ ಭಾಗ ೨ (ಮರಾಠಿ ಸುರಸ ಭಾಷಾಂತರ)
ಸಂಶೋಧಕ ಬಾಳಕೃಷ್ಣ ಗೋವಿಂದ ಶಾಸ್ತ್ರಿ ಉಪಾಸನಿ
೮. ಮರಾಠಿ ಭಾಗವತ
೯. ಮರಾಠಿ ಜ್ಞಾನಕೋಶ ಭಾಗ ೧೮, ೨೦, ೨೨
೧೦. ಜ್ಞಾನೇಶ್ವರಿ
೧೧. ಮರಾಠಿ ವಾಙ್ಮಯಾಚಾ ಇತಿಹಾಸ ಭಾಗ ೧,೨,೩ — ಶ್ರೀ. ಪಾಂಗರಕರ

**ಸಂಸ್ಕೃತ**

೧. ಭಾಗವತ ದಶಮಸ್ಕಂದ ಪೂರ್ವಾರ್ಧ
೨. ಭಗವದ್ಗೀತಾ
೩. ಸಂಗೀತ ರತ್ನಾಕರ

**ಉರ್ದು**

1. History of Bijapur — Bashir Ahammad
2. Ibrahimnama
3. Shikandarnama

———